ಬಿಸಿಲ

ಸೆಪ್ಟಂಬರ್ 1998 ರೂ. 10

■ ವಾಣಿಜ್ಯ ■ ವಿಕಾಸ ■ ಮಾಹಿತಿ ■ ಸಂಪರ್ಕ

ಮಾಸಪತ್ರಿಕೆ





# ರಾಜಕಾರಣಿಗಳ ಪ್ರಣಯ

ಎಚ್ಚರಿಕೆ ! ಇದು ಏಡ್ಸ್‌ಗಿಂತ ಭೀಕರ!

ಬಡ ಜಿಲೆಗಳಿಗೆ ತಡವಾದ ಸ್ವಾತಂತ್ರ್ಯ

## ವೈವಾಹಿಕ ವರ್ಗೀಕೃತ ಜಾಹೀರಾತು

### ವೈವಾಹಿಕ :

ನೀವು ನಿಮ್ಮ ಅಭಿರುಚಿಗೆ ತಕ್ಕ ಅನುರೂಪದ ವರ ಅಥವಾ ವಧುವಿಗೆ ಹುಡುಕಾಟ ನಡೆಸಿದ್ದೀರಾ? ನಿಮ್ಮ ಮಗ ಅಥವಾ ಮಗಳಿಗೆ ಸರಿಹೊಂದುವ, ನಿಮ್ಮ ಮನೆತನದ ಘನತೆಗೆ ತಕ್ಕ ಸಂಬಂಧಕ್ಕಾಗಿ ಕಾತರಿಸಿದ್ದೀರಾ?

ಹಾಗಾದರೆ 'ಬದುಕು' ಮಾಸಪತ್ರಿಕೆಯಲ್ಲಿ ಪ್ರಾರಂಭಿಸುತ್ತಿರುವ ವೈವಾಹಿಕ-ವರ್ಗೀಕೃತ ಜಾಹೀರಾತು ಅಂಕಣವನ್ನು ಸದುಪಯೋಗಪಡಿಸಿಕೊಳ್ಳಿರಿ. ಸಭ್ಯ-ಸಜ್ಜನ ಓದುಗರ ವಲಯದಲ್ಲಿ ಜನಪ್ರಿಯವಾಗಿರುವ 'ಬದುಕು' ವೈವಾಹಿಕ ಸಂಪರ್ಕಕ್ಕೆ ಪರಿಣಾಮಕಾರಿ ಸೇತುವೆಯಾಗಲಿದೆ.

### ವರ್ಗೀಕೃತ :

ವ್ಯಾಪಾರಿಗಳು, ಉದ್ಯಮಿಗಳು, ಶಾಲೆಕಾಲೇಜಿನವರು ತಮ್ಮ ವಸ್ತುಗಳ ಬಗ್ಗೆ, ಸೇವೆಗಳ ಬಗ್ಗೆ ವರ್ಗೀಕೃತ ಜಾಹೀರಾತು ನೀಡಬಹುದು. ಅತ್ಯಂತ ವಿಶಿಷ್ಟ ಓದುಗ ವರ್ಗವನ್ನು ಸೃಷ್ಟಿಸಿಕೊಂಡಿರುವ 'ಬದುಕು' ಮಾಸಪತ್ರಿಕೆ ನಿಮ್ಮ ಜಾಹೀರಾತಿಗೆ ನಿರೀಕ್ಷಿತ ಪ್ರತಿಕ್ರಿಯೆ ತರುವುದು ಗ್ಯಾರಂಟಿ. ಉದ್ಯೋಗಿಗಳನ್ನು ಹುಡುಕುತ್ತಿರುವ ಉದ್ಯಮಿಗಳು ಹಾಗೂ ನೌಕರಿಗಾಗಿ ಕಾತರಿಸಿರುವ ನಿರುದ್ಯೋಗಿಗಳ ಸಂಪರ್ಕಕ್ಕೆ ಈ ಅಂಕಣ ಪರಿಣಾಮಕಾರಿ ಮಾಧ್ಯಮ. ಮದುವೆ, ಹುಟ್ಟುಹಬ್ಬ, ವಿದೇಶ ಪ್ರಯಾಣ, ಇತ್ಯಾದಿ ಸಂದರ್ಭಗಳಲ್ಲಿ ನಿಮ್ಮ ಆಪ್ತರಿಗೆ ಅಭಿನಂದನೆ ಹೇಳಲೂ ಇಲ್ಲಿ ಅವಕಾಶವಿದೆ.

ವಿವರ :

1. **ವೈವಾಹಿಕ-ವರ್ಗೀಕೃತ ಜಾಹೀರಾತಿನ ದರ ಕೇವಲ ರೂ. 100.**
2. **ಬಾಕ್ಸ್ ನಂಬರ್ ಸೌಲಭ್ಯ ಬಯಸುವವರು 50 ರೂಪಾಯಿ ಹೆಚ್ಚು ಕಳಿಸಬೇಕು.**
3. **ವೈವಾಹಿಕ ಜಾಹೀರಾತಿನೊಂದಿಗೆ ಜಾಹೀರಾತುದಾರರ ವಿಳಾಸವನ್ನು ಪ್ರಕಟಿಸುವುದಿಲ್ಲ. ಬಾಕ್ಸ್ ನಂಬರ್ ಕಡ್ಡಾಯ.**
4. **ಜಾಹೀರಾತಿನ ವಿಷಯ 7 ಸೆಂ.ಮಿ ಎತ್ತರ ಹಾಗೂ 5 ಸೆಂ.ಮಿ ಅಗಲವಿರುವ ಜಾಗದಲ್ಲಿ ಸರಿಹೊಂದುವಷ್ಟಿರಬೇಕು (ಅಂದರೆ 50 ಶಬ್ದಗಳ ಒಳಗಿರಬೇಕು).**
5. **ಬಾಕ್ಸ್ ನಂಬರಿಗೆ ಬಂದ ಪ್ರತಿಕ್ರಿಯೆಗಳನ್ನು ಜಾಹೀರಾತು ಪ್ರಕಟವಾದ ಒಂದು ತಿಂಗಳ ನಂತರ ಸಂಬಂಧಿಸಿದವರಿಗೆ ಅಂಚೆ ಅಥವಾ ಕೊರಿಯರ್ ಮೂಲಕ ಕಳಿಸಲಾಗುವುದು.**
6. **ಜಾಹೀರಾತು ವಿಷಯ ಹಾಗೂ ಪೂರ್ಣ ಮೊತ್ತವನ್ನು ಮುಂಗಡವಾಗಿ ಎಂ.ಓ. ಅಥವಾ ಡಿ.ಡಿ. ಮೂಲಕ 'ಅಂಕುರ ಪ್ರಕಾಶನ'ದ ಹೆಸರಿನಲ್ಲಿ ಕಳಿಸಬೇಕು.**

ವಿಳಾಸ :

**ಬಿಸಿಲ ಬದುಕು** ಮಾಸಪತ್ರಿಕೆ, ಅಂಕುರ ಪ್ರಕಾಶನ (ಜಾಹೀರಾತು ವಿಭಾಗ)

ಅಂಚೆ ಪೆಟ್ಟಿಗೆ 7951, ಬಸವೇಶ್ವರ ನಗರ, ಬೆಂಗಳೂರು - 560 079, ದೂರವಾಣಿ : 080 - 33078 10

ಸೆಪ್ಟಂಬರ್ 1998 ಸಂಪುಟ 2 ಸಂಚಿಕೆ 3

ಸಂಪಾದಕ
ಚಂದ್ರಕಾಂತ ವಡ್ಡು

ಉಪ ಸಂಪಾದಕರು
ಅರವಿಂದ ನಾವಡ, ರವಿಶಂಕರ್

ನಿರ್ವಹಣೆ
ಸಿ.ಪಿ. ಸುರೇಶ್

ಪ್ರಸಾರ
ಹೆಚ್.ಎಂ.ಪಿ. ಆರಾಧ್ಯ

ಅಕ್ಷರ ಜೋಡಣೆ
ನರೇಂದ್ರ ಪಾಟೀಲ, ಕೋಕಿಲ

ಮುಖ ಪುಟ ವಿನ್ಯಾಸ
ಹರಿಹರನ್

ವಿಳಾಸ
ಬಿಸಿಲ ಬದುಕು ಮಾಸ ಪತ್ರಿಕೆ
ಅಂಕುರ ಪ್ರಕಾಶನ, ಅಂಚೆ ಪೆಟ್ಟಿಗೆ : 7951
ಬಸವೇಶ್ವರ ನಗರ, ಬೆಂಗಳೂರು- 560 079
ದೂರವಾಣಿ : 3307810

Printed, Published and Owned by Chandrakanta Vaddu, 473, I Cross,I Block, III Stage, Near Water Tank Bus Stop, Basaveshwaranagar, Bangalore - 560 079.
Tel : 080 3307810 Pager : 9622 738638
Printed at M.N.S.Enterprises, Bhattar ahalli, Old Madras Road, Bangalore - 49
Editor : Chandrakanta Vaddu

## ಸರಳ ಸತ್ಯ

ನಿಮ್ಮ ಪರಿಚಿತನೊ, ಸಂಬಂಧಿಯೋ, ಸ್ನೇಹಿತನೋ ಲಂಚ ತೆಗೆದುಕೊಳ್ಳುವುದು ನಿಮಗೆ ಗೊತ್ತಾದರೆ ಹೇಗನ್ನಿಸುತ್ತದೆ? ಬಹುಶಃ ಲಂಚಗುಳಿತನದ ಸಮರ್ಥನೆಗೆ ಹಲವಾರು ಸಬೂಬು ಒಡ್ಡುತ್ತೀರಿ. ಕಾಲವೇ ಹಾಗಿದೆ, ಯಾರು ಲಂಚ ತೆಗೆದು ಕೊಳ್ಳುವುದಿಲ್ಲ ತೋರಿಸಿ, ಆತ ಲಂಚಕ್ಕಾಗಿ ಯಾರನ್ನೂ ಒತ್ತಾಯಿಸುವುದಿಲ್ಲ ಕೊಟ್ಟರೆ ತೆಗೆದುಕೊಳ್ಳುತ್ತಾನಷ್ಟೆ.... ಮುಂತಾದ ಸಮಜಾಯಿಷಿಗಳ ಸರಪಳಿ ಬೆಳೆಯಬಹುದು. ನಿಜವೆಂದರೆ ನೀವು ಲಂಚಕೋರತನವನ್ನು ಸಮರ್ಥಿಸಿ ಕೊಳ್ಳುವ ಆಳದ ಕಾರಣ ಇದಲ್ಲವೇ ಅಲ್ಲ. ಸಂಬಂಧಿಸಿದ ವ್ಯಕ್ತಿ 'ನಿಮ್ಮವನು' ಎಂಬ ಅಂಶವೇ ಇಲ್ಲಿ ಪ್ರಧಾನವಾಗಿರುತ್ತದೆ. ಏಕೆಂದರೆ ನೀವು ಇದೇ ಸಮರ್ಥನೆಯ ವಾದವನ್ನು ಬೇರೆಯವರ ವಿಷಯದಲ್ಲಿ ಒಡ್ಡಲಾರಿರಿ, ಅಲ್ಲವೆ?

ಒಂದು ಕ್ಷಣ ಸುಮ್ಮನೆ ಯೋಚಿಸಿ. ಇಂಥ ದ್ವಂದ್ವಗಳ ಬಗ್ಗೆ ತಮ್ಮ ವಿಚಾರ ಸರಣಿಯನ್ನು ಬಹಿರಂಗವಾಗಿ ವ್ಯಕ್ತಪಡಿಸುವಾಗ ಬಹಳಷ್ಟು ಜನ ಆದರ್ಶವಾದಿಗಳ ಪೋಸು ಕೊಡುವುದು ದಿಟ. ಹಾಗಾಗಿಯೇ ನೀವು ನಿಮ್ಮ ನಿಲುವು, ಧೋರಣೆಯನ್ನು ಯಾರಿಗೂ ಗಟ್ಟಿಯಾಗಿ ಹೇಳುವುದು ಬೇಡ. ನೀವು ನಿಮ್ಮ ಅಂತರಂಗವನ್ನು ಪ್ರಶ್ನಿಸಿಕೊಂಡು ನಿಮಗೆ ನೀವೇ ಉತ್ತರಿಸಿಕೊಳ್ಳಿರಿ.

ಲಂಚಗುಳಿತನ, ಅಪ್ರಾಮಾಣಿಕತೆ ಬಗ್ಗೆ ಜನ ಎರಡು ಬಗೆಯ ಮಾನದಂಡ ಅನುಸರಿಸುವುದರ ಫಲಿತಾಂಶವೇ ನಮ್ಮ ರಾಷ್ಟ್ರದ ಪ್ರಸಕ್ತ ಸ್ಥಿತಿ. ಭ್ರಷ್ಟಾಚಾರ ಎಂಬುದು ಚರ್ಚೆಯ, ಖಂಡನೆಯ, ಅವಮಾನದ ವಿಷಯ ಅಲ್ಲವೇ ಅಲ್ಲ ಎಂಬಂತೆ ಸಾರ್ವಜನಿಕರು ಸೊಗುಹಾಕಿದರೆ, ಸಹಿಸಿದರೆ, ಕ್ಷಮಿಸಿದರೆ ಮತ್ತಿನ್ನೇನು ಆಗಲು ಸಾಧ್ಯ? ಪರಿಚಿತನೊಬ್ಬ ಅಕ್ರಮವಾಗಿ ಸಂಪತ್ತು ಗಳಿಸಿ ಐಷಾರಾಮಿ ಮನೆ ಕಟ್ಟಿಸಿದರೆ, ಮನೆತುಂಬ ಆಧುನಿಕ ಸಲಕರಣೆ ತುಂಬಿಸಿದರೆ, ಅದ್ದೂರಿಯಾಗಿ ಮಕ್ಕಳ ಮದುವೆ ಮಾಡಿದರೆ ಅನೇಕರು ಆತನನ್ನು ಆದರಿಸುವುದು, ಆದರ್ಶವಾಗಿರಿಸಿಕೊಳ್ಳುವುದೇ ಹೆಚ್ಚು. ಅವಕಾಶವಿದ್ದೂ ಭ್ರಷ್ಟಾಚಾರದಲ್ಲಿ ತೊಡಗದ ವ್ಯಕ್ತಿಯನ್ನು 'ದಡ್ಡ' ಎಂದು ಪರಿಗಣಿಸಿದರೂ ಅಚ್ಚರಿ ಇಲ್ಲ!

ಇಲ್ಲಿ ನಾವೆಲ್ಲ ವ್ಯಕ್ತಿಗತವಾಗಿ ನಿರ್ವಹಿಸಬಹುದಾದ ಸರಳ ಸಾಧ್ಯತೆಗಳು, ಜವಾಬ್ದಾರಿಗಳು ಕೆಲವಿವೆ. ಭ್ರಷ್ಟ ವ್ಯಕ್ತಿಯ ಮನೆಯಲ್ಲಿ ನಡೆಯುವ ಸಭೆ-ಸಮಾರಂಭಗಳಿಗೆ ಹಾಜರಾಗುವುದನ್ನು ಬೇಕೆಂತಲೇ ತಪ್ಪಿಸಿಕೊಳ್ಳಬೇಕು. ವರ ದಕ್ಷಿಣೆಯ ವಹಿವಾಟು ನಡೆದಿದೆ ಎಂದು ಗೊತ್ತಾದ ಮದುವೆಗಳಿಗೆ ಹೋಗ ಕೂಡದು. ಭ್ರಷ್ಟಾಚಾರದಿಂದ ಸಂಪತ್ತು ಗಳಿಸಿದವರನ್ನು ಯಾವ ವಿಷಯದಲ್ಲೂ ವಿಶ್ವಾಸಕ್ಕೆ ತೆಗೆದುಕೊಳ್ಳದೆ ನಿರ್ಲಕ್ಷಿಸಿ ನೋಡಿ. ನಿಮ್ಮ ಇಂಥ ಧೋರಣೆಯಿಂದ ಸಂಬಂಧಿಸಿದ ವ್ಯಕ್ತಿಯ ನಿಷ್ಠುರ ಕಟ್ಟಿಕೊಳ್ಳುವ ಅಗತ್ಯವೂ ಇಲ್ಲ. ವ್ಯಕ್ತಿಗತ ನಡವಳಿಕೆಯಲ್ಲಿ ಸ್ವಯಂಸ್ಫೂರ್ತಿಯಿಂದ ಅಳವಡಿಸಿಕೊಳ್ಳುವ ಈ ಗುಣಗಳು ಅಬ್ಬರದ ಸದ್ದು ಮಾಡಬೇಕಿಲ್ಲ; ಸಹಜವಾಗಿ, ಸರಳವಾಗಿ, ಮೌನವಾಗಿ ಕಾರ್ಯಗತವಾದರೆ ಉಂಟಾಗುವ ಪರಿಣಾಮ ನಿಜಕ್ಕೂ ನಿಬ್ಬೆರಗುಗೊಳಿಸುತ್ತದೆ.

ಪ್ರಯತ್ನಿಸಿ ನೋಡಿ. ನೀವು ಕಳೆದುಕೊಳ್ಳುವುದು ಏನೂ ಇಲ್ಲ.

- ಸಂಪಾದಕ

# ಸರಸ ವಾರ್ತೆ

ಪ್ರತಿಯೊಬ್ಬರಿಗೂ ಅವರವರದೇ ಕಾರ್ಯಭಾರ. ಅದ್ಕೇ ಹೇಳೋದು ಇರುವೆ ಭಾರ ಇರುವೆಗೆ ಆನೆ ಭಾರ ಆನೆಗೆ ಅಂತಾ. ನಮ್ಮ ದೈನಂದಿನ ದಿನಚರಿ Fixed. ಅದಕ್ಕಿಂತ ಕಡ್ಡಿ ಮೊನೆಯಷ್ಟು ಹೆಚ್ಚು ಕೆಲಸ ಬಂದ್ರೂ ನಾವೆಲ್ಲಾ ಜ್ವಾಲಾಮುಖಿಗಳಾಗಿ ಸಿಡಿದು ಲಾವಾರಸ ಸುರಿಸಿ ಶಿಲಾಬಂಡೆಗಳಂತಾಗೋದು ಗ್ಯಾರಂಟಿ. ಈ ಮಾತಿಗೆ ಉದಾಹರಣೆ ದೂರದ ತೈವಾನ್‌ನಲ್ಲಿನ ಒಬ್ಬ ಅಂಚೆ ಪೇದೆಯ ಕಾರ್ಯ-ಭಾರ. ಪ್ರತಿದಿನ 2,000 ದಷ್ಟು ಕಾಗದಗಳನ್ನು ಸಾಮಾನ್ಯವಾಗಿ ವಿಲೇವಾರಿ ಮಾಡ್ತಿದ್ದ. ಕಳೆದ ತಿಂಗಳಲ್ಲೊಂದು ದಿನ ಇದ್ದಕ್ಕಿದ್ದ ಹಾಗೆ 2,000ದಷ್ಟು ಹೆಚ್ಚಿಗೆ ಕಾಗದ ಬರಬೇಕೆ ? ಸರಿ, ಕಾರ್ಯಭಾರದ ಜೊತೆಗೆ ಅವನ ತಲೆಭಾರನೂ ಆಗಿ ಹಗುರ ಮಾಡ್ಕೊಳ್ಳೋದಿಕ್ಕೆ ಹೋಗಿ ಕಂಬನಿ ಸುರಿ ಸುತ್ತಾ ಕಂಬಿ ಎಣಿಸ್ತಿದ್ದಾನೆ. ಹೆಚ್ಚಿಗೆ ಬಂದ ಪತ್ರಗಳನ್ನು ಮೂಲೆಗೆ ಕೊಂಡೊಯ್ದು ಬೆಂಕಿ ಹಾಕಿ ಭಸ್ಮ ಮಾಡಿದ ನಂತೆ. ಆಕಸ್ಮಾತ್ತಾಗಿ ಅಲ್ಲಿ ಹೋಗುತ್ತಿದ್ದ ಪೋಲಿಸ್ ಪೇದೆ ಈ ಅಂಚೆ ಪೇದೆಯನ್ನು ಬಂಧಿಸಿ ಆದರಿಸಿ ಸತ್ಕರಿಸಿದ್ದಾನಂತೆ ! ಈಗ ಈ ಅಂಚೆಪೇದೆಗೆ ನ-ಕಾರ್ಯಭಾರ ನ-ಶಿರಭಾರ.

❋

ಪಾಶ್ಚಾತ್ಯ ದೇಶಗಳಲ್ಲಿ ಎಲ್ಲದಕ್ಕೂ ಸ್ವಾತಂತ್ರ್ಯ, ಮುಕ್ತತೆಯ ಪರಾಕಾಷ್ಠೆ. ಈ ಮಾತು ಸಾಬೀತಾಗಿದ್ದು ಕೆನಡಾದ ಪ್ರಾಂತೀಯ ನ್ಯಾಯಾಲಯದ ಇತ್ತೀಚಿನ ಆದೇಶದಿಂದ. ಕಳೆದ ಆಗಸ್ಟ್‌ನ ಬೇಸಿಗೆಯಲ್ಲಿ ಇಲ್ಲಿನ ವಿಕ್ಟೋರಿಯಾ ಪಾರ್ಕ್‌ನಲ್ಲಿ ಮಹಿಳೆಯರಿಬ್ಬರು ಅರೆನಗ್ನರಾಗಿ ಸೂರ್ಯಸ್ನಾನದಲ್ಲಿ ತಲ್ಲೀನರಾಗಿದ್ದರು. ಈ ವರ್ತನೆಯನ್ನು ಕಂಡ ಪೋಲಿಸರು ಬಂಧಿಸಿ ಇವರ ಮೇಲೆ ಅಸಭ್ಯ ವರ್ತನೆ ಅನ್ನೋ ಆರೋಪ ಹೊರಿಸಿದ್ರು. ಆದರೆ ಈಗ ನ್ಯಾಯಾಲಯ ಅಂಗಿ ಕಳಚಿ ಎದೆಯನ್ನು ಪ್ರದರ್ಶಿಸಿದ್ದು ಆಕ್ಷೇಪಾರ್ಹವಲ್ಲ ಅಂತಾ ತೀರ್ಪು ನೀಡಿ ಅವರನ್ನು ಆರೋಪದಿಂದ ಮುಕ್ತಿಗೊಳಿಸಬೇಕೇ ? ಅಲ್ಲಿಗೆ ಅರೆನಗ್ನತೆ ಅಸಭ್ಯವರ್ತನೆಯಲ್ಲ ಅಂತ ಇನ್ಮುಂದೆ ಹದಿಹರೆಯದ ಮಹಿಳಾಮಣಿಗಳೆಲ್ಲ ಎದೆ ತೆರೆದುಕೊಂಡು ಸೂರ್ಯಸ್ನಾನದ ಜೊತೆಗೆ ತಾರುಣ್ಯದ ಪ್ರದರ್ಶನಕ್ಕೂ ತೊಡಗಬಹುದು.

❋

ತುರೀಯಾವಸ್ಥೆ ತಲುಪಿರೋ ಗಣ್ಯರ ಲೈಂಗಿಕ ಹಗರಣವೆಂದರೆ ನೆರೆಯ ಕ್ಲಿಂಟನ್ ಹಾಗೂ ಮೋನಿಕಾರದ್ದು. ಅದು ಯಾವ ಮಟ್ಟಕ್ಕೆ ತಲುಪಿದೆಯೆಂದರೆ ಕೋರ್ಟು ಮೆಟ್ಟಿಲೇರಿ ಈಗ ಡಿ.ಎನ್.ಎ ಪರೀಕ್ಷೆಗೆ ತಯಾರಿ ನಡೀತಿದೆ. ಅವಳೊಂದಿಗೆ ಲೈಂಗಿಕ ಸಂಬಂಧ ಹೊಂದಿಲ್ಲ ಅನ್ನೋದು ಕ್ಲಿಂಟನ್‌ರ ವಾದ. ಆದರೆ ನನ್ನೊಂದಿಗೆ ಅನೈತಿಕ ಸಂಬಂಧವಿತ್ತು ಅನ್ನೋದು ಮೋನಿಕಾಳ ಪ್ರತಿವಾದ. ಆದರೆ ಇತ್ತೀಚಿನ ಬೆಳವಣಿಗೆಯಲ್ಲಿ ಮೋನಿಕಾಳದ್ದೇ ಒಂದು ಕೈಮೇಲೆ. ಕಾರಣ ಇವಳ ಕಪ್ಪು ಕಾಕ್‌ಟೇಲ್ ನಿಲುವಂಗಿ ಮೇಲೆ ಕ್ಲಿಂಟನ್‌ರ ವೀರ್ಯದ ಕಲೆಯಿದೆ ಅನ್ನೋದು ಇವಳಿಗೊಂದು ಪ್ಲಸ್ ಪಾಯಿಂಟ್. ಪರವಾಗಿಲ್ಲ ಮೋನಿಕಾಳ ದೂರಾಲೋಚನೆ. some-ಭೋಗದ ನಡುವೆ ಇದನ್ನೆಲ್ಲಾ ಗಮನಿಸೋದಾದ್ರೂ ಹೇಗೆ ಅನ್ನೋದು ನಮ್ಮ ಕೆಲವು ರಸಿಕರ ಅಭಿಪ್ರಾಯ- ಇನ್ಮುಂದಾದರೂ ಈ ಲೈಂಗಿಕಾಸಕ್ತ ಗಣ್ಯರು ಕಾಮಕೇಳಿಯಲ್ಲಿ ತೊಡಗುವಾಗ ಸೂಕ್ಷ್ಮಮತಿಗಳಾಗಿ ಈ ನಿಲುವಂಗಿ, ಹಾಸಿಗೆ ಬಟ್ಟೆಯೆಲ್ಲಾ ತ್ಯಜಿಸಿ, ಬರೀ ಬಟ್ಟಂಬಯಲು, ಬೆತ್ತಲೆಯಾಗಿ ಕತ್ತಲೇನಾ ಆರಿಸಿಕೊಂಡ್ರೆ ಎಲ್ಲರಿಗೂ ಒಳಿತು, ಇವರಿಗೂ ಉಳೀತು. ಈ ದೂರಾಲೋಚನೆ ಬಗ್ಗೆ ಆಲೋಚಿಸದಿದ್ದಕ್ಕೆ ದೂರದ ಊರಿನಲ್ಲೆಲ್ಲಾ ಇವರದ್ದೇ ಮಾತು. some-ಭೋಗದ ಸುಖ ಬೇರೆ ಮಾತು. some-ದುಃಖದ ಜೊತೆಗೆ some-ಪ್ರಚಾರ ಸಿಕ್ಕಿದ್ದಂತೂ ಸತ್ಯವಾದ ಮಾತು.

❋

ಅಲ್ಲಾರೀ, ಈ ಗಣಕ ಯಂತ್ರದ ಕಾಲದಲ್ಲಿ ಯಾವುದೂ ಗಣನೆಗೇ ಸಿಗೋದಿಲ್ಲ. ಅದರಲ್ಲೂ ಹಾರ್ಡ್‌ವೇರ್, ಸಾಫ್ಟ್‌ವೇರ್ ಕಥೆ ಬಿಡಿ. ಇಂಟರ್ ನೆಟ್ ಬಂದ್ಮೇಲೆ ನಮಗೆ ಯಾವುದು ಲಭ್ಯವಿರಲಿಲ್ವೋ ಅವೆಲ್ಲಾ ಸೌಲಭ್ಯವಾಗಿದೆ. ಕೆಂಪುಕೋಟೆಯ ಧ್ವಜಾರೋಹಣ, ದೂರದಲ್ಲೆಲ್ಲೋ ನಡೆಯುವ ಕ್ರೀಡಾ ಪಂದ್ಯ ಇವುಗಳ Live Telecast ನೋಡಿದ್ದೀವಿ. ರತಿ ವಿಜ್ಞಾನದಲ್ಲಿ ದಾಂಪತ್ಯ ರಹಸ್ಯದ ಬಗ್ಗೆ ಕಾಮೆಂಟ್-ರೀನೂ ಓದಿರಬಹುದು. ಆದ್ರೆ ಕಳೆದ ಆಗಸ್ಟ್ 4ನೇ ತಾರೀಖು ಕ್ಯಾಲಿಫೋರ್ನಿಯಾದ ಮೈಕ್ ಹಾಗೂ ಡೇನ್‌ರೆಂಬ ಹದಿಹರೆಯದವರು ತಮ್ಮ ಪ್ರಥಮ ದೈಹಿಕ ಸಂಪರ್ಕದ ದೃಶ್ಯವನ್ನು ಇಂಟರ್‌ನೆಟ್ ಮೂಲಕ Live Telecast ಮಾಡ್ತೀವಿ ಅಂತ ಹೇಳಿ ಜಗತ್ತನ್ನೇ ಮೂಕವಿಸ್ಮಿತರಾಗುವಂತೆ ಮಾಡಿದ್ದರು. ಈ ಹಿಂದೆ ಮಗುವಿನ ಜನನದ ದೃಶ್ಯವನ್ನು ನೇರ ಪ್ರಸಾರ ಮಾಡಿದ್ದೇ ಇವರಿಗೆ ಪ್ರೇರಣೆಯಂತೆ. ಮಗುವಿನ ಜನನಕ್ಕೆ ಮೂಲ ಕಾರಣವಾಗಿರೋ ಈ ಕ್ರಿಯೆಯ ಬಗ್ಗೆ ಪ್ರಸಾರ ಮಾಡಬೇಕು ಅನ್ನೋದು ಇವರ ಸಮರ್ಥನೆ. ಪಾಪ, ಆಗಸ್ಟ್ 4ರ ರಾತ್ರಿ ಎಷ್ಟೋ ದಂಪತಿಗಳು ತಮ್ಮ ತಮ್ಮ ಸಾಫ್ಟ್-WEAR, ಹಾರ್ಡ್-WEAR ಕಳಚಿ ಸರಸ ಸಲ್ಲಾಪ ನಡೆಸ್ತಾ ಕಂಪ್ಯೂಟರ್ ಪರದೆ ಕಾಯ್ತಾ ಕೂತಿದ್ರೇನೋ ಗೊತ್ತಿಲ್ಲ. ಆದ್ರೆ ಇಷ್ಟೆಲ್ಲಾ ಕೇವಲ ಪ್ರಚಾರ ಗಿಟ್ಟಿಸೋಕೆ ಹೂಡಿದ ತಂತ್ರ ಅಂತಾ ಕೊನೆಗೆ ತಿಳಿದು ಬಂತಂತೆ. 'ಮೊದಲ ಪಾಪ'ದ ದೃಶ್ಯ ನೋಡೋಕೆ ಗಂಟೆಗಟ್ಟಲೇ ಕಾದದ್ದೇ ಬಂತು, ಅಯ್ಯೋ ಪಾಪ!

❋

'ಕವನ ವಾಚನ ಕೇಳ್ತಾ ಇದ್ದ ಜನ ಜೋರಾಗಿ ನಗ್ತಾ ಇದ್ದರಂತೆ. ಕಾರಣ ಕವಿಯ ನಿಕ್ಕರ್ ಉದುರಿ ಹೋಗಿತ್ತಂತೆ', ಇದು ನಮ್ಮ ಕವಿಯೋರ್ವರ ಚುಟುಕದ ಒಂದು ಗುಟುಕು. ಮೇಲಿನ ವಾಕ್ಯವೇ ಈಗ ವೇದ ವಾಕ್ಯ -ಯುರೋಪಿನಾದ್ಯಂತ ನಡೆಯುತ್ತಿರುವ ಸಾಹಿತ್ಯದ ಚಳುವಳಿಯ ಮುಂಚೂಣಿ ಕಾರರಿಗೆ. ಈ ತಿಂಗಳಲ್ಲಿಯೇ ಲಂಡನ್ನಿನಲ್ಲಿ ಒಂದು ವಿಚಿತ್ರ ಕವಿಗೋಷ್ಠಿ ನಡೆಯುತ್ತಂತೆ. ಅಲ್ಲಿ ಕವಿಗಳು ತಮ್ಮ ಕವನ ವಾಚನ ಮಾಡೋವಾಗ ಬೆತ್ತಲಾಗುತ್ತಾರೆ ಅನ್ನೋದು ವಿಚಿತ್ರ ಹಾಗೂ ವಿಶೇಷ. ಬೆತ್ತಲಾಗಿ ಕವನ ವಾಚನ ಮಾಡೋದ್ರಿಂದ ಪ್ರೇಕ್ಷಕರೊಂದಿಗೆ ಹೆಚ್ಚು ಆತ್ಮಸಂಬಂಧವನ್ನು ಹೊಂದಬಹುದು ಅನ್ನೋದು ಅಲ್ಲಿನ ಬಹುತೇಕ ಕವಿಗಳ ಅಭಿಪ್ರಾಯ. ರಷ್ಯದಲ್ಲೊಂದು ಕಡೆ ಕವಿಗೋಷ್ಠಿಯಲ್ಲಿ ಪ್ರೇಕ್ಷಕರು ಬೇಸರದಿಂದ ಕವಿಗಳ ಮೇಲೆ ಮೊಟ್ಟೆ, ಟೊಮೆಟೋ ಎಸೆದಿದ್ದೇ ಈ ಹೊಸ ಬೆಳವಣಿಗೆಗೆ ಕಾರಣವಂತೆ. ಇದೂ ನಿಜಾನೇ, ಕವಿ ಮುಕ್ತ ಹಾಗೂ ಸ್ವತಂತ್ರನಾಗಿ ಆಲೋಚಿಸಿ ಬರೆದದ್ದನ್ನು ಹೇಳುವಾಗ ಈ ಮೇಲುಡುಗೆ, ಒಳಉಡುಗೆ ಬಂಧನದ ಹಾಗೆ. ಇನ್ನು ಆತ್ಮ ಸಂಬಂಧದ ಮಾತು ಸತ್ಯ. ಕಾರಣ ಕವನ ಕೇಳೋ ಕಿವಿಗಳ ಮುಂದೆ ಕವಿಗಳು ತಮ್ಮ ಅಹಂನ್ನು ದೂರಮಾಡಿ ತನುವ ತೆರೆದಿಟ್ಟು, ಮನವ ಬಿಚ್ಚಿಟ್ಟು ನಾನೂ ನಿಮ್ಮ ಹಾಗೇ ಅಂತಾ ಸಾರೋ ತವಕ. ಕವಿಗೋಷ್ಠಿ ಮುಗಿಯೋ ತನಕ. ಈ ಚಳುವಳಿ ಕಾರರಲ್ಲಿ, ಕವಯಿತ್ರಿಯರೂ ಇರಬಹುದೇನೋ ?. ಅದನ್ನ ಸಮಕಾಲೀನ ಅಧ್ಯಯನ ಸಂಸ್ಥೆ ಸ್ಪಷ್ಟ ಪಡಿಸಿಲ್ಲ. ಇನ್ಮೇಲೆ ಕವಿಗಳ ಕವನದಷ್ಟೇ ಪ್ರಾಮುಖ್ಯ ಅವರ ಕಾಯಕ್ಕೂ, ಕಾಯಾ-ವಾಚಾ-ಮನಸಾ ಕೂಡಿರಬೇಕು ಅನ್ನೋ ಮಾತು ಕವನ ವಾಚನಕ್ಕೂ ಅನ್ವಯಿಸುವಂತಾಯ್ತು. ■

# ಒಳನೋಟ

## ರಾಜಕಾರಣಿಗಳ ಪ್ರಣಯ


**ಕ್ಲಿಂಟನ್ ತಪ್ಪೊಪ್ಪಿಗೆ ರಹಸ್ಯವೇನು ?** 8

ಅಮೆರಿಕೆ ಅಧ್ಯಕ್ಷ ಬಿಲ್ ಕ್ಲಿಂಟನ್ ಹಗರಣದ ಸ್ವಾರಸ್ಯಕರ ವೃತ್ತಾಂತ

**ಭಾರತದ ರಾಜಕಾರಣಿಗಳ ಪ್ರಣಯ** 15

ಈ ವಿಷಯದಲ್ಲಿ ಭಾರತದ ರಾಜಕಾರಣಿಗಳೇನೂ ಸಂಭಾವಿತರಲ್ಲ!

**ಅನೈತಿಕತೆ ಬಗ್ಗೆ ಡಾ. ಸಿ. ಆರ್. ಚಂದ್ರಶೇಖರ್ ವಿಶ್ಲೇಷಣೆ** 16





| | | |
|---|---|---|
| ಇಲಿಯಾಯಣ | ರಾಜಶ್ರೀ ವಿನಾಯಕ ಗುಮಾಸ್ತೆ | 20 |
| ಇದು ಏಡ್ಸ್‌ಗಿಂತ ಭೀಕರ! | ಡಾ. ವಸುಂಧರಾ ಭೂಪತಿ | 23 |
| ಹೈದರಾಬಾದ್ -ಕರ್ನಾಟಕ ವಿಮೋಚನೆ | ಸದಾನಂದ ಪೆರ್ಲ | 27 |
| ನೊಂದು ಬೆಂದವರು | ಎಂ.ಎಸ್. ಮೂರ್ತಿ | 32 |
| ಪ್ರೊ. ಹಿರೇಮಲ್ಲೂರ ಈಶ್ವರನ್ | ಬಸವರಾಜ ಪುರಾಣಿಕ | 34 |
| ಶಿಕ್ಷಣ ಸಚಿವ ಗೋವಿಂದೇಗೌಡರು | ಶರ್ಮಾ | 38 |
| ಮೂಡಲಪಾಯ ದೊಡ್ಡಾಟದ ರಚನಕಾರ | ಸಿದ್ಧರಾಜ್ ಕೆಂಧೂಳಿ | 60 |
| ಕಂಪ್ಯೂಟರ್ ಕಬ್ಬಿಣದ ಕಡಲೆ ಅಲ್ಲ | ಮುರಳೀಧರ | 61 |
| ಸಾಹಿತ್ಯ ನಮಗೆ ಬೇಕೆ? | ಕೋ. ಚೆನ್ನಬಸಪ್ಪ | 63 |
| ನಮ್ಮ ರಾಮ್ಮಣ್ಣ :ಫೇರ್ ಅಂಡ್ ಲವ್‌ಲೀ | ಚಂದ್ರಶೇಖರ ಪಾಟೀಲ | 66 |
| ದೈತ್ಯ ಜೀವಿ ಯೇತಿ ಇದೆಯೇ? | ನಾರಾಯಣ ಎಂ. ಭಟ್ | 69 |
| ಧಾರವಾಡದ ಓಟದ ರಾಣಿ | ವಸಂತ ಮುರ್ಡೇಶ್ವರ | 73 |
| ರೋಚಕ ಸಹರಾ ಕಪ್ | ಗರ್ತಿಕರೆ ವಿ. ಪ್ರಕಾಶ್ | 74 |


## ವಿದ್ಯೆ - ಉದ್ಯೋಗ


ಮಹಿಳಾ ಉದ್ಯಮಿಗಳ ಆಶಾಕಿರಣ ........ 47
ಕರ್ನಾಟಕ ವಿ.ವಿ. ಬಾಹ್ಯ ಪರೀಕ್ಷೆಗಳಿಗೆ ಅರ್ಜಿ ........ 49
ಎನ್.ಎಸ್.ಎಫ್.ಡಿ.ಸಿ. ನೇರ ಸಾಲ ಯೋಜನೆ ........ 50
ಪತ್ರಿಕೋದ್ಯಮದಲ್ಲಿ ಅಪ್ರೆಂಟಿಸ್‌ಶಿಪ್ ........ 50
ಸಿನಿಮಾದಲ್ಲಿ ಸದವಕಾಶಕ್ಕೆ ತರಬೇತಿ-ಶಿಕ್ಷಣ ........ 51
ಬೆಂಗಳೂರು ವಿ.ವಿ. ಬೋಧನಾ ಹುದ್ದೆಗಳು ........ 52
ರಾಷ್ಟ್ರೀಯ ಮಕ್ಕಳ ಸಾಹಿತ್ಯ ಬಹುಮಾನ ಸ್ಪರ್ಧೆ ........ 53
ನೀವೂ ಇಂಗ್ಲಿಷ್ ಕಲಿಯಿರಿ ........ 54
ಸ್ಪರ್ಧಾತ್ಮಕ ಪರೀಕ್ಷೆಗೆ ಸಿದ್ಧರಾಗಿ ........ 58


## ಸ್ಥಿರ ಶೀರ್ಷಿಕೆಗಳು


ಸರಸ ವಾರ್ತೆ ........ 4
ಸಂವೇದನೆ ........ 32
ಹೊಸ ಪುಸ್ತಕ ........ 36
ಕ್ವಿಜ್ ........ 40
ವಯಸ್ಕರ ಸಂದೇಹ ಸಲಹೆ ........ 41
ಆಪ್ತ ಸಮಾಲೋಚನೆ ........ 43
ಮಾರ್ಗದರ್ಶಿ ........ 45
ವ್ಯಕ್ತಿತ್ವ ವಿಕಾಸ ........ 71
ಪದಬಂಧ ........ 76
ಕಿಲ ಕಿಲ ........ 77
ತಾರಾ ಬದುಕು ........ 80

# ಟಪಾಲು

## ಬೇಕಾದ ಪತ್ರಿಕೆ

ನಾನು ಇದೇ ತಿಂಗಳು ಲೈಬ್ರರಿಯಲ್ಲಿ ಕೆಲಸಕ್ಕೆ ಸೇರಿದ್ದೆ. ಕಾಣದಿದ್ದ ಪತ್ರಿಕೆಯೊಂದು ದೊರೆಯಿತು. ಅದರಲ್ಲಿ ನನಗೆ ಬೇಕಾದ ವಿಷಯಗಳೇ ತುಂಬಿದ್ದವು. ಬ್ಯಾಂಕ್ ಪರೀಕ್ಷೆಯ ಮಾಹಿತಿ ಸಂಪೂರ್ಣವಾಗಿದೆ.

**-ಶಿವಾನಂದ ಹೆಬ್ಬಾಳ,** *ಶಿರೋಳ*

## ಬಿಸಿಲು ಏಕೆ ?

ತಮ್ಮ ಪತ್ರಿಕೆ ಉತ್ತಮ ಲೇಖನಗಳಿಂದ ಕೂಡಿ ಚೆನ್ನಾಗಿ ಮೂಡಿಬರುತ್ತಿದೆ. ಆದರೆ ಎಲ್ಲರ ಬದುಕಿಗೂ ನೆರಳಿನಂತೆ ತಲೆಕಾಯುವ ಈ ಪತ್ರಿಕೆಗೆ 'ಬಿಸಿಲ ಬದುಕು' ಅಂತ ಹೆಸರಿಟ್ಟಿದ್ದೇಕೆ ?

**-ಶ್ರೀಶೈಲ,** ಮುದ್ದೇಬಿಹಾಳ

## ವೈವಾಹಿಕ ಪ್ರಾರಂಭಿಸಿ

ವೈವಾಹಿಕ ಅಂಕಣ, ವರ್ಗೀಕೃತ ಜಾಹೀರಾತುಗಳನ್ನು ಪ್ರಾರಂಭಿಸಿ, ಇತರ ಪತ್ರಿಕೆಗಳಿಗಿಂತ ಕಡಿಮೆ ದರದಲ್ಲಿ ಒದಗಿಸಿದರೆ ಒಳ್ಳೆಯದು. ಜನಸಂಪರ್ಕಕ್ಕೆ ಅನುಕೂಲ.

**- ಶ್ರೀಪಾದ ಹೆಗಡೆ,** *ಶಿಂಗಹಳ್ಳಿ*

## ನೂರಕ್ಕೆ ನೂರು ಸತ್ಯ

''ಅಬ್ಬರದ ಯುಗದಲ್ಲಿ ಈ ನಿರಾಡಂಬರ ಸುಂದರಿಯನ್ನು ತಬ್ಬಿಕೊಂಡಿದ್ದಿರಿ'' ಎನ್ನುವ ಸಂಪಾದಕರ ಮಾತು ನೂರಕ್ಕೆ ನೂರು ಸತ್ಯ.

'ಬದುಕು ಎಲ್ಲರ ಜೀವನದಲ್ಲಿ ಬೆರೆತು ಶಾಶ್ವತವಾಗಲಿ' ಎಂದು ಹಾರೈಸುವೆ

**-ಎ.ಹೆಚ್. ಸುರೇಶ,** *ಶಿವಮೊಗ್ಗ*

## ಅಂಗವಿಕಲರ ಬಗ್ಗೆ

ಬಹಳಷ್ಟು ಪತ್ರಿಕೆಗಳಲ್ಲಿ ಅಂಗವಿಕಲರ ಬಗ್ಗೆ ಮಾಹಿತಿ-ಮಾರ್ಗದರ್ಶನ ನೀಡುವುದಿಲ್ಲ. 'ಬದುಕು' ಪತ್ರಿಕೆಯಲ್ಲಾದರೂ ನೋವುಂಡ ಜೀವಗಳಿಗೆ ಮಾಹಿತಿ ನೀಡುವಿರೆಂದು ಆಶಿಸುತ್ತೇನೆ.

**-ಮಹಾಲಿಂಗ ಗೋರಬಾಳ,** *ಗೋಕಾಕ ಫಾಲ್ಸ್*

## ಹಾಗೇನಿಲ್ಲ

ಟಪಾಲು ವಿಭಾಗದಲ್ಲಿ ಕೆಲವರ ಅಭಿಪ್ರಾಯ ಓದಿದರೆ ಪತ್ರಿಕೆ ತನ್ನತನ ಕಳೆದುಕೊಳ್ಳುತ್ತಿದೆ ಎಂಬ ಮಾತು ಎದ್ದುಕಾಣಿಸಿತು. ಹಾಗೇನಿಲ್ಲ, ಪತ್ರಿಕೆ ಇತ್ತೀಚೆಗೆ ಇನ್ನೂ ಚೆನ್ನಾಗಿ ಬರುತ್ತಿದೆ. ಸ್ಥಿರಶೀರ್ಷಿಕೆಗಳಾದ ಕಿಲಕಿಲ, ಅಡುಗೆಮನೆ ಚೌಚೌ ಇರಲೇಬೇಕು.

**- ಪ್ರವೀಣರಾಜು ಸೊನ್ನದ,** ಬಾದಾಮಿ

## ಅಪೂರ್ಣ

ಆಗಸ್ಟ್ ಸಂಚಿಕೆಯಲ್ಲಿ ರೈಲ್ವೆ ಇಲಾಖೆಯಲ್ಲಿ ಉದ್ಯೋಗಾವಕಾಶದ ಮಾಹಿತಿ ನೀಡಿದ್ದೀರಿ. ಆದರೆ ವಿವರಗಳು ಅಪೂರ್ಣವಾಗಿವೆ. ಹುದ್ದೆಗಳ ಸಂಖ್ಯೆ ಕೊಟ್ಟಿಲ್ಲ. ಅರ್ಜಿ ನಮೂನೆ ಪ್ರಕಟಿಸಿಲ್ಲ. ಈ ಬಗ್ಗೆ ವಿವರಗಳಿಗೆ ಯಾವ ಪತ್ರಿಕೆ ನೋಡಬೇಕು ಅಂತಲೂ ತಿಳಿಸಿಲ್ಲ. ಇನ್ನು ಮುಂದೆ ಹಾಗೆ ಮಾಡಬೇಡಿ.

**-ಎಂ.ಸಿ.ಸುರೇಬಾನ,** ಹುಬ್ಬಳ್ಳಿ

## ಚೆನ್ನಾಗಿದೆ ಆದರೆ.....

'ಬದುಕು' ಚೆನ್ನಾಗಿ ಬರುತ್ತಿದೆ. ಆದರೆ ಪ್ರತಿ ತಿಂಗಳು ಒಂದೆರಡು ವಿಷಯಗಳ ಬಗ್ಗೆ ಪೂರ್ಣ ಮಾಹಿತಿ ನೀಡಿದರೆ ಒಳ್ಳೆಯದು. ಉದಾ : ಸ್ಕ್ರೀನ್ ಪ್ರಿಂಟಿಂಗ್, ಛಾಯಾಗ್ರಹಣ, ಮೋಟಾರ್ ರೀವೈಂಡಿಂಗ್.

**-ಸತ್ಯನಾರಾಯಣ ಎಸ್.ಕೆ.,** *ಕೆ.ಆರ್.ನಗರ*

## ಮಾರ್ಗದರ್ಶಿ

ಉಚಿತ ಕೊಡುಗೆಯಾದ 'ಮಾರ್ಗದರ್ಶಿ' ನಿಜಕ್ಕೂ ನಮ್ಮಂತಹ ನಿರುದ್ಯೋಗಿಗಳ ಕೈಪಿಡಿಯೇ ಸರಿ. ಇದರಿಂದ ತುಂಬಾ ಉಪಯೋಗವಾಗಿದೆ. 'ಪುನರ್ಜನ್ಮ' ಕುರಿತ ಚರ್ಚೆಯಲ್ಲಿ ಗಣ್ಯರ ಅಭಿಪ್ರಾಯಗಳು ಉತ್ತಮವಾಗಿದ್ದವು.

**-ಸಿದ್ದು ಮ.ಮಾರ್‍ಯಾಳ,** ಮಂಗಳೂರು

## ಪುನರ್ಜನ್ಮ

ಪುನರ್ಜನ್ಮದ ಬಗೆಗಿನ ವಿವಿಧ ಜನರ ಅಭಿಪ್ರಾಯ ಓದಿದ ಮೇಲೆ ನಂಬಲೂ ಆಗದೆ ಬಿಡಲೂ ಆಗದೆ ಅತಂತ್ರ ಮನಸ್ಥಿತಿ ಏರ್ಪಟ್ಟಿದೆ.

**-ಮಹಾಂತೇಶ ರಾಜಗೋಳ,** *ಯರಡಾಲ*

## ಗಮನಿಸಿ

'ಬಿಸಿಲ ಬದುಕು' ಹೆಸರಿಗೆ ಅನ್ವರ್ಥವಾಗುವಂತಹ ಒಂದೆರಡು ಲೇಖನಗಳನ್ನಾದರೂ ಆಗಾಗ ಪ್ರಕಟಿಸುತ್ತಿಲ್ಲ. ಈ ಕಾರಣದಿಂದಲೋ ಏನೋ ಚಂದಾ ಹಣ ಕಳಿಸಲು ವಿಳಂಬವಾಗಿರಲೂಬಹುದು. ಇನ್ನಾದರೂ ಈ ಬಗ್ಗೆ ಗಮನಹರಿಸುವಿರಾಗಿ ಆಶಿಸುವೆ.

**-ವೀರಯ್ಯ ಕುಲಕರ್ಣಿ,** ಕರಜಗಿ

## ಸ್ತುತ್ಯಾರ್ಹ

'ಬದುಕು' ತಿಂಗಳಿಂದ ತಿಂಗಳಿಗೆ ಬದಲಾವಣೆ ಹೊಂದುತ್ತಿರುವುದು ಸ್ತುತ್ಯಾರ್ಹ. ಇಂದಿನ ಸ್ಪರ್ಧಾತ್ಮಕ ದಿನಗಳಲ್ಲಿ 'ಬದುಕು' ತನ್ನ ಬೆಳಕನ್ನು ಎಲ್ಲಾ ದಿಕ್ಕುಗಳಿಗೆ ಪಸರಿಸುತ್ತಿರುವುದು ಅದರ ವಸ್ತುನಿಷ್ಠ ಧೋರಣೆಗೆ ಕನ್ನಡಿ. ಹಾಗೆಯೇ ಕೆಲವು ಅನಾವಶ್ಯಕ ಅಂಕಣಗಳನ್ನು ಕೈಬಿಟ್ಟು ಗಂಭೀರ ಹಾಗೂ ಅತ್ಯವಶ್ಯಕ ವಿಷಯಗಳಿಗೆ ಒತ್ತುಕೊಡಿ.

**-ರಮೇಶ ವಿಟ್ಲಾಪುರ,** ಅರಳಹಳ್ಳಿ

## ಉಗ್ರ ಹೋರಾಟ

ಮುಂದಿನ ಸಂಚಿಕೆಯೊಂದಿಗೆ 'ಮನೆ'

## ರೋಮಾಂಚನಗೊಂಡೆ

ನಾನು ದಿನಾಲು ನಮ್ಮ ಸಮಾಜ ಉಪಾಧ್ಯಾಯರ ಮನೆಗೆ ಹೋಗುತ್ತಿದ್ದೆ....

ಒಂದು ದೀನ ನಮ್ಮ ಸಾರ್ ಮೂಲೆಯಲ್ಲಿದ್ದ ಪುಸ್ತಕಗಳನ್ನು ಸ್ವಚ್ಛ ಮಾಡು ಎಂದಾಗ, ಎಲ್ಲಾ ಬಗೆಯ ಪತ್ರಿಕೆಗಳು ಅಲ್ಲಿದ್ದವು. ಅದರಲ್ಲಿ ಎದ್ದು ಕಾಣುತ್ತಿದ್ದ ಒಂದು ಪುಸ್ತಕವನ್ನು ತೆಗೆದು ನೋಡಿದೆ. ಆ ಪುಸ್ತಕವೇ 'ಬಿಸಿಲ ಬದುಕು'. ಅದರೊಳಗಿರುವ ಒಂದೊಂದು ಪುಟವನ್ನು ತೆಗೆದು ನೋಡಿದಾಗ ಮತ್ತು ಓದಿದಾಗ ನನ್ನ ಮನಸ್ಸು ರೋಮಾಂಚನಗೊಂಡಿತು. ಸಮಾಜದ ಸ್ಪರ್ಧಾತ್ಮಕ ಪ್ರಶ್ನೆಗಳು, ಬಿಟ್ಟ ಸ್ಥಳಗಳು ನೋಡಿದೆ. ಆಗ ನನಗೆ ಅನಿಸಿತು: ಇದು ನಮ್ಮೆಲ್ಲರ ಜ್ಞಾನ ಭಂಡಾರ ವಿದ್ದಾಗೆ...

**-ಕುಂಬಾರ್ ಶ. ಮೂಲಿಮನಿ,** ಹೊಳಲಗುಂದಿ

ಮಾಸಪತ್ರಿಕೆ ಬರದಿದ್ದರೆ ಉಗ್ರ ಹೋರಾಟ ನಡೆಸುವೆ.

-ಎಂ.ವೀರೇಶ್, ಹೊಸ ಮೋಕಾ

## ನಿಮ್ಮೊಂದಿಗಿದ್ದೇವೆ

ಪ್ರಾರಂಭದ ದಿನಗಳಲ್ಲಿ ಮಾರುಕಟ್ಟೆಯಲ್ಲಿ ಪತ್ರಿಕೆ ಸಿಗುತ್ತಿತ್ತು. ಓದಿ ಚೆನ್ನಾಗಿದೆ ಅಂದು ಕೊಳ್ಳುತ್ತಿದ್ದಾಗ ನಾನಿರುವ ಪ್ರದೇಶದಲ್ಲಿ 'ಬದುಕು' ದೊರೆಯುವುದು ನಿಂತು ಹೋಯಿತು. ಪತ್ರಿಕೆ ನಿಂತಿರಬಹು ದೆಂದುಕೊಂಡಿದ್ದೆ. ಪತ್ರಿಕೆ ಚೇತರಿಸಿಕೊಂಡು ವರ್ಷ ಮುಗಿಸಿರುವುದು ಸಂತಸದ ವಿಚಾರ. ಪತ್ರಿಕೆಯ ಸರ್ಕ್ಯುಲೇಶನ್‌ಗೆ ಸೂಕ್ತ ವ್ಯವಸ್ಥೆ ಆಗಲೇ ಬೇಕು. ಇಲ್ಲದಿದ್ದರೆ ಇಂತಹ ಸುಂದರ ಪತ್ರಿಕೆ ಓದುಗರ ಕೈಗೆ ದೊರೆಯದೆ ಓದುಗರು ಕಳೆದುಕೊಳ್ಳುತ್ತಾರೆ.

ನಾನಂತೂ ಪತ್ರಿಕೆ ಎಲ್ಲಿದೆ ಅಂತ Trace ಮಾಡಿಯಾದರೂ ಹಿಡಿಯುತ್ತೇನೆ. ಕೊನೆಗೆ ನಿಮ್ಮ ಕಛೇರಿಗೆ ಬಂದಾದರೂ ಪಡೆಯುತ್ತೇನೆ. ಪತ್ರಿಕೆ ಇನ್ನೂ ಚೆನ್ನಾಗಿ ಬರಲಿ. ನಿಮ್ಮೊಂದಿಗೆ ನಾವಿದ್ದೇವೆ.

-ಉದಯ ಕಾನತ್ತೂರ್, ಬೆಂಗಳೂರು

ಪುಟ 57ರಲ್ಲಿ ಪ್ರಕಟವಾಗಿರುವ ರೈಲ್ವೆ ರಿಕ್ರೂಟ್‌ಮೆಂಟ್ ಬೋರ್ಡ್‌ನ ಉದ್ಯೋಗಾ ವಕಾಶ ಮಾಹಿತಿಯಲ್ಲಿ ಸಿಕಂದರಾಬಾದ್‌ನ ಪಿನ್ ಕೋಡ್ ಸಂಖ್ಯೆ ತಪ್ಪಾಗಿ (560 017) ಮುದ್ರಿಸ ಲ್ಪಟ್ಟಿದೆ. ಇದು ಬೆಂಗಳೂರು ನಗರದಲ್ಲಿರುವ ದೂರವಾಣಿ ನಗರಕ್ಕೆ ಸಂಬಂಧಿಸಿದೆ. ಸರಿಯಾದ ಪಿನ್‌ಕೋಡ್ ಸಂಖ್ಯೆ 500 017 ಎಂದಿರಬೇಕಿತ್ತು.

-ಹ.ಮುರಳೀಧರ ರಾವ್, ಬೆಂಗಳೂರು

## ನೆಚ್ಚಿನ ಪತ್ರಿಕೆ

ಜಗತ್ತಿನ ವಿಷಯಗಳನ್ನೆಲ್ಲಾ ಹೊತ್ತು ಬೆಂಗಳೂರಿನಿಂದ ರಾಜ್ಯದ ಮೂಲೆ ಮೂಲೆ ತಲುಪುವ 'ಬದುಕು' ನನ್ನ ನೆಚ್ಚಿನ ಪತ್ರಿಕೆ.

-ಸುನಿತಾ ಹಿರೇಮಠ, ಹೊಸಪೇಟೆ

## ಏನು ಮಾಡುವಿರಿ ?

'ಬದುಕು' ಅಭಿಮಾನಿಗಳು ನಿಮಗೆ ಎಷ್ಟೊಂದು ಸಂಖ್ಯೆಯಲ್ಲಿ ಪತ್ರ ಬರೆಯುತ್ತಾರೆ. ತಾವು ಅದನ್ನೆಲ್ಲಾ ಸಂಗ್ರಹಿಸಿ ಎಲ್ಲಿ ಇಡುತ್ತೀರಿ? ಅಥವಾ ಸುಟ್ಟು ಹಾಕುವಿರಾ ?

-ಪಿ. ಕೃಷ್ಣಾ, ಹೊನ್ನಾವರ

## ಕೊರತೆ

'ಬದುಕು' ಮಾಸ ಪತ್ರಿಕೆಯಾಗಿರುವುದೇ ನಿಮ್ಮ ನೆಚ್ಚಿನ ಈ ಓದುಗನಿಗೆ ಕೊರತೆಯೆನ್ನಿಸಿದೆ. ಇದು ಆದಷ್ಟು ಬೇಗ ವಾರಪತ್ರಿಕೆಯಾಗಲಿ.

-ರಾಜಸಾಬ, ಕಾರಟಗಿ

## ಸುಂದರ

ಆಗಸ್ಟ್ ಸಂಚಿಕೆ ಸುಂದರವಾಗಿ ಮೂಡಿ ಬಂದಿದೆ. ಮುಖಪುಟದ ಚಿತ್ರ ಉತ್ತಮವಾಗಿತ್ತು.

-ವಿಜೇತಾ ವಿ.ಪೈ, ಹೊನ್ನಾವರ

## ಅರ್ಥ - ಅಪಾರ್ಥ

ಪೃಥ್ವಿಯ ಜನಸಂಖ್ಯೆ **600 ಕೋಟಿ ರೂ.** ಗಡಿಯನ್ನು ಎಂದು ದಾಟುವುದು ಎಂಬುದನ್ನು ನಿರ್ದಿಷ್ಟವಾಗಿ ಹೇಳಲು ಆಗುವುದಿಲ್ಲ.
[*ಸಂಯುಕ್ತ ಕರ್ನಾಟಕ*, 11.7.98] -ಎಸ್.ವಿ. ಸೋಮಶೇಖರ, ರಾಮದುರ್ಗ.

ಸಾಮಾನ್ಯವಾಗಿ **ಬೇಗದ** ಬೌಲರ್‌ಗಳು ಹೀಗಾಗುತ್ತಾರೆ. ಶ್ರೀನಾಥ್ ಇದಕ್ಕೆ ತಾಜಾ ತಾಜಾ ಉದಾಹರಣೆ.
[*ರಾಜು ಪತ್ರಿಕೆ*, ಆಗಸ್ಟ್ 16-22, 1998] - ಮಲ್ಲಯ್ಯ ಕೆಂಭಾವಿ, ಮಸ್ಕಿ.

ಅಪಘಾತವಾದ ಮೇಲೆ ಸಂಚಾರ ಪೊಲೀಸರು ಸ್ಥಳಕ್ಕೆ ಧಾವಿಸಿ ಸೂರ್ಯಕಾಂತ್ ಅವರ ಮೃತದೇಹವನ್ನು ರಾಮಯ್ಯ ಆಸ್ಪತ್ರೆಗೂ ಕಾರಿನಲ್ಲಿದ್ದ ಮಹಿಳೆಯನ್ನು ನಿಮ್ಹಾನ್ಸ್ ಆಸ್ಪತ್ರೆಗೂ **ಸೇರಿದ್ದರು.**
[*ಸಂಜೆ ವಾಣಿ*, 4.8.98] -ಎಂ. ವೀರೇಶ್, ಹೊಸ ಮೋಕಾ.

ದೇಶ ಮುಂದೆ ಬರಬೇಕಾದರೆ ಬಡತನ ರೇಖೆ **ಅಳಿಸಬೇಕಂತೀರಿ.** ತಗೊಳ್ಳಿ ಈ ರಬ್ಬರ್....!
[*ಬಿಸಿಲ ಬದುಕು*, ಆಗಸ್ಟ್ 98] -ಕೆ.ವರಗಪ್ಪ, ಶ್ರೀಧರಗಡ್ಡೆ.

ಸರ್ಕಾರದ ಈ ಕ್ರಮದಿಂದಾಗಿ **ಲಂಚದ ಜೊತೆಗೆ** ಅರ್ಹತೆಯಿದ್ದವರಿಗೆ ಆಯ್ಕೆಯಾಗಲು ಅವಕಾಶ ಸಿಗಲಿದೆ ಎಂದ ಭೈರೇಗೌಡರು.......
[*ಜನತಾ ವಾಣಿ*, 5.7.98] -ಬಸವಪ್ರಭು ಸಿ.ಯು., ದಾವಣಗೆರೆ.

ಇಲ್ಲಿಯ ಚನ್ನಗಿರಿ ರಸ್ತೆಯಲ್ಲಿ, ರಂಗಪ್ಪ ವೃತ್ತದಿಂದ ಮಾಧವಚಾರ್ ವೃತ್ತದ ಕಡೆ ಬರುತ್ತಿದ್ದ ಲಾರಿಯು **ಹೆಣ್ಣಿನ** ಗಾಡಿಯನ್ನು ತಳ್ಳಿಕೊಂಡು ಹೋಗುತ್ತಿದ್ದ ಫೈರೋಜ್ ಖಾನ್ ಎಂಬ ಯುವಕನ ..........
[*ಪ್ರಜಾ ವಾಣಿ*, 18.7.98] -ಈರಣ್ಣ, ಮೈಲನಹಳ್ಳಿ.

ನೀವು ಓದುವ ಪತ್ರಿಕೆಗಳಲ್ಲಿ ವಾಕ್ಯದ ಅರ್ಥವನ್ನೇ ಕಳೆಯುವ ಇಂಥ ಹಲವು ಸಾಲುಗಳು ಆಗಾಗ ನುಸುಳುವುದುಂಟು. ಹೀಗೆ ಉಂಟಾಗುವ ದೋಷಗಳು ಮೇಲ್ನೋಟಕ್ಕೆ ತಮಾಷೆಯಾಗಿ ಕಂಡರೂ ಗಂಭೀರ ಪರಿಣಾಮ ಬೀರಬಲ್ಲವು. ಸ್ಥಳೀಯ ಪತ್ರಿಕೆಗಳಲ್ಲಿ, ರಾಜ್ಯ-ರಾಷ್ಟ್ರ ಮಟ್ಟದ ಪತ್ರಿಕೆಗಳಲ್ಲಿ ಇಂಥ ದೋಷಗಳನ್ನು ಹುಡುಕಿ ನಮಗೆ ಕಳಿಸಿಕೊಡಿ. ನಿಮ್ಮ ಹೆಸರಿನೊಂದಿಗೆ ಪ್ರಕಟಿಸಲಾಗುವುದು. ನೀವು ದೋಷ ಗಮನಿಸಿದ ಪತ್ರಿಕೆಯ ಅರ್ಥಾಂತರವಾದ ಭಾಗವನ್ನು ಕತ್ತರಿಸಿ ಕಳಿಸುವುದು ಅತ್ಯಗತ್ಯ. ಪತ್ರಿಕೆಯ ಹೆಸರು, ದಿನಾಂಕವೂ ಇರಬೇಕು.

-ಸಂ.

ರಾಜಕಾರಣಿಗಳ ಪ್ರಣಯ

# ಕ್ಲಿಂಟನ್ ತಪ್ಪೊಪ್ಪಿಗೆ ರಹಸ್ಯವೇನು ?



" ನಾನು ದೇವರಲ್ಲ, ಸಾಧಾರಣ ಮಾನವ.
ಉಪ್ಪು, ಹುಳಿ, ಖಾರ ತಿನ್ನುತ್ತೇನೆ.
ಹಾಗಾಗಿ ಈ ತಪ್ಪಾಗಿದೆ. ಆದರೆ ಇದು ನನ್ನ ಖಾಸಗಿ ಬದುಕು.
ಇದಕ್ಕೂ ದೇಶದ ಆಡಳಿತಕ್ಕೂ ಯಾವ ಸಂಬಂಧವೂ ಇಲ್ಲ.
ದೇಶದ ಅಧ್ಯಕ್ಷನಾದ ಮಾತ್ರಕ್ಕೆ
ನನಗೂ ಒಂದು ಖಾಸಗಿ ಬದುಕಿಲ್ಲವೇ ? "

.... ನಿಮಗೆ ಈ ರಹಸ್ಯ ಗೊತ್ತೇ ?

ಕ್ಲಿಂಟನ್ ಯಾಕೆ ತಾವು ಮಾಡಿದ ಹಾದರವನ್ನು ಬಹಿರಂಗವಾಗಿ ಒಪ್ಪಿಕೊಂಡರು ಎಂಬುದರ ಅಂದಾಜಾದರೂ ನಿಮಗಿದೆಯೇ ? ಅವರು ಜಗತ್ತಿನೆದುರು ಹೃದಯ ಬಿಚ್ಚಿಟ್ಟದ್ದೇಕೆಂದರೆ. . . . .

-ಕಾನೂನಿನ ಮುಂದೆ ಸುಳ್ಳು ಹೇಳಬಾರದು ಎಂಬ ಪ್ರಾಮಾಣಿಕತೆಗಾಗಿ ಅಲ್ಲ!

-ಮೋನಿಕಾ ಜೊತೆ ಅನೈತಿಕ ಸಂಬಂಧ ಇಟ್ಟುಕೊಂಡಿದ್ದು ತಪ್ಪು ಎಂದು ಅಂತರಾತ್ಮಕ್ಕೆ ಅನಿಸಿದ್ದಕ್ಕಾಗಿ ಅಲ್ಲ!

-ನ್ಯಾಯಾಲಯದ ಹೆದರಿಕೆಗಾಗಿಯಾ ಅಲ್ಲ! ಹಾಗಾದರೆ ಯಾಕೆ ?

ಯಾಕೆಂದರೆ, ಮೋನಿಕಾಳ ಒಂದು ಪಾರ್ಟಿಡ್ರೆಸ್ ಮೇಲೆ ಇರುವ ವೀರ್ಯದ ಕಲೆ ತಮ್ಮದೇ ಇರಬಹುದು ಎಂಬ ಸಂಶಯದಿಂದ!

ನೆನಪಿನಲ್ಲಿಡಿ! ಬರೀ 'ಸಂಶಯ'ಕ್ಕೆ ಹೆದರಿ ಕ್ಲಿಂಟನ್ ತಮ್ಮ ತಪ್ಪನ್ನು ಒಪ್ಪಿಕೊಂಡರು.

ದಡ್ಡ ಎನ್ನಬೇಡಿ. ನಿಜಕ್ಕೂ ಅದು 1998ನೇ ಇಸ್ವಿಯ ಅತಿ ಬುದ್ಧಿವಂತ ರಾಜಕೀಯ ನಿರ್ಧಾರ. ಚದುರಂಗದಾಟದಲ್ಲಿ ವಿ.ಆನಂದ್ ಇಟ್ಟ ಚೆಕ್ಕಿಗೆ ಗ್ಯಾರಿ ಕ್ಯಾಸ್ಪರೋವ್ ಉತ್ತರಿಸುವ ಬಗೆ ಅದು!

ಅಮೇರಿಕಾದ ರಾಜಕೀಯ ಚದುರಂಗದಲ್ಲಿ ಕ್ಲಿಂಟನ್ ಸೋತರು ಎಂದೇ ಎಲ್ಲರೂ ಅಂದುಕೊಳ್ಳುವಾಗ, ಕ್ಲಿಂಟನ್ ಒಂದು ಅದ್ಭುತ ನಡೆ ನಡೆಸಿ ಆಟವನ್ನು ಗೆಲ್ಲುವ ಹಂತ ತಲುಪಿದ್ದಾರೆ.

ಇಷ್ಟು ಕಾಲ ಕ್ಲಿಂಟನ್ ತಮ್ಮ ಮತ್ತು ಮೋನಿಕಾ ನಡುವೆ ಅನೈತಿಕ ಸಂಬಂಧ ಇಲ್ಲವೇ ಇಲ್ಲ ಎಂದು ಸಾಧಿಸುತ್ತಿದ್ದರು. ಯಾಕೆಂದರೆ ಈ ಅನೈತಿಕ ಸಂಬಂಧ ಇದ್ದುದಕ್ಕೆ ಯಾವ ಸಾಕ್ಷ್ಯವೂ ಇಲ್ಲ ಎಂದೇ ಅವರು ಭಾವಿಸಿದ್ದರು.

ಯಾರದಾದರೂ ಬಾಯಿ ಹೇಳಿಕೆಯಿಂದಾಗಲೀ, ವೈಟ್‌ಹೌಸ್ ಸಂದರ್ಶಕರ ದಾಖಲೆಯಿಂದಾಗಲೀ, ಪರಸ್ಪರ ವಿನಿಮಯವಾದ ಉಡುಗೊರೆಗಳಿಂದಾಗಲೀ, ಇಬ್ಬರ ನಡುವಿನ ಲೈಂಗಿಕ ಸಂಬಂಧವನ್ನು ನ್ಯಾಯಾಲಯದಲ್ಲಿ ಕಾನೂನು ಬದ್ಧವಾಗಿ ದೃಢಪಡಿಸಲು ಸಾಧ್ಯವಿಲ್ಲ. ಕ್ಲಿಂಟನ್ ಮತ್ತು ಅವರ ಗ್ಯಾಂಗು ಅದೇ ಧೈರ್ಯದಲ್ಲೇ ಈ ವರೆಗೂ ಇತ್ತು. ಅವರ ಹಾದರವನ್ನು 'ಸುಳ್ಳು ವದಂತಿ' ಎಂದೇ ಸಾಧಿಸುತ್ತ ಬಂದಿತ್ತು. ಅದೇ ಧೈರ್ಯದಲ್ಲೇ ನ್ಯಾಯಾಲಯಕ್ಕೆ ದೇವರಾಣೆ ಮಾಡಿ ಕ್ಲಿಂಟನ್ ಸುಳ್ಳು ಹೇಳಿದರು.

ಹೀಗಿರುವಾಗ ಹಠಾತ್ತಾಗಿ ಮೋನಿಕಾ ಡ್ರೆಸ್ ಮೇಲೆ ಕ್ಲಿಂಟನ್ ವೀರ್ಯ ಸಿಕ್ಕಿದೆ ಎಂದರೆ!

ಕ್ಲಿಂಟನ್ ಮತ್ತು ಗ್ಯಾಂಗಿನವರಿಗೆ ಆಘಾತವಾಗದೇ ಇರುತ್ತದೆಯೇ ?

ಅದು ನಿಜವಾಗಿಬಿಟ್ಟರೆ ಮುಗಿಯಿತು. ಇಬ್ಬರ ನಡುವಿನ ಲೈಂಗಿಕ ಸಂಬಂಧಕ್ಕೆ ಅದು ತಳ್ಳಿಹಾಕಲಾರದಂಥ ಸಾಕ್ಷ್ಯವಾಗುತ್ತದೆ. ಅಮೆರಿಕದ ಅಧ್ಯಕ್ಷರ ವೀರ್ಯ ಆತನ ಕೆಲಸದಾಕೆಯ ಬಟ್ಟೆಯ ಮೇಲೆ ಬಿದ್ದಿದೆ ಎಂದರೆ ಏನರ್ಥ ? ಕ್ಲಿಂಟನ್ ರಹಸ್ಯ ಸಂಬಂಧ ಬಯಲು ಮಾಡಲು ಇದಕ್ಕಿಂತ ಇನ್ನೇನು ಸಾಕ್ಷಿ ಬೇಕು ?

ಆಗಲೇ ಕಾಡಿದ್ದು ಕ್ಲಿಂಟನ್‌ಗೆ ಅನುಮಾನ : ''ಆಕೆಯ ಬಟ್ಟೆಯ ಮೇಲಿರುವುದು ನಿಜವಾಗಿಯೂ ನನ್ನ ಕಲೆಯೇ ''

''ಇದ್ದರೂ ಇರಬಹುದು, ಇಲ್ಲದಿದ್ದರೂ ಇರಬಹುದು''.

''ಇರುವ ಸಾಧ್ಯತೆಯಂತೂ ಇದೆಯಲ್ಲ''.

''ಇದ್ದರೆ, ಈವರೆಗೆ ನಾನು ಹೇಳಿದ್ದು ಸುಳ್ಳು ಎಂಬುದು ಸಾಬೀತಾಗುತ್ತದೆ. ಆಗ ಕಾನೂನಿಗೆ ಸುಳ್ಳು ಹೇಳಿದ ಅಪರಾಧದಲ್ಲಿ ಅಧಿಕಾರ ಕಳೆದುಕೊಳ್ಳುವುದಲ್ಲದೇ ಶಿಕ್ಷೆ ಅನುಭವಿಸಬೇಕಾಗುತ್ತದೆ''.

''ನನ್ನ ವೀರ್ಯ ಇಲ್ಲದಿದ್ದರೆ.... ಬಚಾವ್,



ಆರಂಭವಾಯಿತು ಗುಪ್ತ ಸಮಾಲೋಚನೆ. ಈ ಚರ್ಚೆಯಲ್ಲಿ ಕೇವಲ ನಾಲ್ಕು ಜನರು ಮಾತ್ರ ಇರುತ್ತಿದ್ದರು. ಬಿಲ್ ಕ್ಲಿಂಟನ್, ಹೆಂಡತಿ ಹಿಲರಿ ಕ್ಲಿಂಟನ್, ವಕೀಲರಾದ ಡೇವಿಡ್ ಕೆಂಡಲ್ ಮತ್ತು ಮಿಕಿ ಕ್ಯಾಂಟರ್... ಇಷ್ಟೇ.

ಮೋನಿಕಾ ಜತೆ ಇದ್ದ ಲೈಂಗಿಕ ಸಂಬಂಧದ ಜೊತೆಗೆ ಆಕೆಯಿಂದ ನ್ಯಾಯಾಲಯಕ್ಕೆ ಸುಳ್ಳು ಹೇಳಿಕೆ ನೀಡಿಸಿದ್ದನ್ನೂ ಒಪ್ಪಿಕೊಂಡರೆ ಶಿಕ್ಷೆ ತಪ್ಪಿದ್ದಲ್ಲ.

''ಅದಕ್ಕೇ ಆ ಭಾಗವನ್ನು ಬಿಟ್ಟು ಕೇವಲ ಮೋನಿಕಾ ಜತೆ ಇದ್ದ ಸಂಬಂಧವನ್ನು ಮಾತ್ರ ಒಪ್ಪಿಕೊಳ್ಳಬೇಕು. ಹಾಗೂ ನ್ಯಾಯಾಲಯಕ್ಕೆ ಮೋನಿಕಾಳಿಂದ ಸುಳ್ಳು ಹೇಳಿಸಿದ್ದನ್ನು ನಿರಾಕರಿಸಬೇಕು.'' ಎಂಬುದು ಚರ್ಚೆಯಲ್ಲಿ ತೀರ್ಮಾನವಾದ ಅಂಶ. ಇಷ್ಟಕ್ಕೂ ಸಾಕ್ಷ್ಯ ಇರುವುದು ಲೈಂಗಿಕ ಸಂಪರ್ಕಕ್ಕೆ ಮಾತ್ರ. ಸುಳ್ಳು ಹೇಳಿಕೆ ನೀಡಿಸಿದ್ದಕ್ಕೆ ಯಾವ ಸಾಕ್ಷ್ಯವೂ ಇಲ್ಲವಲ್ಲ!

ಸರಿ ಏನು ಹೇಳಬೇಕು ಎಂಬುದು ನಿರ್ಧಾರವಾಯಿತು. ಆದರೆ ಹೇಳುವುದನ್ನು ಹೇಗೆ ಹೇಳುವುದು ? ಜನರಿಗೆ ಮನವರಿಕೆಯಾಗುವಂತೆ ಆದರೆ, ಇದೆಯೋ, ಇಲ್ಲವೋ ಹೇಗೆ ತಿಳಿಯುವುದು? ಆಕೆಯ ಆ ಡ್ರೆಸ್ ಈಗ ನ್ಯಾಯಾಲಯದಲ್ಲಿದೆಯಲ್ಲ!''

ಈ ಗೊಂದಲದಲ್ಲಿ ಬಿದ್ದ ಕ್ಲಿಂಟನ್, ಅಧಿಕಾರ ಕಳೆದುಕೊಂಡು, ಶಿಕ್ಷೆ ಅನುಭವಿಸುವ ರಿಸ್ಕ್ ತೆಗೆದುಕೊಳ್ಳಲು ಇಚ್ಛಿಸಲಿಲ್ಲ.

''ಹಾಗಾದರೆ ಏನು ಮಾಡಲಿ ? ಸತ್ಯವನ್ನು ಒಪ್ಪಿಕೊಂಡು ಬಿಡಲೇ ? ಆಗ ಇಷ್ಟು ದಿನ ಸುಳ್ಳು ಹೇಳಿದ್ದು ಬಯಲಾಗುತ್ತದೆ, ಸುಳ್ಳಗಾರ ಎಂಬ ಹಣೆಪಟ್ಟಿ ತಗಲುತ್ತದೆ. ಮರ್ಯಾದೆ ಹೋಗುತ್ತದೆ.''

''ಅತ್ತ ದರಿ ಇತ್ತ ಪುಲಿ ಅತ್ತ. ಅಧಿಕಾರ ಹೋಗುತ್ತದೆ. ಇತ್ತ ಮರ್ಯಾದೆ ಹೋಗುತ್ತದೆ, ಏನು ಮಾಡಲಿ ?''

ಇಲ್ಲೇ ಕ್ಲಿಂಟನ್ ಅದ್ಭುತ ನಿರ್ಧಾರ ತೆಗೆದುಕೊಂಡಿದ್ದು...

''ಮರ್ಯಾದೆ ಹೋದರೆ ಹೋಗಲಿ. ಅಧಿಕಾರ ಹೋಗಬಾರದು ! ಆಮೇಲೆ ಹೇಗೂ 2 ವರ್ಷ ಅಧಿಕಾರದಲ್ಲಿ ಇರುತ್ತೇನಲ್ಲ, ಆಗ ವರ್ಚಸ್ಸು ಹೆಚ್ಚಿಸಿಕೊಳ್ಳಬಹುದು'' - ಎಂದು ಯೋಚಿಸಿದ ಕ್ಲಿಂಟನ್ ಸತ್ಯವನ್ನು ಒಪ್ಪಿಕೊಂಡು ಕಾನೂನಿನ ಹಿಡಿತದಿಂದ ಪಾರಾಗಲು ಉದ್ದೇಶಿಸಿದರು.

''ಆದರೆ ಎಷ್ಟು ಸತ್ಯ ಹೇಳುವುದು ? ಪೂರ್ಣ ಸತ್ಯವನ್ನು ಹೇಳಿಬಿಡುವುದೇ?''

''ಛೆ... ಹಾಗೆ ಮಾಡಿದರೆ ಮತ್ತಷ್ಟು ಸಮಸ್ಯೆಗೆ ಸಿಕ್ಕಿಕೊಳ್ಳುತ್ತೇನೆ.''

ಹಾಗಾಗಿ ಈ ಸತ್ಯ ಹೇಳುವಾಗಲೂ ಒಂದಷ್ಟು ಸುಳ್ಳು ಹೇಳಿ ತನಗೆ ಮುಂದೆ ಅನುಕೂಲ ಆಗುವಂತೆ ಮಾಡಿಕೊಳ್ಳಬೇಕು'' - ಎಂಬ ನಿರ್ಧಾರಕ್ಕೆ ಬಂದರು ಕ್ಲಿಂಟನ್.

ಅಮೇರಿಕದ ಅತಿ ಉತ್ತಮ ವಕೀಲರೊಂದಿಗೆ

## ಹಗರಣ ಬೆಳೆದ ಬಗೆ

- **1995 ಬೇಸಿಗೆ :** ಆಗ ತಾನೇ ಕಾಲೇಜು ಮುಗಿಸಿದ 21ರ ಯುವತಿ ಮೋನಿಕಾ ಲೆವಿನ್‌ಸ್ಕಿ ವೈಟ್‌ಹೌಸ್‌ನಲ್ಲಿ ಇಂಟರ್ನಿ ಆಗಿ ಸೇರ್ಪಡೆ.
- **1995 ನವೆಂಬರ್ :** ವೈಟ್‌ಹೌಸ್‌ನ ಔತಣಕೂಟವೊಂದರಲ್ಲಿ ಮೋನಿಕಾ ಬಗ್ಗೆ ಕ್ಲಿಂಟನ್ ಆಕರ್ಷಿತ.
- **1996 ಆರಂಭ :** ಕ್ಲಿಂಟನ್ ಕಚೇರಿಗೆ 4 ಬಾಗಿಲು ದೂರವಿರುವ ಕಡೆ, ಪೆಂಟಾಗಾನ್ ಕಚೇರಿಯಲ್ಲಿ ಮೋನಿಕಾಗೆ ಕೆಲಸ. ಪತ್ರಗಳು ಹಾಗೂ ದೂರವಾಣಿ ಕರೆಗಳನ್ನು ಸ್ವೀಕರಿಸುವುದು ಕರ್ತವ್ಯ.
- **1996 ಮಧ್ಯಭಾಗ :** ಕ್ಲಿಂಟನ್ ಹಾಗೂ ಮೋನಿಕಾ ನಡುವೆ ನಿಕಟ ಸಂಪರ್ಕ. ಪರಸ್ಪರ ಉಡುಗೊರೆಗಳ ವಿನಿಮಯ. ಹೊತ್ತಲ್ಲದ ಹೊತ್ತಲ್ಲಿ ವೈಯಕ್ತಿಕ ಭೇಟಿ, ದೂರವಾಣಿ ಕರೆ, ಕೊರಿಯರ್ ಪತ್ರ, ಈ-ಮೇಲ್ ಇತ್ಯಾದಿ.
- **1996ರ ಕೊನೆಯ ಭಾಗ :** ಇಬ್ಬರ ನಡುವೆ ಅನೈತಿಕ ಸಂಬಂಧ ತೀವ್ರ. ಮೋನಿಕಾಗೆ ಸಹೋದ್ಯೋಗಿ ಲಿಂಡಾ ಟ್ರಿಪ್ ಹೊಸ ಸ್ನೇಹಿತೆ.
- **1997ರ ಮಧ್ಯಭಾಗ :** ಲಿಂಡಾ ಟ್ರಿಪ್‌ಗೆ ಕ್ಲಿಂಟನ್ - ಮೋನಿಕಾ ಸಂಬಂಧದ ಬಗ್ಗೆ ಮೋನಿಕಾಳಿಂದಲೇ ವಿವರಣೆ. ಪೌಲಾ ಜೋನ್ಸ್‌ಳಿಂದ ಕ್ಲಿಂಟನ್ ವಿರುದ್ಧ ಲೈಂಗಿಕ ಕಿರುಕುಳದ ಕೋರ್ಟ್ ದಾವೆ.
- **1997ರ ಕೊನೆಯ ಭಾಗ :** ಲಿಂಡಾಗೆ ಪ್ರಕರಣದಲ್ಲಿ ಅತೀವ ಆಸಕ್ತಿ, ಮೋನಿಕಾಳ ಹೇಳಿಕೆಗಳು ಗುಪ್ತವಾಗಿ ಲಿಂಡಾ ಟ್ರಿಪ್ ಟೇಪ್‌ರೆಕಾರ್ಡರ್‌ನಲ್ಲಿ ಧ್ವನಿ ಮುದ್ರಣ. ಪೌಲಾ ಜೋನ್ಸ್ ಪ್ರಕರಣಕ್ಕೆ ವ್ಯಾಪಕ ಪ್ರಚಾರ.
- **12. 1. 1998 :** ಪೌಲಾ ಜೋನ್ಸ್ ಪ್ರಕರಣದಿಂದ ಹುಮ್ಮಸ್ಸು ಪಡೆದ ಲಿಂಡಾ ಟ್ರಿಪ್‌ಳಿಂದ ಕೆನೆತ್ ಸ್ಟಾರ್ ಸಂಪರ್ಕ. ಪೌಲಾ ವಕೀಲರಿಂದ ಲಿಂಡಾ ಭೇಟಿ.
- **13-1-98 :** ಮೋನಿಕಾ-ಕ್ಲಿಂಟನ್ 'ಸೆಕ್ಸ್‌ಸ್ಕ್ಯಾಂಡಲ್' ಬಹಿರಂಗ, ಪತ್ರಿಕೆಗಳಲ್ಲಿ ವ್ಯಾಪಕ ಪ್ರಚಾರ.
- **16-1-98 :** ಫೆಡರಲ್ ಇನ್‌ವೆಸ್ಟಿಗೇಶನ್ ಬ್ಯೂರೋದಿಂದ ಮೋನಿಕಾಳ ವಿಚಾರಣೆ. - ಅದೆಲ್ಲ ಸುಳ್ಳು ಎಂದು ಮೋನಿಕಾ ಪ್ರಮಾಣ.
- **17-1-98 :** ಈ ಲೈಂಗಿಕ ಹಗರಣ ಸುಳ್ಳು ವದಂತಿ - ಎಂದು ಕ್ಲಿಂಟನ್‌ರಿಂದ ನ್ಯಾಯಾಲಯಕ್ಕೆ ಪ್ರಮಾಣ.
- **21-1-98 :** ಕೆನೆತ್ ಸ್ಟಾರ್‌ರಿಂದ ಗ್ರಾಂಡ್ ಜೂರಿ ತನಿಖೆ ಆರಂಭ. ಒಂದೊಂದಾಗಿ ಸಾಕ್ಷಿಗಳು-ಸಾಕ್ಷ್ಯಗಳ ಪರಿಶೀಲನೆ.
- **6-8-98 :** ಕ್ಲಿಂಟನ್ ಜೊತೆ ಅನೈತಿಕ ಸಂಬಂಧ ಇರುವುದಾಗಿ ಗ್ರಾಂಡ್ ಜೂರಿಗೆ ಮೋನಿಕಾ ಹೇಳಿಕೆ ( ಹಿಂದೆ ನ್ಯಾಯಾಲಯಕ್ಕೆ ನೀಡಿದ ಹೇಳಿಕೆಗೆ ವಿರೋಧಾಭಾಸದ ಹೇಳಿಕೆ).
- **7-8-98 :** ಮೋನಿಕಾ ಡ್ರೆಸ್ ಮೇಲೆ ಇದೆಯೆನ್ನಲಾದ ಕ್ಲಿಂಟನ್ ವೀರ್ಯದ ಡಿ.ಎನ್.ಎ. ಪರೀಕ್ಷೆಗೆ ಗ್ರಾಂಡ್ ಜೂರಿ ನಿರ್ಧಾರ.
- **15-8-98 :** ಅನೈತಿಕ ಸಂಬಂಧ ಇದ್ದದನ್ನು ಒಪ್ಪಿಕೊಳ್ಳಲು ಜೂರಿ ನಿರ್ಧಾರ.
- **18-8-98 :** ವೈಟ್ ಹಾಸ್‌ನಿಂದ ಕ್ಲೋಸ್ಡ್ ಸರ್ಕಿಟ್ ಟಿವಿ ಮೂಲಕ ಗ್ರಾಂಡ್ ಜೂರಿ ಎದುರು ಕ್ಲಿಂಟನ್ ತಪ್ಪೊಪ್ಪಿಗೆ.

## ಕಳಂಕಿತ ಕ್ಲಿಂಟನ್



- ಅಕ್ರಮ ಲೈಂಗಿಕ ಸಂಬಂಧ ಹೊಂದಿದ್ದು ಅಮೇರಿಕದ ಅಧ್ಯಕ್ಷ ಕ್ಲಿಂಟನ್ ಮಾತ್ರವಲ್ಲ, ಕೆನಡಿ ಸೇರಿದಂತೆ ಇನ್ನೂ ಹಲವರಿದ್ದಾರೆ. ಆದರೆ ಈ ರೀತಿ ಸಾರ್ವಜನಿಕವಾಗಿ ಮಾನ ಕಳೆದು ಕೊಂಡವರೆಂದರೆ ಕ್ಲಿಂಟನ್ ಮಾತ್ರ.
- ಗ್ರಾಂಡ್ ಜೂರಿ ವಿಚಾರಣೆಗಾಗಿ ನ್ಯಾಯಧೀಶರ ಮುಂದೆ ಹಾಜರಾದ ಪ್ರಥಮ ಅಮೇರಿಕ ಅಧ್ಯಕ್ಷ ಎಂಬ ಕುಖ್ಯಾತಿಯೂ ಕ್ಲಿಂಟನ್‌ಗೆ ದಕ್ಕಿದೆ.
- ಕ್ಲಿಂಟನ್‌ಗೆ ಸಂಸತ್ತಿನಲ್ಲಿ ಛೀಮಾರಿ ಹಾಕುವ ಸಂಭವವಿದೆ. ಹೀಗೇನಾದರೂ ಆದರೆ ಛೀಮಾರಿ ಹಾಕಿಸಿಕೊಂಡ ಪ್ರಥಮ ಅಮೇರಿಕ ಅಧ್ಯಕ್ಷರಾಗಿಯೂ ಕ್ಲಿಂಟನ್‌ಗೆ ಅಪಖ್ಯಾತಿ ದೊರೆಯುತ್ತದೆ.
- ಬಹಳ ಹಿಂದೆ 1868ರಲ್ಲಿ ಅಂಡ್ರೂ ಜಾನ್‌ಸನ್ ರಾಜಕಾರಣಕ್ಕೆ ಸಂಬಂಧಿಸಿದ ಹಗರಣವೊಂದರಲ್ಲಿ ಛೀಮಾರಿ ಹಾಕಿಸಿ ಕೊಳ್ಳುವ ಮಟ್ಟಕ್ಕೆ ಹೋಗಿದ್ದರು. ಆದರೆ ಕೊನೆಯಗಳಿಗೆಯಲ್ಲಿ ಸಂಸತ್ತಿನಲ್ಲಿ ಛೀಮಾರಿ ಧಾಕಿಸಿಕೊಳ್ಳದೇ ಜಯಗಳಿಸಿದರು.
- ನಂತರ ರಿಚರ್ಡ್ ನಿಕ್ಸನ್ ಕೂಡ ಛೀಮಾರಿ ಹಾಕಿಸಿಕೊಳ್ಳುವ ಹಂತ ತಲುಪಿದ್ದರು. ಆದರೆ ಕೂಡಲೇ ರಾಜೀನಾಮೆ ನೀಡಿದರು. ಈಗ ಕ್ಲಿಂಟನ್ ಪರಿಸ್ಥಿತಿ ಏನಾಗುತ್ತದೆ ಕಾದು ನೋಡಬೇಕು.

ಹೇಳಬೇಕು. ಕಾನೂನಿನಿಂದ ನುಣುಚಿಕೊಳ್ಳುವಂತೆ ಹೇಳಬೇಕು. ಪ್ರಕರಣ ಮುಗಿಸುವಂತೆ ಹೇಳ ಬೇಕು. ಇದಕ್ಕಾಗಿ ಈ ಕೆಳಗಿನ ಸೂತ್ರಗಳನ್ನು ರೂಪಿಸಲಾಯಿತು.

- "ಹೌದು ತಪ್ಪು ಮಾಡಿದ್ದೇನೆ. ನನ್ನಿಂದ ಅಪರಾಧವಾಗಿದೆ" - ಎಂದು ನೇರವಾಗಿ ಹೇಳುವುದು. ಇದರಿಂದ ಜನ ಕ್ಲಿಂಟನ್ ಪ್ರಾಮಾಣಿಕ ಎಂದುಕೊಳ್ಳುತ್ತಾರೆ.
- "ನಾನು ದೇವರಲ್ಲ, ಸಾಧಾರಣ ಮಾನವ. ಉಪ್ಪು, ಹುಳಿ, ಖಾರ ತಿನ್ನುತ್ತೇನೆ. ಹಾಗಾಗಿ ಈ ತಪ್ಪಾಗಿದೆ. ಆದರೆ ಇದು ನನ್ನ ಖಾಸಗಿ ಬದುಕು. ಇದಕ್ಕೂ ದೇಶದ ಆಡಳಿತಕ್ಕೂ ಯಾವ ಸಂಬಂಧವೂ ಇಲ್ಲ. ದೇಶದ ಅಧ್ಯಕ್ಷನಾದ ಮಾತ್ರಕ್ಕೆ ನನಗೂ ಒಂದು ಖಾಸಗಿ ಬದುಕಿಲ್ಲವೇ ?" ಎಂದು ಜನರನ್ನೇ ಪ್ರಶ್ನೆ ಮಾಡುವುದು. ಇದರಿಂದ ಕ್ಲಿಂಟನ್ ಮಾಡಿರುವ ತಪ್ಪು, ಏನೂ ಮಹಾಪರಾಧವಲ್ಲ ಎಂದು ಜನರು ಯೋಚಿಸುತ್ತಾರೆ.
- "ನಾನು ಮಾಡಿದ ತಪ್ಪು ನನ್ನ ಕುಟುಂಬವನ್ನು ಹಾಳುಮಾಡಬಾರದು. ಅಲ್ಲದೇ ಆ ವೈಯಕ್ತಿಕ ತಪ್ಪು ನನ್ನ ಸಾಮಾಜಿಕ ಬದುಕಿನಲ್ಲಿ ನನಗೆ ತೊಂದರೆ ಉಂಟುಮಾಡಬಾರದಲ್ಲ? ಅದಕ್ಕೇ ಸುಳ್ಳು ಹೇಳಬೇಕಾಯಿತು. ಈ ವಿಚಾರವಾಗಿ ನ್ಯಾಯಾಲಯಕ್ಕೆ ನಾನು ಪ್ರಮಾಣ ಮಾಡಿ ಹೇಳಿದ್ದು ಸುಳ್ಳು ಎಂದು ಈಗ ಒಪ್ಪಿಕೊಳ್ಳುತ್ತೇನೆ. ನನ್ನ ಹೆಂಡತಿ ಸೇರಿದಂತೆ ಇಡೀ ದೇಶಕ್ಕೆ ನಾನು ಸುಳ್ಳು ಹೇಳಿದ್ದೇನೆ. ದಯವಿಟ್ಟು ಈ ತಪ್ಪನ್ನು ಮನ್ನಿಸಬೇಕು." - ಎಂದು ವಿಧೇಯತೆ ತೋರಬೇಕು. ಆಗ ಕ್ಲಿಂಟನ್ ಕ್ಷಮಾರ್ಹರಾಗುತ್ತಾರೆ.
- 'ಈ ಖಾಸಗಿ ಬದುಕನ್ನು ಬಿಟ್ಟರೆ ನಾನು ಎಂದೂ ಯಾರಿಂದಲೂ ಸುಳ್ಳು ಹೇಳಿಸಿಲ್ಲ. ಕಾನೂನಿಗೆ ಅಡ್ಡಿಪಡಿಸಿಲ್ಲ' - ಎಂದು ಸಮರ್ಥಿಸಿಕೊಳ್ಳುವುದು. ಮೋನಿಕಾ ಕೂಡ ಇದನ್ನೇ ಹೇಳುತ್ತಿದ್ದಾಳೆ ತಾನೆ ?
- "ಆದದ್ದೆಲ್ಲ ಆಯಿತು ಇದನ್ನೆಲ್ಲ ಕೆಟ್ಟ ಕನಸೆಂದು ಮರೆತುಬಿಡೋಣ. ದೇಶದ ಉದ್ಧಾರ ಮಾಡುವುದಕ್ಕೆ ನಮ್ಮ ಗಮನ ಕೇಂದ್ರೀಕರಿಸೋಣ" - ಎಂದು ಪ್ರಕರಣಕ್ಕೆ ಮಂಗಳ ಹಾಡಿ, ಜನರ ಗಮನವನ್ನು ಬೇರೆಡೆಗೆ ಹರಿಸುವುದು.

ಈ ಮೇಲಿನ ತಂತ್ರಗಳನ್ನೇ ಬಳಸಿ ಒಂದು ಭಾಷಣ ಸಿದ್ಧಪಡಿಸಲಾಯಿತು. ಆಗಸ್ಟ್ 18 ರಂದು ಕ್ಲಿಂಟನ್ ದೂರದರ್ಶನದಲ್ಲಿ ಈ ಭಾಷಣವನ್ನು ಅಮೇರಿಕದ ಜನತೆಗೆ ಓದಿ ಹೇಳಿದರು. ಜನ ಮುಗಿಬಿದ್ದು ಭಾಷಣ ನೋಡಿದರು. ತಲೆದೂಗಿದರು.

"ಹೌದಪ್ಪಾ.... ನಮ್ಮ ಅಧ್ಯಕ್ಷ ಎಷ್ಟು ಪ್ರಾಮಾಣಿಕ. ತನ್ನ ತಪ್ಪನ್ನು ಒಪ್ಪಿಕೊಂಡು ಬಿಟ್ಟ" - ಎಂದುಕೊಂಡರು.

ತಪ್ಪು ಯಾರು ಮಾಡುವುದಿಲ್ಲ? ಇಷ್ಟಕ್ಕೂ ಕ್ಲಿಂಟನ್ ಏನೂ ದೇಶದ್ರೋಹ ಮಾಡಲಿಲ್ಲವಲ್ಲ? ಆತ ಮಾಡಿದ್ದು ಮಾಮೂಲಿ ಹಾದರ, ಪ್ರತಿದಿನ ತಾವು ಹಾಗೂ ತಮ್ಮ ಮಕ್ಕಳು ಮಾಡುವಂಥದ್ದೆ! - ಎಂದು ಕ್ಲಿಂಟನ್‌ರನ್ನು ಕ್ಷಮಿಸಿಬಿಟ್ಟರು.

ಹೀಗೆ.... ಪ್ರಜೆಗಳ ಲೆಕ್ಕದಲ್ಲಿ ಈ ಪ್ರಕರಣ ಮುಗಿದಂತೆಯೇ. ಅವರಿಗೆ ಮೋನಿಕಾ ಮತ್ತು ಕ್ಲಿಂಟನ್ ನಡುವೆ ಲೈಂಗಿಕ ಸಂಬಂಧ, ಇತ್ತೊ ಇಲ್ಲವೋ ಎಂಬುದು ಮುಖ್ಯವಾಗಿತ್ತು. ಅದು ಗೊತ್ತಾ



ಟ್ರಿಪ್



ಜೋನ್ಸ್

ಯಿತು. ತಮ್ಮ ತಮ್ಮ ಕೆಲಸಗಳಿಗೆ ವಾಪಸ್ !

### ಮುಗಿಯದ ಕಥೆ

ಆದರೆ ಕಥೆ ಇಷ್ಟಕ್ಕೆ ಮುಗಿದಿಲ್ಲ. ಇಲ್ಲಿಂದ ಹೊಸ ಅಧ್ಯಾಯ ಶುರುವಾಗಿದೆ.

ಕ್ಲಿಂಟನ್ ಇಷ್ಟೆಲ್ಲಾ ಭಾಷಣ ಮಾಡುವಾಗ, ಮೋನಿಕಾ ಡ್ರೆಸ್ ಮೇಲಿದ್ದ ವೀರ್ಯ ಯಾರದ್ದು ಎಂದು ಇನ್ನೂ ನಿರ್ಧಾರವಾಗಿರಲಿಲ್ಲ. ಈಗ ಅದರ ಪರೀಕ್ಷೆ ಆರಂಭವಾಗಿದೆ. (ಪತ್ರಿಕೆ ಅಚ್ಚಿಗೆ ಹೋಗುವಾಗ) ಕ್ಲಿಂಟನ್ ತಮ್ಮ ವೀರ್ಯವನ್ನು ಪರೀಕ್ಷೆಗಾಗಿ ಪ್ರಯೋಗಾಲಯಕ್ಕೆ ಕಳಿಸಿ ಕೊಟ್ಟಿದ್ದಾರೆ. ಇದರ ಡಿ.ಎನ್.ಎ ಪರೀಕ್ಷೆಯಿಂದ ಮೋನಿಕಾ ಡ್ರೆಸ್ ಮೇಲಿರುವ ವೀರ್ಯದ ಕಲೆ ಕ್ಲಿಂಟನ್‌ರದು ಹೌದೋ ಅಲ್ಲವೋ ಎಂದು ಇಷ್ಟರಲ್ಲೇ ಬಹಿರಂಗವಾಗಲಿದೆ.

ಈ ನಡುವೆ ಕ್ಲಿಂಟನ್ ಎಷ್ಟು ಸತ್ಯ ಹೇಳಿದ್ದಾರೆ. ಎಷ್ಟು ಸುಳ್ಳು ಹೇಳಿದ್ದಾರೆ ಎಂಬುದರ ತನಿಖೆಯಾಗಬೇಕು. ಆನಂತರ ಗ್ರ್ಯಾಂಡ್ ಜೂರಿ ಕ್ಲಿಂಟನ್-ಮೋನಿಕಾ ಪ್ರಕರಣದ ಬಗ್ಗೆ ತೀರ್ಪು ನೀಡಬೇಕು. ಆ ಬಗ್ಗೆ ವರದಿಯನ್ನು ಅಮೇರಿಕ ಸಂಸತ್ತಿಗೆ ಕೆನೆತ್ ಸ್ಟಾರ್ ಒಪ್ಪಿಸಬೇಕು.

ಅಲ್ಲಿಗೂ ಕಥೆ ಮುಗಿಯುವುದಿಲ್ಲ. ಇನ್ನಷ್ಟು ಕವಲೊಡೆಯುತ್ತದೆ.

- ಈ ಪ್ರಕರಣಕ್ಕೆಲ್ಲ ಮೂಲವಾಗಿದ್ದ, ಈಗ ನ್ಯಾಯಾಲಯದಿಂದ ಡಿಸ್‌ಮಿಸ್ ಆಗಿರುವ, ಪೌಲಾ ಜೋನ್ಸ್ ಪ್ರಕರಣ ಮತ್ತೆ ಹೆಡೆ ಎತ್ತಬಹುದು.
- ಅಮೇರಿಕದ 200 ವರ್ಷಗಳ ಇತಿಹಾಸದಲ್ಲಿ ಯಾವ ಅಧ್ಯಕ್ಷರಿಗೂ ಸಂಸತ್ತಿನಲ್ಲಿ ಛೀಮಾರಿ ಹಾಕಿದ ದಾಖಲೆಯಿಲ್ಲ. ಆದರೆ ಕ್ಲಿಂಟನ್ ಹಾಕಿಸಿಕೊಳ್ಳಬಹುದು.
- ಕ್ಲಿಂಟನ್ ಮೇಲೆ ಇರುವ ಇತರ ಆಪಾದನೆಗಳ ತನಿಖೆ ಇನ್ನೂ ತೀವ್ರವಾಗಬಹುದು.
- ಒಂದು ವೇಳೆ - ''ಕ್ಲಿಂಟನ್ ನ್ಯಾಯಾಲಯಕ್ಕೆ ಸುಳ್ಳು ಹೇಳಿಕೆ ನೀಡಿದ್ದಾರೆ. ಇದಕ್ಕೆ ಶಿಕ್ಷೆಯಾಗಬೇಕು'' ಎಂದು ತೀರ್ಪು ಹೊರಬಿದ್ದಲ್ಲಿ ಕ್ಲಿಂಟನ್ ರಾಜೀನಾಮೆ ನೀಡಬೇಕಾಗಬಹುದು.

ಮುಂದೆ ಏನಾಗಬಹುದು ಎಂದು ಈಗಲೇ ಹೇಳಲು ಸಾಧ್ಯವಿಲ್ಲ. ಚದುರಂಗದಾಟ ಮುಂದುವರಿಯಲಿದೆ. ಆದರೆ ಎಲ್ಲ ಸಮಸ್ಯೆಗಳನ್ನೂ ಎದುರಿಸಲು ಕ್ಲಿಂಟನ್ ಈಗ ಸರ್ವಸನ್ನದ್ಧರಾಗಿದ್ದಾರೆ. ಕಾನೂನಿನ ಜಾಲದಿಂದ ನುಣುಚಿಕೊಂಡು ಗೆಲ್ಲುವ ಅವಕಾಶ ಕ್ಲಿಂಟನ್‌ಗೆ ಅಧಿಕವಾಗಿದೆ.

### ಕ್ಲಿಂಟನ್ ತಪ್ಪೇನು?

ಅಮೇರಿಕದಂಥ ಸ್ವಚ್ಛಂದ ಲೈಂಗಿಕ ಪ್ರವೃತ್ತಿಯ ರಾಷ್ಟ್ರದಲ್ಲಿ 'ಹಾದರ' ಏನೂ ಮಹಾಪರಾಧವಲ್ಲ.

ಆದರೂ ಕ್ಲಿಂಟನ್ ವಿಷಯದಲ್ಲಿ ಇದೇಕೆ ಇಷ್ಟು ದೊಡ್ಡ ಪೇಚಾಯಿತು ?

ವಾಸ್ತವವಾಗಿ, ಕ್ಲಿಂಟನ್ ಪೇಚಿಗೆ ಸಿಲುಕಿರುವುದು ಕೇವಲ ಲೈಂಗಿಕ ಸಂಬಂಧ ಬೆಳೆಸಿದ್ದಕ್ಕಾಗಿ ಅಲ್ಲ. ಆದರೆ ಕಾನೂನಿಗೆ ಮೋಸ ಮಾಡಿದ್ದಕ್ಕಾಗಿ!

ಹೌದು ಪೌಲಾ ಜೋನ್ಸ್ ಪ್ರಕರಣ ವಿಚಾರಣೆ ಸಂದರ್ಭದಲ್ಲಿ ಕ್ಲಿಂಟನ್ ಪ್ರಮಾಣ ಮಾಡಿಯೂ ಕೋರ್ಟಿಗೆ ಸುಳ್ಳು ಹೇಳಿದರು, ಸುಳ್ಳು ಅಫಿಡವಿಟ್ ನೀಡಿದರು. ಈ ಬಗ್ಗೆ ಕೆನೆತ್ ಸ್ಟಾರ್ ತನಿಖೆ ನಡೆಸಲಾರಂಭಿಸಿದಾಗ ಸತ್ಯ


ಜೋರ್ಡನ್


ಸ್ಟಾರ್

## ಜೋಕಲ್ಲ !

ನಮ್ಮ ಬಂಗಾರಪ್ಪ ಹಾಗೂ ದೇವೆಗೌಡರ ಬಗ್ಗೆ ಅವರ ಆಡಳಿತ ಕಾಲದಲ್ಲಿ ದಿನಕ್ಕೊಂದು ಹೊಸ ಜೋಕು ಹೊರಬರುತ್ತಿದ್ದವು. ಬಂಗಾರಪ್ಪನವರ ಬಾಯಿ, ಡೊಳ್ಳು ಕುಣಿತ, ಪಕ್ಷಾಂತರ, ದೇವೇಗೌಡರ ನಿದ್ದೆ, ಮುದ್ದೆ, ಹಿಂದಿ ಭಾಷಣ, ಇಂಗ್ಲೀಷ್ ಶಬ್ದ ಮುಂತಾದವುಗಳ ಬಗ್ಗೆ ಜನ ಲಘುವಾಗಿ ಮಾತನಾಡಿಕೊಳ್ಳುತ್ತಿದ್ದರು. ಮುಸಿ ಮುಸಿ ನಗುತ್ತಿದ್ದರು.

ಅದೇ ರೀತಿ ಲಾಲೂ ಪ್ರಸಾದ್ ಯಾದವ್ ಹಾಗೂ ಜಯಲಲಿತಾ ಮೇಲೂ ಸಾಕಷ್ಟು ಜೋಕುಗಳು ಬಂದಿವೆ.

ರಾಜನಾರಾಯಣ, ಜೈಲ್‌ಸಿಂಗ್ ಬಗೆಗಿನ ಜೋಕುಗಳು ಕಡಿಮೆ ಏನಲ್ಲ. ಮುರಾರ್ಜಿಯವರ ಸ್ವಮೂತ್ರಪಾನ ಚಿಕಿತ್ಸೆ ಕೂಡ ದೇಶದಲ್ಲಿ ದೊಡ್ಡ ತಮಾಷೆಯಾಗಿತ್ತು.

ಈಗ ಅಂಥದೇ ಪರಿಸ್ಥಿತಿ ಕ್ಲಿಂಟನ್‌ಗೂ ಬಂದಿದೆ. ಈ ಭೂಮಿಯ ಅತ್ಯಂತ ಶಕ್ತಿಶಾಲಿ ದೇಶದ ಅತ್ಯುನ್ನತ ಹುದ್ದೆಯಲ್ಲಿದ್ದರೂ ಪ್ರಪಂಚದ ಜನ ಅವರ ಬಗ್ಗೆ ಅತ್ಯಂತ ಲಘುವಾಗಿ ಮಾತನಾಡುವಂತಾಗಿದೆ.

ಒಂದು ಫೇಮಸ್ ಜೋಕ್....

ಅಮೇರಿಕದ 100 ಜನ ಹೆಂಗಸರನ್ನು ಯಾರೋ ಕೇಳಿದರಂತೆ, ಕ್ಲಿಂಟನ್ ಜತೆ ಒಂದು ರಾತ್ರಿ ಕಳೆಯುತ್ತೀರಾ ? ಅಂತ.

99 ಹೆಂಗಸರು ಉತ್ತರಿಸಿದರಂತೆ....

ಅಯ್ಯೋ ಮತ್ತೊಂದು ಸಲ ? ಸಾಧ್ಯವೇ ಇಲ್ಲ !

## ರಸಿಕ ನಾಯಕರು

ಎಲ್ಲಾ ಮಹಾನಾಯಕರೂ ಮಹಾರಸಿಕರಾಗಿರುತ್ತಾರೆ. ಕ್ಲಿಯೋಪಾತ್ರಾ, ಛೆಂಗೀಸ್ ಖಾನ್, ನೆಪೋಲಿಯನ್, ಮಾವೋತ್ಸೆ ತುಂಗ್ ಎಲ್ಲ ಎಷ್ಟು ಮಹಾನಾಯಕರೋ ಅಷ್ಟೇ ಮಹಾರಸಿಕರೂ ಆಗಿದ್ದರು. ಹಾಗೆಯೇ ಕ್ಲಿಂಟನ್ ಕೂಡ ಮಹಾನಾಯಕ ಎಂಬುದರಲ್ಲಿ ಎರಡು ಮಾತಿಲ್ಲ. ಆದ್ದರಿಂದ ಅವರು ಮಹಾರಸಿಕರಾದರೆ ತಪ್ಪಿಲ್ಲ -.ಎಂಬುದು ಥಾಯ್‌ಲ್ಯಾಂಡ್ ಸರಕಾರದ ಮಾಜಿ ವಕ್ತಾರರೊಬ್ಬರ ಪ್ರತಿಕ್ರಿಯೆ !


ಸ್ಪೇನ್


ಕಾಕೇಲ್


ಕ್ಯಾಚರೀಸ್

ಬಯಲಾಗತೊಡಗಿತು. ಕ್ಲಿಂಟನ್ ಪೇಚಿಗೆ ಸಿಲುಕಿದರು. ತನ್ನ ಹಾಗೂ ಮೋನಿಕಾ ನಡುವೆ ಸಂಬಂಧ ಇಲ್ಲ ಎಂದ ಕ್ಲಿಂಟನ್ ಅಲ್ಲದೇ ಈ ರೀತಿ ಸುಳ್ಳು ಹೇಳುವಂತೆ ಮೋನಿಕಾಗೂ ಒತ್ತಾಯ ಮಾಡಿದ್ದರು.

## ಪೌಲಾ-ಜೋನ್ಸ್ ಕಥೆಯೇನು ?

ಮೋನಿಕಾ-ಕ್ಲಿಂಟನ್ ಪ್ರಕರಣ ಹೀಗೆಲ್ಲಾ ಆಗಲು ಪೌಲಾ ಜೋನ್ಸ್ ಎಂಬ ಮಹಿಳೆಯೇ ಕಾರಣ.

ಲೈಂಗಿಕ ಕಿರುಕುಳದ ಬಗ್ಗೆ ಈಕೆ ಕಳೆದ ವರ್ಷ ಕ್ಲಿಂಟನ್ ವಿರುದ್ಧ ದಾವೆ ಹೂಡಿದ್ದಳು. ಈ ದಾವೆಗೆ ಪೌಲಾ ಜೋನ್ಸ್ ವಕೀಲರು ಮೋನಿಕಾ-ಕ್ಲಿಂಟನ್ ಹಾದರವನ್ನೂ ಸಹಾಯಕ ಸಾಕ್ಷ್ಯವಾಗಿ ಬಳಸಿಕೊಳ್ಳಲು ನಿರ್ಧರಿಸಿದ್ದೇ ಈ ಎಲ್ಲಾ ಹಗರಣಕ್ಕೆ ಕಾರಣವಾಯಿತು.

1991ರಲ್ಲಿ ಕ್ಲಿಂಟನ್ ಅರ್ಕಾನ್ಸ್‌ನ ಗವರ್ನರ್ ಆಗಿದ್ದರು. ಆಗ ಪೌಲಾ ಜೋನ್ಸ್ ಸರ್ಕಾರಿ ಉದ್ಯೋಗಿಯಾಗಿದ್ದಳು.

ಅವಳನ್ನು ನೋಡಿದ ಕ್ಲಿಂಟನ್ ತಮ್ಮ ಸೆಕ್ಯೂರಿಟಿ ಪೊಲೀಸ್ ಒಬ್ಬನನ್ನು ಕಳಿಸಿ ಜೋನ್ಸ್‌ಳನ್ನು ತಾವಿದ್ದ ಹೋಟಲಿಗೆ ಕರೆಸಿಕೊಂಡರಂತೆ. ಅಲ್ಲಿ ಪೂರ್ಣ ಬೆತ್ತಲಾಗಿ ನಿಂತು ಬಾಯಿಂದ ಲೈಂಗಿಕ ಸುಖ ನೀಡುವಂತೆ ಜೋನ್ಸ್‌ಳನ್ನು ಕೇಳಿದರಂತೆ - ಎಂದು ಪೌಲಾ ಜೋನ್ಸ್ ಆಪಾದಿಸಿದ್ದಾರೆ.

ಹೀಗೆ ತನಗೆ ಲೈಂಗಿಕ ಕಿರುಕುಳ ನೀಡಿದ ಕ್ಲಿಂಟನ್ ಈಗ ತನಗೆ 2 ಮಿಲಿಯನ್ ಡಾಲರ್ ಪರಿಹಾರ ನೀಡಬೇಕೆಂಬುದು ಆಕೆಯ ದಾವೆಯ ಉದ್ದೇಶ.

ಆದರೆ ಈ ಪ್ರಕರಣದ ವಿಚಾರಣೆಯನ್ನು ಕೋರ್ಟು 4.2.98ರಂದು ಕಿತ್ತು ಹಾಕಿದೆ.

ಈ ಪ್ರಕರಣದ ಬಗ್ಗೆ ವಾದಿಸುವಾಗ ಜೋನ್ಸ್ ವಕೀಲರು ಮೋನಿಕಾ ಪ್ರಕರಣವನ್ನು ಸಹಾಯಕ

## ಕಲೆಯನ್ನು ತೊಳೆದುಬಿಡಿ !

ಕ್ಲಿಂಟನ್, ಪೇಚಿಗೆ ಸಿಲುಕಿದ್ದು ಮೋನಿಕಾ ಬಟ್ಟೆಯ ಮೇಲಿನ ವೀರ್ಯದ ಕಲೆಯಿಂದಾಗಿ ತಾನೆ? ಈ ಬಗ್ಗೆ ಇರಾನ್ ಟಿವಿಯಲ್ಲಿ ಒಂದು ತಮಾಷೆಯ ಜಾಹೀರಾತು :

ಒಬ್ಬಾತ ಮೋನಿಕಾ ಬಟ್ಟೆಯನ್ನು ಒಂದು ಸೋಪ್ ಉಪಯೋಗಿಸಿ ತೊಳೆಯುತ್ತಾನೆ. ಕ್ಲಿಂಟನ್ ಮಾಡಿದ ಕಲೆ ಹೋಗುವುದಿಲ್ಲ.

ಇನ್ನೊಬ್ಬಾತ ಹೇಳುತ್ತಾನೆ. ನಮ್ಮ ಕಂಪನಿಯ ಸೋಪ್ ಬಳಸಿ ನೋಡಿ. ಕ್ಷಣಾರ್ಧದಲ್ಲಿ ಆ ಕಲೆಯನ್ನು ತೊಳೆದು ಬಿಡುತ್ತದೆ!

## ಕ್ಲಿಂಟನ್: ಇತರ ಹಗರಣಗಳು

ಕ್ಲಿಂಟನ್ ವಿರುದ್ಧ ಮೋನಿಕಾ ಲೆವಿನ್‌ಸ್ಕಿ ಹಗರಣವೊಂದೇ ಅಲ್ಲ. ಇನ್ನೂ ಆರು ಹಗರಣಗಳಿವೆ. ಅವೆಲ್ಲ ಮೋನಿಕಾ ಎದುರು ಮೂಲೆ ಸೇರಿವೆ.

- ವಿನ್‌ಸೆಂಟ್ ಫಾಸ್ಟರ್ ಆತ್ಮಹತ್ಯೆ ಪ್ರಕರಣ.
- ಬಿಲ್ಲಿಂಗ್ ದಾಖಲೆಗಳ ಅಪರಾತಪರಾ.
- 1990ರ ಚುನಾವಣಾ ಪ್ರಚಾರ ಹಗರಣ.
- ಟ್ರಾವೆಲ್ ಆಫೀಸ್ ಹಗರಣ
- ಎಫ್‌ಬಿಐ ಫೈಲುಗಳನ್ನು ಅನಧಿಕೃತವಾಗಿ ವೈಟ್‌ಹೌಸಿಗೆ ತರಿಸಿಕೊಂಡ ಹಗರಣ.
- ವೆಸ್ಟರ್ ಎಲ್. ಹಬ್ಬೆಲ್ ಸಂಬಂಧದ ಪ್ರಕರಣ.

## ಅತ್ಯಧಿಕ ಪ್ರಚಾರ

ಕಳೆದ ವರ್ಷ ಬ್ರಿಟಿಷ್ ರಾಜಕುಮಾರಿ ಡಯಾನಾ ಸತ್ತಾಗ ಪ್ರಪಂಚಾದ್ಯಂತ ಪತ್ರಿಕೆಗಳೂ, ಟಿವಿ-ರೇಡಿಯೋಗಳೂ ಸುದ್ದಿ ಮಾಡಿದ್ದೇ ಮಾಡಿದ್ದು. ಪುಟಗಟ್ಟಲೆ, ತಾಸುಗಟ್ಟಲೆ ಡಯಾನಾ ಬಗ್ಗೆ ಸುದ್ದಿಯೇ ಸುದ್ದಿ. ಓದುಗರು, ಕೇಳುಗರು ರೋಸಿ ಹೋಗುವಷ್ಟು ಸುದ್ದಿ.

ಆದರೆ ಮೋನಿಕಾ-ಕ್ಲಿಂಟನ್ ಹಗರಣ ಆ ದಾಖಲೆಯನ್ನು ಮುರಿದಿದೆ. ಈಗಾಗಲೇ ಡಯಾನಾ ಸಾವಿಗಿಂತ ಹೆಚ್ಚು ಮೋನಿಕಾ ಸುದ್ದಿಗಳು ಮಾಧ್ಯಮಗಳಲ್ಲಿ ಪ್ರಸಾರವಾಗಿವೆಯಂತೆ.

## ಮೋನಿಕಾ ಫೋರ್ಜರಿ

ಮೋನಿಕಾ ಏನೂ ಸಾಚಾ ಹುಡುಗಿಯಲ್ಲ. ಕಾಲೇಜಿನಲ್ಲಿ ಇರುವಾಗ ಆಕೆ ಯಾವುದೋ ಒಂದು ಕಾಗದ ಪತ್ರವನ್ನು ಫೋರ್ಜರಿ ಮಾಡಿದ್ದಳಂತೆ. ಈ ಪ್ರಕರಣ ಬಹಿರಂಗವಾಗಿದ್ದರೂ ಇನ್ನೂ ಸದ್ದನ್ನೇನೂ ಮಾಡಿಲ್ಲ.

ಈ ಮೋನಿಕಾ ವೈಟ್‌ಹೌಸಿನಲ್ಲಿ ಕೆಲಸಕ್ಕೆ ಸೇರಿದ ನಂತರ ಕೆಲಸದ ಕಡೆ ಗಮನವನ್ನೇ ನೀಡುತ್ತಿರಲಿಲ್ಲವಂತೆ. ಕ್ಲಿಂಟನ್ ತನ್ನ ಕೈಲಿರುವಾಗ ಕೆಲಸ ಮಾಡದಿದ್ದರೆ ಯಾರು ಪ್ರಶ್ನಿಸುತ್ತಾರೆ ಎಂದು ಆಕೆಗೆ ಧೈರ್ಯವಿದ್ದಿರಬೇಕು.

ಅಂಶವಾಗಿ ಬಳಸಿಕೊಳ್ಳಲು ನಿರ್ಧರಿಸಿದರು. ಕ್ಲಿಂಟನ್ ಪೌಲಾಗೆ ಮಾತ್ರವಲ್ಲದೇ ಇನ್ನೂ ಹಲವರಿಗೂ ಲೈಂಗಿಕ ಕಿರುಕುಳ ನೀಡುತ್ತಿದ್ದ ಎಂದು ವಾದಿಸಲು ಆ ವಕೀಲರು ಮೋನಿಕಾಳ ವಿಷಯವನ್ನು ಕೋರ್ಟಿನಲ್ಲಿ ಪ್ರಸ್ತಾಪಿಸಿದರು. ಅದರ ನಂತರ ಮೋನಿಕಾ-ಪ್ರಕರಣ ಬಹಿರಂಗವಾಯ್ತು.

ಈಗ ಮೋನಿಕಾ ಜತೆ ಅಕ್ರಮ ಸಂಬಂಧ ಇದೆ ಎಂದು ಕ್ಲಿಂಟನ್ ಒಪ್ಪಿಕೊಂಡ ಮೇಲೆ ಪೌಲಾ ಜೋನ್ಸ್ ತನ್ನ ಪ್ರಕರಣವನ್ನು ಪುನಃ ತೆರೆಸಲು ಪ್ರಯತ್ನಿಸುತ್ತಿದ್ದಾಳೆ.

### ಮೋನಿಕಾ ಪ್ರಣಯ ಪ್ರಸಂಗ

ಮೋನಿಕಾ ಅಂಥ ಸುಂದರಿಯೇನೂ ಅಲ್ಲ. ಆದರೆ ಬಹಳ ಸೆಕ್ಸಿ ಇರುವುದಂತೂ ನಿಜ. ದಕ್ಷಿಣ ಕ್ಯಾಲಿಫೋರ್ನಿಯಾದ ಮೋನಿಕಾ ವೆಸ್ಟ್‌ಕೋಸ್ಟ್‌ನಲ್ಲಿ ಕಾಲೇಜು ಮುಗಿಸಿ ಕೆಲಸ ಹುಡುಕುತ್ತ 1995ರ ಬೇಸಿಗೆಯಲ್ಲಿ ವಾಷಿಂಗ್ಟನ್‌ಗೆ ಬಂದಾಗ ಇನ್ನೂ ಕನ್ಯೆಯಾಗಿದ್ದಳೋ ಇಲ್ಲವೋ ಗೊತ್ತಿಲ್ಲ. ನಂತರ ಕ್ಲಿಂಟನ್ ಜೊತೆ ಪ್ರಣಯ ಪ್ರಸಂಗದಲ್ಲಿ ಹೆಸರಾಗಿ ಈಗ ಜಗತ್ತಿನ ಅತಿ ಚಿರಪರಿಚಿತ ಮುಖಗಳಲ್ಲಿ ಒಂದಾಗಿದ್ದಾಳೆ.

ವೈಟ್‌ಹೌಸ್‌ನಲ್ಲಿ ಪ್ರತಿವರ್ಷ ಒಂದಷ್ಟು ಹೊಸ ಪದವೀಧರರನ್ನು ಇಂಟರ್ನಿ ಆಗಿ ಸೇರಿಸಿಕೊಳ್ಳಲಾಗುತ್ತದೆ. ಹಾಗೆ ಮೋನಿಕಾ ವೈಟ್‌ಹೌಸ್ ಪ್ರವೇಶವಾಯಿತು.

ಅವಳ ಅದೃಷ್ಟವೆನ್ನುವಂತೆ ಅವಳ ಕೆಲಸದ ಟೇಬಲ್ ಕ್ಲಿಂಟನ್‌ರ ಓವಲ್ ಆಫೀಸ್‌ಗೆ ಸಮೀಪವಿತ್ತು. ಹಾಗಾಗಿ ಆಕೆ ಆಗಾಗ ಕ್ಲಿಂಟನ್ ಕಣ್ಣಿಗೆ ಬಿದ್ದುದು ಸಹಜ. ಮುಂದೊಂದು ದಿನ ವೈಟ್‌ಹೌಸ್ ಔತಣ ಕೂಟವೊಂದರಲ್ಲಿ ಆಕೆ ಅರೆಬರೆ ಮೈ ಕಾಣುವ ಬಟ್ಟೆಬರೆ ತೊಟ್ಟು ಕ್ಲಿಂಟನ್‌ಗೆ ಕಾಣಿಸಿಕೊಂಡಳು. ಅಲ್ಲೇ ಕ್ಲಿಂಟನ್ ಬುಟ್ಟಿಗೆ ಬಿದ್ದಿರಬೇಕು! ಅಂತೂ ಅಲ್ಲಿಂದ ಇಬ್ಬರ ಚಕ್ಕಂದ ಆರಂಭವಾಯಿತು.

ಕ್ಲಿಂಟನ್ ಆಕೆಗೆ ಉಡುಗೊರೆ ಕಳಿಸುತ್ತಿದ್ದರಂತೆ. ಆಕೆಯೂ ಉಡುಗೊರೆ ಕೊಡುತ್ತಿದ್ದಳಂತೆ. ಒಮ್ಮೆ ಕ್ಲಿಂಟನ್ ಟಿ.ವಿ.ಯಲ್ಲಿ ಭಾಷಣ ಮಾಡುತ್ತಿರುವಾಗ ಉದ್ವೇಗಗೊಂಡ ಮೋನಿಕಾ ಕಿರುಚಿ ಗೆಳತಿಯರಿಗೆ ತೋರಿಸಿದಳಂತೆ ''ಆತ ಹಾಕಿಕೊಂಡಿರುವ ಟೈ ಇದೆಯಲ್ಲಾ ಅದು ನಾನು ಗಿಫ್ಟ್ ಕೊಟ್ಟಿದ್ದು'' ಅಂತ.

ಹೀಗೆ ಮೋನಿಕಾ ತನ್ನ ಕ್ಲಿಂಟನ್ ನಡುವಣ ಸರಸವನ್ನು ಹೆಮ್ಮೆಯಿಂದ ಗೆಳತಿಯರಿಗೆ ಹೇಳಿ ಬೀಗುತ್ತಿದ್ದಳಂತೆ. ಅಮೇರಿಕದ ಅಧ್ಯಕ್ಷರು ತನ್ನನ್ನು 'ಇಟ್ಟುಕೊಂಡಿದ್ದಾರೆ' - ಎಂಬ ಬಿಂಕ ಆಕೆಗೆ!

ಈ ಸಮಯಕ್ಕೆ ಲಿಂಡಾ ಟ್ರಿಪ್ ಎನ್ನುವ ವೈಟ್‌ಹೌಸ್‌ನ ಮಾಜಿ ಉದ್ಯೋಗಿ ಮತ್ತೆ ವೈಟ್‌ಹೌಸ್ ಕೆಲಸಕ್ಕೆ ಸೇರಿದಳು. ಇವಳು ಒಂದು ಥರಾ ಗಾಸಿಪ್ ರಾಣಿ. ಬರೀ ವದಂತಿಗಳನ್ನು ಹಬ್ಬಿಸುತ್ತಾ ತಿರುಗುವವಳು. ಜಾರ್ಜ್ ಬುಷ್ ಬಗ್ಗೆ ಕೂಡ ಗಾಸಿಪ್ ಹರಡಿದ್ದಳಂತೆ.

ಇರಲಿ, ಇವಳು ಮತ್ತು ಮೋನಿಕಾ ಒಂದೇ ಕಡೆ ಕೆಲಸ ಮಾಡುವ ಹಾಗಾಯಿತು. ಅದಕ್ಕೆ ಇಬ್ಬರಲ್ಲೂ ಅನ್ಯೋನ್ಯತೆ ಬೆಳೆಯಿತು. ಕ್ಲಿಂಟನ್‌ನ ಸಖ್ಯದಿಂದ ಬೀಗುತ್ತಿದ್ದ ಮೋನಿಕಾ ತನ್ನ-ಅವರ ನಡುವೆ ನಡೆದದ್ದನ್ನೆಲ್ಲ ಗೆಳತಿ ಲಿಂಡಾಗೆ ಹೇಳಿಕೊಂಡು ಒಂಥರಾ ಖುಷಿ ಪಡುತ್ತಿದ್ದಳು.

ಲಿಂಡಾಗೆ ಅಸೂಸೆಯೆಯೋ ಅಥವಾ ಕ್ಲಿಂಟನ್ ವಿರೋಧಿ ಗುಂಪಿನ ಬೆಂಬಲವೋ ಅಂತೂ ಮೋನಿಕಾ ಹೇಳಿದ್ದನ್ನೆಲ್ಲ ಟೇಪ್ ರೆಕಾರ್ಡರಿನಲ್ಲಿ ಗುಪ್ತವಾಗಿ ಟೇಪ್‌ಮಾಡ ತೊಡಗಿದಳು.

ಹೀಗಿರುವಾಗ ಪೌಲಾ ಜೋನ್ಸ್ ಎಂಬ ಹೆಂಗಸು ಕ್ಲಿಂಟನ್ ವಿರುದ್ಧ ದಾವೆ ಹೂಡಿದ್ದಳು. ಕ್ಲಿಂಟನ್ ಹಿಂದೆ 1991ರಲ್ಲಿ ಅರ್ಕಾನ್ಸಸ್‌ನ ಗೌರ್ವನರ್ ಆಗಿದ್ದಾಗ ತನಗೆ ಲೈಂಗಿಕ ಕಿರುಕುಳ ನೀಡಿದ್ದರು ಎಂಬುದು ಆಕೆಯ ಆಪಾದನೆ. ಇದಕ್ಕಾಗಿ 2 ಮಿಲಿಯನ್ ಡಾಲರ್ ಪರಿಹಾರ ಕೊಡಬೇಕು ಎಂಬುದು ಆಕೆಯ

## ಅಮೆರಿಕೆಯ ಸತಿ ಸಾವಿತ್ರಿ!



ಭಾರತದ ಪುರಾಣದಲ್ಲಿ ಸತಿ ಸಾವಿತ್ರಿ ಕತೆಯಿದೆ. ಗಂಡನನ್ನು ಉಳಿಸಿಕೊಳ್ಳಲು ಯಮನನ್ನೇ ಜಯಿಸಿ ಬಂದವಳು ಅವಳು.

ಹಾಗೆಯೇ ಅಮೇರಿಕದಲ್ಲಿ ಹಾಲಿ ಒಬ್ಬಳು ಸತಿ ಸಾವಿತ್ರಿ ಇದ್ದಾಳೆ. ಅವಳೇ ಕ್ಲಿಂಟನ್‌ರ ಪತ್ನಿ ಹಿಲರಿ!

ಕ್ಲಿಂಟನ್‌ರ ಪ್ರತಿ ಯಶಸ್ಸಿನ ಹಿಂದೆ ಹಿಲರಿ ಕೈವಾಡ ಇದೆ. Behind every successful man there is a woman ಅನ್ನುತ್ತಾರಲ್ಲ ಹಾಗೆ. ಕ್ಲಿಂಟನ್ ಅಧ್ಯಕ್ಷರಾದಾಗ ಅವರು ಹೋದಲ್ಲೆಲ್ಲ ಅವರ ಪತ್ನಿ ಹಿಲರಿಯೂ ಇರುತ್ತಾಳೆ ಎಂಬುದೇ ದೊಡ್ಡ ಟೀಕೆಯಾಗಿತ್ತು. ಅದು ನಿಜವೂ ಹೌದು. ಕ್ಲಿಂಟನ್ ಏನು ಮಾಡುವುದಿದ್ದರೂ ಪಕ್ಕದಲ್ಲಿ ಹಿಲರಿ ಇದ್ದೇ ಇರುತ್ತಿದ್ದಳು. ಹಿಲರಿ ಇರದಿದ್ದಾಗ ಕ್ಲಿಂಟನ್ ಮಾಡಿದ ಒಂದೇ ಕೆಲಸವೆಂದರೆ ಮೋನಿಕಾ ಜತೆ ಮಜ!

ಈ ಹಗರಣ ಬಯಲಾದಾಗ, ಹಿಲರಿಗೆ ಸತ್ಯ ಗೊತ್ತಿರಲಿಲ್ಲ ಎಂದಲ್ಲ. ಕ್ಲಿಂಟನ್ ಯಾರ ಬಳಿ ಸುಳ್ಳು ಹೇಳಿದರೂ ಪತ್ನಿ ಬಳಿ ಸುಳ್ಳು ಹೇಳಿರಲಿಕ್ಕಿಲ್ಲ. ಏಕೆಂದರೆ ಅವರ ತಲೆ ಕಾಯುವ ವ್ಯಕ್ತಿ ಎಂದರೆ ಪತ್ನಿಯೇ ತಾನೆ?

ಸಾಮಾನ್ಯ ಹೆಂಡತಿಯಾಗಿದ್ದರೆ, ಗಂಡನ ಹಾದರವನ್ನು ಸಹಿಸಿಕೊಳ್ಳುತ್ತಿದ್ದಳೇ? ಬದಲಿಗೆ ಕೂಗಾಡಿ, ಕಿರುಚಾಡಿ ಡೈವೋರ್ಸ್ ನೀಡಿ ಗಂಡನ ಮಾನ ಹರಾಜು ಹಾಕುತ್ತಿದ್ದಳು.

ಹಿಲರಿ ಹಾಗೆ ಮಾಡಲಿಲ್ಲ. ಕ್ಲಿಂಟನ್‌ರನ್ನು ಪೇಚಿನಿಂದ ರಕ್ಷಿಸಲು ಸರ್ವ ಪ್ರಯತ್ನವನ್ನೂ ಮಾಡುತ್ತಿದ್ದಾಳೆ. ಇನ್‌ಫ್ಯಾಕ್ಟ್, ಇಡೀ ಪ್ರಕರಣವನ್ನು ಕೋರ್ಟಿನಲ್ಲಿ ನಡೆಸುತ್ತಿರುವುದೇ ಹಿಲರಿ. ಆಕೆ ಸ್ವತಃ ವಕೀಲಳು ತಾನೇ? ಮೊದಲು ಮೋನಿಕಾಳರ ಸಂಬಂಧ ಇಲ್ಲ ಎಂದು ಹೇಳಿಸಿದವಳೂ ಇದೇ ಶಕ್ತಿ ಮಾತೆ ಹಾಗೂ ಈಗ ಆ ಸಂಬಂಧ ಇದೆ ಎಂದು ಹೇಳಿಸಿದವಳೂ ಇವಳೇ. ಕೊನೆಗೆ ಟಿವಿಯಲ್ಲಿ ಕ್ಲಿಂಟನ್ ಓದಿದ ಭಾಷಣ ಬರೆದು ಕೊಟ್ಟಿದ್ದು ಇದೇ ಸತಿಸಾವಿತ್ರಿ!

## ಮೋನಿಕಾ ಮೇನಿಯಾ



ಪ್ರಪಂಚದಲ್ಲಿ ಅತ್ಯಂತ ಚಿರಪರಿಚಿತ ಮುಖಗಳಲ್ಲಿ ಮೋನಿಕಾ ಲೋವಿನ್‌ಸ್ಕಿ ಮುಖವೂ ಒಂದು. ಈಗ ಅಮೆರಿಕದಲ್ಲಿ ಮೋನಿಕಾಅಭಿಮಾನಿಗಳ ಸಂಘ ಉದಯ ವಾಗಿದೆ. ಆಕೆಗೆ ಬೆಂಬಲ ನೀಡುವುದು, ಪ್ರಚಾರ ನೀಡುವುದು, ಕೋರ್ಟ್ ಖರ್ಚಿಗೆ ಬೇಕಾದ ನಿಧಿ ಸಂಗ್ರಹಿಸುವುದು ಎಲ್ಲ ಜವಾಬ್ದಾರಿಯನ್ನು ಈ ಅಭಿಮಾನಿ ಸಂಘ ನೋಡಿಕೊಳ್ಳುತ್ತಿದೆ. ಇದನ್ನು ಅಮೆರಿಕದಲ್ಲಿ ಮೋನಿಕಾ ಮೇನಿಯಾ ಎಂದೇ ಹೇಳಲಾಗುತ್ತಿದೆ.

■

## ಏನಂತಾರೆ ಅಮೇರಿಕನ್ನರು ?

ಈಗಲೂ ಶೇ 54 ರಷ್ಟು ಅಮೆರಿಕನ್ನರ ಪ್ರಕಾರ ಕ್ಲಿಂಟನ್ ಅಧಿಕಾರದಲ್ಲಿ ಉಳಿಯ ಬೇಕು. ಕ್ಲಿಂಟನ್ ದಕ್ಷ ಆಡಳಿತಗಾರ. ಅವರ ವೈಯಕ್ತಿಕ ದೌರ್ಬಲ್ಯಗಳನ್ನು ರಾಜಕೀಯಕ್ಕೆ ಬೆರೆಸಬಾರದು. ಇಷ್ಟಕ್ಕೂ ಕ್ಲಿಂಟನ್ - ಮೋನಿಕಾ ಜೊತೆ ಚಕ್ಕಂದ ಆಡಿದ್ದು ಮಾನವ ಸಹಜ ಪ್ರತಿಕ್ರಿಯೆ. ಅದನ್ನು ಮರೆತು ಬಿಡುವುದೇ ಒಳಿತು-ಎಂದು ಜನತೆಯ ಅಭಿಪ್ರಾಯ. ಈ ಹಗರಣ ಬಹಿರಂಗ ಗೊಂಡಾಗಿನಿಂದ ಅಮೆರಿಕದಲ್ಲಿ ವಿವಿಧ ಏಜೆನ್ಸಿಗಳು ಜನಾಭಿಪ್ರಾಯ ಸಂಗ್ರಹಿಸುತ್ತಿವೆ. ಅವುಗಳಲ್ಲಿ ವ್ಯಕ್ತವಾದ ಸಾಮಾನ್ಯ ಅಂಶ ಇದು.

ದಾವೆಯ ಉದ್ದೇಶ.

ಕ್ಲಿಂಟನ್‌ರ ಈ ಸೆಕ್ಸ್ ಸ್ಕ್ಯಾಂಡಲ್ ನಿಧಾನವಾಗ ಮನೆ ಮಾತಾಗುತ್ತಿದ್ದಂತೆ ಲಿಂಡಾ ಟ್ರಿಪ್ ಕೆನೆತ್‌ಸ್ಟಾರ್‌ರನ್ನು ಸಂಪರ್ಕಿಸಿದಳು.

ಈ ಕೆನೆತ್ ಸ್ಟಾರ್, ಬಹಳ ಹಿಂದಿನಿಂದ ಕ್ಲಿಂಟನ್ ಬಗ್ಗೆ ಇರುವ ಇನ್ನಿತರ ಕೆಲವು ಆಪಾದನೆಗಳನ್ನು ತನಿಖೆ ಮಾಡುತ್ತಿರುವ ಇಂಡಿಪೆಂಡೆಂಟ್ ಕೌನ್ಸೆಲರ್.

ಈಕೆ ಕೆನೆತ್ ಸ್ಟಾರ್‌ಗೆ ಮೋನಿಕಾ ಹಾಗೂ ಕ್ಲಿಂಟನ್ ನಡುವಣ ಸಂಬಂಧದ ಬಗ್ಗೆ ಹೇಳಿದಳು. ಇದು ಪೌಲಾ ಜೋನ್ಸ್ ಪ್ರಕರಣದ ಹಿನ್ನೆಲೆಯಲ್ಲಿ ಮುಖ್ಯ ಎಂದು ಹೇಳಿದಳು.

ಈ ವಿಷಯ ತಿಳಿದ ಪೌಲಾ ಜೋನ್ಸ್ ವಕೀಲರು ಲಿಂಡಾ ಟ್ರಿಪ್‌ಳನ್ನು ಸಂಪರ್ಕಿಸಿ ಮೋನಿಕಾ ಪ್ರಣಯ ಪ್ರಸಂಗದ ಬಗ್ಗೆ ಕೇಳಿದರು. ಅವರು ಪೌಲಾ ಸೆಕ್ಸ್ ಕೇಸನ್ನು ಬಲಗೊಳಿಸಲು ಮೋನಿಕಾ-ಕ್ಲಿಂಟನ್ ಸೆಕ್ಸ್ ಸಂಬಂಧವನ್ನು ಬಳಸಿಕೊಳ್ಳಲು ಉದ್ದೇಶಿಸಿದ್ದರು. ಹಾಗಾಗಿ ಮೋನಿಕಾಳ ಮಾತನ್ನು ಇನ್ನಷ್ಟು ರೆಕಾರ್ಡ್ ಮಾಡಿಕೊಳ್ಳಲು ತಿಳಿಸಿದರು.

ಲಿಂಡಾ ಒಟ್ಟು ಸುಮಾರು 17 ಗಂಟೆಗಳಷ್ಟು ಮೋನಿಕಾ ಮಾತನ್ನು ರೆಕಾರ್ಡ್ ಮಾಡಿಕೊಂಡು ಕೆನೆತ್ ಸ್ಟಾರ್‌ಗೂ ನೀಡಿದಳು. ಅಲ್ಲಿಗೆ ಮೋನಿಕಾ -ಕ್ಲಿಂಟನ್ ಸೆಕ್ಸ್ ಸ್ಕ್ಯಾಂಡಲ್ ಬಹಿರಂಗವಾಯಿತು. ವೈಟ್‌ಹೌಸ್‌ನ ಹಾದರ ಬಯಲಿಗೆ ಬಂತು.

ಮೊದಲು ಪೌಲಾ ಜೋನ್ಸ್ ಪ್ರಕರಣಕ್ಕೆ ಸಂಬಂಧಿಸಿ ನ್ಯಾಯಾಲಯಕ್ಕೆ ಪ್ರಮಾಣ ಮಾಡಿ ಹೇಳಿದ ಮೋನಿಕಾ, 'ಇಲ್ಲ ಅಂಥ ಸಂಬಂಧ ಇಲ್ಲವೇ ಇಲ್ಲ ಎಂದಳು''.

ಈಕೆ ಹೀಗೆ ಸುಳ್ಳು ಹೇಳಬೇಕು ಎಂದು ಕ್ಲಿಂಟನ್ ಹೇಳಿಕೊಟ್ಟಿದ್ದಾರೆ ಎಂದು ಪೌಲಾ ವಕೀಲರು ವಾದಿಸಿದರು. ಅದೇ ವೇಳೆಗೆ ಕ್ಲಿಂಟನ್ ಕೂಡ ಪ್ರಮಾಣ ಮಾಡಿ ''ನನ್ನ-ಮೋನಿಕಾ ನಡುವೆ ಲೈಂಗಿಕ ಸಂಬಂಧ ಇಲ್ಲ'' ಎಂದು ನ್ಯಾಯಾಲಯಕ್ಕೆ ಹೇಳಿಕೆ ನೀಡಿದರು. ನಂತರ ಸಿಕ್ಕ ಸಿಕ್ಕ ಕಾರ್ಯಕ್ರಮ ಗಳಲ್ಲೆಲ್ಲ ಕ್ಲಿಂಟನ್ ತನ್ನ ಹಾಗೂ ಮೋನಿಕಾ ನಡುವೆ ಅನೈತಿಕ ಸಂಬಂಧ ಇಲ್ಲ ಎಂದೇ ವಾದಿಸುತ್ತಾ ಬಂದರು.

ಆದರೆ ಕೆನೆತ್ ಸ್ಟಾರ್ ಕ್ಲಿಂಟನ್‌ಗೆ ಬೆನ್ನು ಬಿಡದ ಭೂತ. ಮೋನಿಕಾ ಪ್ರಕರಣವನ್ನು ತಾವು ಕೈಗೆತ್ತಿಕೊಂಡು ಗ್ರಾಂಡ್ ಜೂರಿ ವಿಚಾರಣೆ ಆರಂಭಿಸಿದರು. ಸಿಗಬಹುದಾದ ಹಲವು ಸಾಕ್ಷ್ಯಗಳು ಹಾಗೂ ಸಾಕ್ಷಿಗಳನ್ನು ವಿಚಾರಿಸಿದಾಗ ಮೋನಿಕಾ ಕ್ಲಿಂಟನ್‌ಗೆ ಬಹಳ ಸನಿಹವಾಗಿದ್ದುದು ಗೊತ್ತಾಯಿತು. ವೈಟ್‌ಹೌಸ್ ಸಂದರ್ಶಕರ ದಾಖಲೆಯ ಪ್ರಕಾರ ಎಪ್ರಿಲ್ 1996 ಹಾಗೂ ಡಿಸೆಂಬರ್ 1997ರ ನಡುವೆ ಮೋನಿಕಾ 37 ಬಾರಿ ಕ್ಲಿಂಟನ್‌ರನ್ನು ಏಕಾಂತದಲ್ಲಿ ಭೇಟಿಯಾಗಿದ್ದಳು ಎಂಬುದು ತಿಳಿಯಿತು. ಹೊತ್ತಲ್ಲದ ಹೊತ್ತಲ್ಲಿ ಇಬ್ಬರೂ ಭೇಟಿಯಾಗುತ್ತಿದ್ದರಂತೆ. ಫೋನ್ ಮಾಡುತ್ತಿದ್ದರಂತೆ.

ಆದರೆ ಇದ್ಯಾವುದೂ ಇಬ್ಬರ ಲೈಂಗಿಕ ಸಂಬಂಧಕ್ಕೆ ಸಾಕ್ಷಿಯಾಗುವುದಿಲ್ಲ ಎನ್ನುವ ಸಮಯದಲ್ಲೇ ಮೋನಿಕಾ ಹಠಾತ್ ಮನಸ್ಸು ಬದಲಾಯಿಸಿದ್ದಳು. ಗ್ರಾಂಡ್ ಜೂರಿ ಎದುರು ನಿಜ ಹೇಳಲು ನಿರ್ಧರಿಸಿದ್ದಳು. ಇದಕ್ಕಾಗಿ ಬಲವಾದ ಸಾಕ್ಷ್ಯ ಒದಗಿಸುವುದಾಗಿ ಹೇಳಿದ ಆಕೆ ತನ್ನ ಒಂದು ಪಾರ್ಟಿ ಡ್ರೆಸ್ಸನ್ನು ಕೆನೆತ್ ಸ್ಟಾರ್‌ಗೆ ನೀಡಿದಳು. ಅದರ ಮೇಲಿದ್ದ ಒಂದು ಕಲೆ, ಕ್ಲಿಂಟನ್‌ರ ವೀರ್ಯದಿಂದ ಆದದ್ದು - ಎಂದು ಆಕೆ ಹೇಳಿದಾಗ ಎಲ್ಲರಿಗೂ ಶಾಕ್! ಅದರ ಡಿ.ಎನ್.ಎ ಪರೀಕ್ಷೆ ಮಾಡಿದರೆ ಅದು ಕ್ಲಿಂಟನ್‌ರದು ಹೌದೋ ಅಲ್ಲವೋ ಎಂದು ನಿಖರವಾಗಿ ಗೊತ್ತಾಗುತ್ತದೆಯಷ್ಟೇ?

ಮೋನಿಕಾ ಅಷ್ಟು ದೀರ್ಘಕಾಲ ಆ ಬಟ್ಟೆ ಒಗೆಯದೇ ಯಾಕೆ ಇಟ್ಟಿದ್ದಳೋ ಗೊತ್ತಿಲ್ಲ - ''ಪ್ರಿಯಕರನ ಗುರುತು ಅದು, ಅದನ್ನು ಯಾವಾಗಲೂ ನಾನು ಕಾಪಾಡಿಕೊಳ್ಳುತ್ತೇನೆ. ಅದಕ್ಕೇ ಅದನ್ನು ತೊಳೆಯುವುದಿಲ್ಲ'' - ಎಂದು ಲಿಂಡಾಗೆ ಹೇಳಿದ್ದಳಂತೆ. ಲಿಂಡಾ ಅದನ್ನು ರೆಕಾರ್ಡ್ ಮಾಡಿದ್ದಳು. ಅದನ್ನು ಕೆನೆತ್ ಕೇಳಿದ್ದರು. ಅದನ್ನು ಮೋನಿಕಾಳಿಂದ ತರಿಸಿ ಕೊಂಡಾಗ, ಕ್ಲಿಂಟನ್ ಪಾಳೆಯದಲ್ಲಿ ಭಯ ಉಂಟಾಯಿತು. ರಹಸ್ಯ ಹೊರಬಿದ್ದೀತೆಂಬ ಹೆದರಿಕೆಯಿಂದ ಬೇಗನೆ ಕ್ಲಿಂಟನ್ ತಪ್ಪೊಪ್ಪಿಕೊಂಡರು.

ಕ್ಲಿಂಟನ್ ಈ ಹಿಂದೆ ಕೂಡ ಹೀಗೇ ಮಾಡಿದ್ದರು. ಜೆನಿಫರ್ ಫ್ಲಾವರ್ ಎಂಬಾಕೆಯ ಜೊತೆಗೆ ಅವರಿಗೆ ಅನೈತಿಕ ಸಂಬಂಧ ಇತ್ತು ಆದರೆ ಅಂಥ ಸಂಬಂಧ ಇಲ್ಲ ಎಂದು 1992ರಲ್ಲಿ ಸ್ಪಷ್ಟಪಡಿಸಿದ್ದರು. ವಿಚಿತ್ರವೆಂದರೆ ಮೊನ್ನೆ ಮೋನಿಕಾ ಪ್ರಕರಣ ಹೊರಬಿದ್ದಾಗ ಜೆನಿಫರ್ ಜೊತೆಗೆ ಸಂಬಂಧ ಇತ್ತು ಎಂದು ಒಪ್ಪಿಕೊಂಡರು.

ಹೀಗೆ ಮೊದಲು ನಿರಾಕರಿಸುವುದು, ನಂತರ ಒಪ್ಪಿಕೊಳ್ಳುವುದು ಕ್ಲಿಂಟನ್‌ಗೆ ಹೊಸ ವಿಷಯವೇನಲ್ಲ.

■

# ಭಾರತದ ರಾಜಕಾರಣಿಗಳು ಮತ್ತು ಪ್ರಣಯದ ಕತೆಗಳು

ಅಮೆರಿಕದಲ್ಲಿ ಸ್ವೇಚ್ಛಾಚಾರದ ವಾತಾವರಣವಿದೆ. ಆದರೂ ಅಲ್ಲಿ ರಾಜಕಾರಣಿಯೊಬ್ಬನ ಖಾಸಗಿ ಬದುಕು ಮುಖ್ಯವಾಗುತ್ತದೆ. ಅನೈತಿಕ ಸಂಬಂಧಗಳು ಆತನ ಅಧಿಕಾರಕ್ಕೇ ಕೊಡಲಿ ಏಟು ನೀಡುತ್ತದೆ. ಅಮೆರಿಕದ ಅಧ್ಯಕ್ಷ ಬಿಲ್ ಕ್ಲಿಂಟನ್ ಅವರು ಶ್ವೇತಭವನದ ತರಬೇತಿ ಅಭ್ಯರ್ಥಿ ಮೊನಿಕಾ ಲೆವಿನ್‌ಸ್ಕಿ ಅವಳೊಂದಿಗೆ ಅಸಭ್ಯ ಸಂಪರ್ಕ ಹೊಂದಿರುವುದಾಗಿ ಟಿವಿ ಮೂಲಕ ಬಹಿರಂಗ ಪಡಿಸಿದಾಗ ವಿಶ್ವದಾದ್ಯಂತ ಸುದ್ದಿಯಾಯಿತು. ಅಮೆರಿಕನ್ನರಲ್ಲಿ ಅಧ್ಯಕ್ಷರ ಚಾರಿತ್ರ್ಯದ ಬಗ್ಗೆ ಚರ್ಚೆಗಳು ನಡೆದವು. ಆದರೆ ಭಾರತದಲ್ಲಿ ರಾಜಕಾರಣಿಯೊಬ್ಬನ ಖಾಸಗಿ ಬದುಕು ಅಷ್ಟು ಮಹತ್ವ ವಾಗುವುದಿಲ್ಲ. ಈಗಿನ ಪರಿಭಾಷೆಯಲ್ಲಿ ಹೇಳುವು ದಾದರೆ ವ್ಯಕ್ತಿಯೊಬ್ಬನ ಖಾಸಗಿ ಬದುಕು ಹಲ್ಕಾ ಆಗಿದ್ದರೇ ಆತ ರಾಜಕಾರಣಿಯಾಗಲು ಲಾಯಕ್ಕು ಎಂದು ಬಣ್ಣಿಸಲಾಗುತ್ತದೆ.

ನಮ್ಮ ಮುಖ್ಯಮಂತ್ರಿ ಜೆ.ಎಚ್.ಪಟೇಲರು ವರ್ಷದ ಹಿಂದೆ ಟಿವಿಯಲ್ಲಿಯೇ 'ಮಾನಿನಿ ಮತ್ತು ಮದಿರೆ' ತಮ್ಮ ದೌರ್ಬಲ್ಯ ಎಂದು ಬಹಿರಂಗಗೊಳಿಸಿದರೂ ಆ ಬಗ್ಗೆ ರಾಜ್ಯದ ಜನತೆ ಯಾವುದೇ ರೀತಿಯಲ್ಲಿಯೂ ಚಿಂತಿಸಲಿಲ್ಲ. ಅವರವರ ಕರ್ಮ ಅವರಿಗೆ ಎಂದು ಸುಮ್ಮನಾದರು.

ಈ ರಾಜಕಾರಣಿ ಅವಳನ್ನು ಮಡಿಕ್ಕಂಡವ್ನೆ, ಆ ಶಾಸಕನಿಗೆ ನಾಲ್ಕು ಹೆಂಡಿರಿದ್ದಾರೆ, ಅವನಿಗಂತೂ ಪ್ರತಿ ಊರಲ್ಲೂ ಪತ್ನಿಯರಿದ್ದಾರೆ ಎಂದೆಲ್ಲಾ ಜನರು ಬಸ್‌ನಲ್ಲಿ ಹೋಗುತ್ತಲೋ, ಹೊಟೇಲ್‌ನಲ್ಲಿ ಕಾಫಿ ಕುಡಿಯುತ್ತಲೋ ಮಾತನಾಡುತ್ತಾರೆ ಮತ್ತು ಅದನ್ನು ಅಲ್ಲಿಯೇ ಮರೆತು ಬಿಡುತ್ತಾರೆ. ಈ ವಿಷಯ ನಮ್ಮ ದೇಶದಲ್ಲಿ ಯಾವುದೇ ಕೋಲಾಹಲವನ್ನು ಸೃಷ್ಟಿಸುವುದಿಲ್ಲ. ರಾಜಕಾರಣಿ ಅಧಿಕಾರದಿಂದ ಕೆಳಗಿಳಿಯುವಂತೆ ಮಾಡುವುದಿಲ್ಲ. ಭಾರತದ ಮೊಟ್ಟ ಮೊದಲ ಪ್ರಧಾನಿ ಜವಾಹರಲಾಲ್ ನೆಹರೂ ಅವರ ರಸಿಕತೆ ಬಗ್ಗೆ ಹಲವಾರು ಕತೆಗಳೇ ಇವೆ. ಅವರು ಕೆಲವು ಹೆಂಗಸರೊಂದಿಗೆ ಸಂಪರ್ಕ ಇಟ್ಟುಕೊಂಡಿದ್ದರು ಎಂಬ ಮಾತುಗಳು



**ಖ್ಯಾತ ನೃತ್ಯ ಕಲಾವಿದೆ ಪ್ರತಿಭಾ ಪ್ರಹ್ಲಾದ್ ಅವರು ಪತ್ರಿಕೆಯೊಂದಕ್ಕೆ ಸಂದರ್ಶನ ನೀಡುತ್ತಾ ತಾವು ಕಂಡ ಪುರುಷರಲ್ಲಿ ರಾಮಕೃಷ್ಣ ಹೆಗಡೆ ನಿಜವಾದ ಪುರುಷ. ಅವರ ಬಳಿ ದೇಶದ ಬಹಳಷ್ಟು ಪ್ರಸಿದ್ಧ ಸ್ತ್ರೀಯರು ತಮ್ಮ ನೋವುಗಳನ್ನು ಹಂಚಿಕೊಳ್ಳುತ್ತಾರೆ ಎಂದು ಹೇಳಿದಾಗ .......**

■ ಕೆ.ಎಂ. ಚಂದ್ರಮೌಳಿ

ಕೇಳಿಬರುತ್ತವೆ. ಆದರೂ ಅವರ ಬಗ್ಗೆ ಭಾರತೀಯರಿಗೆ ಗೌರವ ಕಡಿಮೆಯಾಗಲಿಲ್ಲ. ಆಗುವುದೂ ಇಲ್ಲ. ಯಾಕೆಂದರೆ ನಮಗೆ ನೆಹರು ಯಾರೊಂದಿಗೆ ಸಂಪರ್ಕ ಇಟ್ಟುಕೊಂಡಿದ್ದರು ಎನ್ನುವುದು ಮುಖ್ಯವಲ್ಲ. ಅವರು ದೇಶಕ್ಕೆ ಏನೆಲ್ಲಾ ಸಹಾಯ ಮಾಡಿದರು ಎನ್ನುವುದೇ ಮುಖ್ಯವಾಗುತ್ತದೆ.

ನೆಹರೂ ಪ್ರಧಾನಿಯಾಗುವುದಕ್ಕೆ ಮೊದಲೇ ಅಂದಿನ ಗೌರ್ನರ್ ಜನರಲ್ ಮೌಂಟ್ ಬ್ಯಾಟನ್ ಅವರ ಪತ್ನಿ ಎಡ್ವಿನಾ ಅವರೊಂದಿಗೆ ಹೊಂದಿದ್ದ ಸಂಬಂಧ ರಹಸ್ಯವಾಗಿಯೇನೂ ಉಳಿಯಲಿಲ್ಲ. ನೆಹರೂ ಅವರಿಗೆ ಕಾರ್ಯದರ್ಶಿಯಾಗಿದ್ದ ಮುತ್ತಯ್ಯ ನೆಹರೂ ನಿಧನದ 25 ವರ್ಷದ ನಂತರ ಬರೆದ ಪುಸ್ತಕದಲ್ಲಿ ನೆಹರೂ ಅವರು ಸನ್ಯಾಸಿನಿಯೊಬ್ಬಳೊಂದಿಗೆ ಸಂಪರ್ಕ ಇಟ್ಟುಕೊಂಡಿದ್ದರು ಮತ್ತು ಅವರಿಗೆ ಪುತ್ರನೊಬ್ಬ ಇದ್ದಾನೆ ಎಂದು ಬಹಿರಂಗಪಡಿಸಿದರು. ಆಗ ಭಾರತದ ಜನರು ಮುತ್ತಯ್ಯನನ್ನು ಕೃತಘ್ನ ಎಂದು ಜರೆದರೇ ವಿನಾ ನೆಹರೂ ಅವರನ್ನು ಲಂಪಟ ಎಂದು ಒಪ್ಪಿಕೊಳ್ಳಲು ಹಿಂಜರಿದರು. ಮಾಜಿ ಪ್ರಧಾನಿ ಇಂದಿರಾಗಾಂಧಿ ಅವರ ಪುತ್ರ ನೆಹರೂ ಅವರ ಮೊಮ್ಮಗ ಸಂಜಯಗಾಂಧಿ ಯುವ ಕಾಂಗ್ರೆಸ್ಸಿನ ಜನಪ್ರಿಯ ನಾಯಕರಾಗಿದ್ದಾಗ ರುಕ್ಸಾನಾ ಸುಲ್ತಾನಾ ಎಂಬಾಕೆಯೊಂದಿಗೆ ಹೊಂದಿದ್ದ ಅನೈತಿಕ ಸಂಪರ್ಕ ಬಹಿರಂಗ ವಾದರೂ ಅದು ಅವರ ಅಧಿಕಾರ ಚಲಾವಣೆಗೆ ಅಡ್ಡಿಯನ್ನುಂಟು ಮಾಡಲಿಲ್ಲ.

ಮಗನ ಲಫಂಗತನದಿಂದ ಅಧಿಕಾರವನ್ನು ಪಡೆಯಲಾಗದೇ ಹೋದ ರಾಜಕಾರಣಿಯ ಉದಾಹರಣೆ ಭಾರತದಲ್ಲಿ ಇದೆ. 1980ರಲ್ಲಿ ಪ್ರಧಾನಿ ಮೊರಾರ್ಜಿ ದೇಸಾಯಿ ರಾಜೀನಾಮೆ ಕೊಡುವ ಸಂದರ್ಭ ಬಂದಾಗ ಪ್ರಧಾನಿ ಸ್ಥಾನಕ್ಕೆ ಜಗಜೀವನರಾಂ ಮತ್ತು ಚರಣಸಿಂಗ್ ಅವರಲ್ಲಿ ಸ್ಪರ್ಧೆ ಇತ್ತು. ಈ ಸಮಯದಲ್ಲಿ ಜಗಜೀವನರಾಂ ಅವರ ಪುತ್ರ ಸುರೇಶ್ ರಾಂ ಅವರು ಯುವತಿಯೊಬ್ಬಳೊಂದಿಗೆ ವಿಹರಿಸುತ್ತಿದ್ದ ಚಿತ್ರ ಮತ್ತು ಆಕೆಯೊಂದಿಗೆ ಹೊಂದಿದ್ದ ಸಂಪರ್ಕದ ವಿವರಗಳು ಮೇನಕಾ ಗಾಂಧಿ ಅವರ

(ಪುಟ 19ರಲ್ಲಿ)

# ಅನೈತಿಕತೆ: ಅಮೆರಿಕೆ ಮಾದರಿ ಭಾರತಕ್ಕೆ ದುಬಾರಿ



■ ಡಾ.ಸಿ.ಆರ್.ಚಂದ್ರಶೇಖರ್
ನಿಮ್ಹಾನ್ಸ್, ಹೊಸೂರು ರಸ್ತೆ
ಬೆಂಗಳೂರು.

**ಬಿಲ್ ಕ್ಲಿಂಟನ್ ಕೇವಲ ರೋಗಗ್ರಸ್ತ ಅಮೆರಿಕಾ ಸಮಾಜದ ಪ್ರತಿನಿಧಿಯಲ್ಲ. ಇಡೀ ಜಗತ್ತಿನ, ಭಾರತವೂ ಸೇರಿದಂತೆ ಎಲ್ಲ ಸಮಾಜಗಳ ಸುಖ, ಆಸೆ, ವಿಷಯಾಸಕ್ತಿಯ ಸಂಕೇತವಾಗಿದ್ದಾನೆ. ಆತನಿಗೆ ಶಿಕ್ಷೆ ಆಗುತ್ತದೆ ಎಂದರೆ, ತಮಗೆ ಶಿಕ್ಷೆ ಎಂದು ಜನ ಭಾವಿಸಿದರೆ ಆಶ್ಚರ್ಯವೇನಿಲ್ಲ. ಹೀಗಾಗಿ ಅಮೆರಿಕಾದ ಜನ ಆತನ ತಪ್ಪೊಪ್ಪಿಗೆ ಅಷ್ಟೇ ಸಾಕು ; ಆತ ಅಧಿಕಾರದಲ್ಲಿ ಉಳಿಯಲು ಅಡ್ಡಿ ಇಲ್ಲ ಎನ್ನುತ್ತಾರೆ. ಭಾರತದ ಯುವ ಜನಾಂಗದ ದನಿಯೂ ಇದೇ ಆಗಿರಲಿಕ್ಕೆ ಸಾಕು.**

ಲೈಂಗಿಕ ಆಸೆ, ಮನುಷ್ಯನ ಹುಟ್ಟಾಸೆಗಳಲ್ಲಿ ಪ್ರಮುಖವಾದದ್ದು ಎನ್ನುತ್ತಾನೆ ಮನಶಾಸ್ತ್ರಜ್ಞ ಸಿಗ್ಮಂಡ್ ಫ್ರಾಯ್ಡ್. ಹಸಿವು ನೀರಡಿಕೆಗಳು ಅವನು ಬದುಕಲು ಬೇಕಾದ ಹುಟ್ಟಾಸೆಗಳಾದರೆ, ಲೈಂಗಿಕ ಆಸೆ, ಆತ ಸಂತಾನೋತ್ಪತ್ತಿ ಮಾಡಲು ಬೇಕಾದ ಹುಟ್ಟಾಸೆ. ಅನ್ನದಾಸೆಗಿಂತ, ಚಿನ್ನದಾಸೆಗಿಂತ ಹೆಚ್ಚು, ಗಂಡು-ಹೆಣ್ಣೊಲವು ಎನ್ನುತ್ತಾರೆ ದಾರ್ಶನಿಕ ಡಾ ಡಿ.ವಿ.ಗುಂಡಪ್ಪನವರು. ಮನುಷ್ಯನ ನಡವಳಿಕೆಯನ್ನು ನಿರ್ದೇಶಿಸುವಲ್ಲಿ ಲೈಂಗಿಕ ಬಯಕೆ ಅತ್ಯಂತ ಪ್ರಬಲ ಎನ್ನುವುದರಲ್ಲಿ ಎರಡು ಮಾತಿಲ್ಲ.

ಈ ಲೈಂಗಿಕ ಆಸೆ, ಬಯಕೆ ಮೂಡುವುದು ಹದಿವಯಸ್ಸಿನಲ್ಲಿ. ವ್ಯಕ್ತಿಯ ಬಾಲ್ಯಾವಸ್ಥೆ ಕಳೆದು, ಹರೆಯಕ್ಕೆ ಕಾಲಿಡುತ್ತಿದ್ದಂತೆ, ದೇಹದ ನಿರ್ನಾಳ ಗ್ರಂಥಿಗಳು ಚುರುಕುಗೊಂಡು, ಲೈಂಗಿಕ ಹಾರ್ಮೋನುಗಳ ಸ್ರಾವಕ್ಕೆ ವ್ಯವಸ್ಥೆ ಮಾಡುತ್ತವೆ. ಗಂಡಿನಲ್ಲಿ ಟೆಸ್ಟೋಸ್ಟೀರಾನ್ ಹಾರ್ಮೋನು ಸ್ರಾವಗೊಂಡು ದೈಹಿಕ ಬೆಳವಣಿಗೆ, ಗಡ್ಡ ಮೀಸೆ ಧ್ವನಿ ಒಡೆಯುವಿಕೆ, ಶಿಶ್ನ ನಿಮಿರುವುದು, ವೃಷಣಗಳು ವೀರ್ಯೋತ್ಪತ್ತಿ ಮಾಡಿ, ಅದನ್ನು ಅವಧಿಗೊಂದಾವರ್ತಿ ಸ್ಖಲಿಸುವುದು ಇತ್ಯಾದಿ ಪುರುಷ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಸ್ತ್ರೀಯಲ್ಲಿ ಈಸ್ಟ್ರೋಜನ್ ಮತ್ತು ಪ್ರೊಜೆಸ್ಟರಾನ್ ಉತ್ಪತ್ತಿಯಾಗಿ ಸ್ತನಗಳ ಬೆಳವಣಿಗೆ, ದೇಹದ ಉಬ್ಬು ತಗ್ಗುಗಳು, ಋತು ಚಕ್ರ ಪ್ರಾರಂಭವಾಗುವುದು ಇತ್ಯಾದಿ ಲಕ್ಷಣಗಳು ಮೂಡುತ್ತವೆ. ಈ ಅವಧಿಯಲ್ಲಿ ಹುಡುಗನಿಗೆ, ಹುಡುಗಿಯ ಬಗ್ಗೆ, ಹುಡುಗಿಗೆ ಹುಡುಗರ ಬಗ್ಗೆ ಆಸಕ್ತಿ, ಪ್ರೀತಿ ಪ್ರೇಮದ ಭಾವನೆಗಳು, ಜೀವನ ಸಂಗಾತಿ ಹೇಗಿರಬೇಕೆಂಬ ಕಲ್ಪನೆ, ಸಂಭೋಗ ಮಾಡುವ ಆಸೆಗಳು ಕಾಣಿಸಿಕೊಳ್ಳುತ್ತವೆ.

ಸಾಮಾಜಿಕ ವ್ಯವಸ್ಥೆಯಲ್ಲಿ, ವ್ಯಕ್ತಿಯ ಮದುವೆಯಾಗಲು, ಲೈಂಗಿಕ ಕ್ರಿಯೆ ನಡೆಸಲು ಹಲವಾರು ವರ್ಷಗಳ ಕಾಲ ಕಾಯಬೇಕಾಗುತ್ತದೆ. ಪುರುಷ ತನ್ನ ವಿದ್ಯಾಭ್ಯಾಸ ಮುಗಿಸಿ, ಉದ್ಯೋಗ ಹಿಡಿದು ಸಂಪಾದನೆ ಮಾಡಿ, ವೈವಾಹಿಕ ಜೀವನಕ್ಕೆ ಸಜ್ಜಾಗಬೇಕಾಗುತ್ತದೆ. ಹಾಗೆಯೇ ಸ್ತ್ರೀ ವಿದ್ಯಾವಂತಳಾಗಿ ಸಾಧ್ಯವಾದರೆ, ತಾನೂ ಒಂದು ಉದ್ಯೋಗ ಹಿಡಿದು, ಸಾಂಸಾರಿಕ ಜೀವನಕ್ಕೆ ಸಿದ್ಧಳಾಗಬೇಕಾಗುತ್ತದೆ. ಕೌಟುಂಬಿಕ ವ್ಯವಸ್ಥೆ ಇರುವ ಬಹುತೇಕ ಸಮಾಜಗಳಲ್ಲಿ ಒಂದು ಗಂಡಿಗೆ ಒಂದು ಹೆಣ್ಣು ಪರಸ್ಪರ ನಿಷ್ಠೆಯಿಂದ ಇರಬೇಕು ಎಂದು ನಿರೀಕ್ಷೆ ಮಾಡಲಾಗುತ್ತದೆ. ಕೆಲವೇ ಸಾಮಾಜಿಕ ಉಪ ಗುಂಪುಗಳಲ್ಲಿ ಬಹುಪತಿತ್ವ ಅಥವಾ ಬಹುಪತ್ನಿತ್ವ ಬಳಕೆಯಲ್ಲಿದೆ. ಅನೇಕ ಸಾಂಪ್ರದಾಯಿಕ ಸಮಾಜಗಳಲ್ಲಿ ವಿವಾಹ ಪೂರ್ವದಲ್ಲಾಗಲೀ, ವಿವಾಹದ ನಂತರವಾಗಲೀ ವೈವಾಹಿಕ ಚೌಕಟ್ಟಿನ ಹೊರಗಡೆ, ಲೈಂಗಿಕ ಸಂಬಂಧವನ್ನು ಇಟ್ಟುಕೊಳ್ಳುವುದು ನಿಷಿದ್ಧ, ಸಲ್ಲದ ನಡವಳಿಕೆ ಎನಿಸಿಕೊಳ್ಳುತ್ತದೆ. ತಾನು ಮದುವೆಯಾಗುವ ಹುಡುಗಿ ಕನ್ಯೆಯಾಗಿರಬೇಕು. ಅನಾಘ್ರಾಣಿತ ಕುಸುಮವಾಗಿರಬೇಕು ಎಂದು ಪ್ರತಿಯೊಬ್ಬ ಹುಡುಗನೂ ಬಯಸುತ್ತಾನೆ. ಹಾಗೆಯೇ ತಾನು ಮದುವೆಯಾಗಲಿರುವ ಹುಡುಗ ಬ್ರಹ್ಮಚಾರಿಯಾಗಿರಬೇಕು. ಅವನ ಹೃದಯ ಸಿಂಹಾಸನದ ಮೊದಲ ಮತ್ತು ಏಕೈಕ ಸಾಮ್ರಾಜ್ಞಿ ತಾನಾಗಬೇಕು ಎಂದು ಹುಡುಗಿ ಇಷ್ಟ ಪಡುತ್ತಾಳೆ.

ಹುಡುಗನ ಬಗ್ಗೆ ಅಥವಾ ಹುಡುಗಿಯ ಗುಣ, ಲೈಂಗಿಕ ನಡವಳಿಕೆ ಬಗ್ಗೆ ಒಡಕು ಮಾತು ಕೇಳಿ ಬಂದರೆ, ನಿಶ್ಚಯವಾಗಿದ್ದ ಮದುವೆಗಳು ನಡೆಯುವುದೇ ಇಲ್ಲ. ಅಂತೆಯೇ ಮದುವೆಯಾದ ನಂತರ ಗಂಡನೋ ಅಥವಾ ಹೆಂಡತಿಯೋ ಮತ್ತೊಬ್ಬ ವ್ಯಕ್ತಿಯನ್ನು ಇಷ್ಟಪಡುತ್ತಾನೆ(ಳೆ) ಎಂದರೆ ಅಥವಾ ಇನ್ನೊಬ್ಬ ವ್ಯಕ್ತಿಯ ಲೈಂಗಿಕ ಸಂಪರ್ಕ ಮಾಡಿದ್ದಾನೆ(ಳೆ) ಎಂದಾದರೆ, ದಾಂಪತ್ಯ ಒಡೆದು ಛಿದ್ರವಾಗುತ್ತದೆ. ಗಂಡ ಹೆಂಡತಿ ದೂರ ಸಿಡಿದು ನಿಲ್ಲುತ್ತಾರೆ; ಕೋರ್ಟಿಗೆ ಹೋಗಿ ವಿವಾಹ ವಿಚ್ಛೇದನಕ್ಕೆ ಅರ್ಜಿ ಹಾಕುತ್ತಾರೆ. ಕಚ್ಚೆ ಭದ್ರವಿರುವ ಪುರುಷನನ್ನು, ಶೀಲವತಿಯಾದ

**ನಾವು ಯಾರನ್ನು ನಾಯಕರು, ಮಾದರಿ ನಡವಳಿಕೆಯುಳ್ಳವರು ಎಂದುಕೊಳ್ಳುತ್ತೇವೆಯೋ, ಅವರೂ ನಮ್ಮಂತೆಯೇ ಸಾಧಾರಣ ಮನುಷ್ಯರಾಗಿರಬಹುದು. ರಾಗ ದ್ವೇಷಗಳಿಗೆ, ಕಾಮ ಮೋಹ ಮದ ಮಾತ್ಸರ್ಯಗಳಿಗೆ ಒಳಗಾಗುವಂತವರಾಗಿರುತ್ತಾರೆ.**

ಸ್ತ್ರೀಯನ್ನು ಜನ ಕೊಂಡಾಡುತ್ತಾರೆ.

ಪುರಾಣ ಪುಣ್ಯಕಥೆಗಳಲ್ಲಿ ಶೀಲವಂತ ಪುರುಷ, ಸ್ತ್ರೀಯನ್ನು ಮಾದರಿಯಾಗಿ ಚಿತ್ರಿಸಲಾಗುತ್ತದೆ. ಅವರಂತೆ ನಡೆಯಲು, ಅವರಂತೆ ಇರಲು ಪ್ರೇರಣೆ ನೀಡಲಾಗಿದೆ. ಮರ್ಯಾದಾ ಪುರುಷೋತ್ತಮ, ಪರನಾರಿಸೋದರ ಶ್ರೀರಾಮ ಚಂದ್ರನ ಏಕೈಕ ಪುರುಷ ಮಾದರಿಯನ್ನು ನಮ್ಮ ಮುಂದೆ ಇಡಲಾಗಿದೆ. ಕಾಮವನ್ನು ಸುಟ್ಟು, ಅದರ ಮೇಲೆ ವಿಜಯ ಸಾಧಿಸಿದ ಶಿವನಿಗೂ ಇಬ್ಬರು ಹೆಂಡತಿಯರು, ವಿಷ್ಣುವಿಗೂ ಇಬ್ಬರು. ಬ್ರಹ್ಮ ತಾನು ಸೃಷ್ಟಿಸಿದ ಸರಸ್ವತಿಯನ್ನೇ ಮೋಹಿಸಿ ಮದುವೆಯಾದ, ವಿಷಯ ಲೋಲುಪರ ತಿಲಕ ಪ್ರಾಯನಾಗಿ ದೇವತೆಗಳ ದೊರೆ ದೇವೇಂದ್ರನನ್ನು ಚಿತ್ರಿಸಲಾಗಿದೆ. ಗೌತಮರ ಪತ್ನಿ ಅಹಲ್ಯೆಯೊಂದಿಗೆ ಆತ ನಡೆಸಿದ ಮೋಸದ ವ್ಯಭಿಚಾರ ಲೋಕ ಪ್ರಸಿದ್ಧಿ. ಶೀಲವಂತ ದೇವತೆಗಳಿಗಿಂತ ಶೀಲವತಿಯರಾದ ಸ್ತ್ರೀಯರ ಸಂಖ್ಯೆಯೇ ಹೆಚ್ಚು.

ಸೀತೆ, ಸಾವಿತ್ರಿ, ಅರುಂಧತಿ, ಮಂಡೋದರಿ, ದ್ರೌಪದಿಯರನ್ನು ಆದರ್ಶ ಪತಿವ್ರತೆಯರನ್ನಾಗಿ ನಮ್ಮ ಮುಂದೆ ಇಡಲಾಗಿದೆ. ಐವರು ಗಂಡಂದಿರನ್ನು ಪಡೆದು, ಕರ್ಣನನ್ನೂ ಮನಸ್ಸಿನಲ್ಲಿ ಮೋಹಿಸಿದ ದ್ರೌಪದಿಯೂ ಶೀಲವಂತೆಯೇ. ಗಂಡ ಹೇಗೇ ಇರಲಿ ಹೆಂಡತಿ ಪತಿವ್ರತೆಯಾಗಿದ್ದರೆ, ಕಾಯಾವಾಚಾಮನಸಾ ಗಂಡನಿಗೆ ನಿಷ್ಠೆಯಿಂದಿದ್ದರೆ, ಆ ಗಂಡ, ಆ ಕುಟುಂಬಕ್ಕೆ ಕೇಡಿಲ್ಲ. ಯಶಸ್ಸು ಸುಖ ಶಾಂತಿ ಕಟ್ಟಿಟ್ಟಬುತ್ತಿ ಎಂದು ಹೇಳಿ, ಗಂಡಸರಿಗಿಂತ, ಹೆಂಗಸರಿಗೆ ಲೈಂಗಿಕ ಸಂಯಮ ಮುಖ್ಯ ಎಂಬ ಪಕ್ಷಪಾತದ ನ್ಯಾಯವನ್ನು ನಾವು ಕಾಣಬಹುದು.

ಪುರಾಣಪುರುಷ ಸ್ತ್ರೀಯರ ನಂತರ, ರಾಜ ಮಹಾರಾಜರು ಸಮಾಜದ ನಾಯಕರಾದಾಗ, ಈ ಪ್ರವೃತ್ತಿಯೇ ಮುಂದುವರೆಯಿತು. ಲೈಂಗಿಕ ಸಚ್ಚಾರಿತ್ರ್ಯದ ರಾಜ, ಚಕ್ರವರ್ತಿಗಳಿಗಿಂತ ಲಂಪಟ ರಾಜಮಹಾರಾಜರುಗಳ ಸಂಖ್ಯೆಯೇ ಹೆಚ್ಚಾಗತೊಡಗಿತು. ಕಡೆಗೆ 'ರಾಜೆ ಬಹುಪತ್ನಿವಲ್ಲಭ' ಎಂಬ ನಾಣ್ಣುಡಿಯನ್ನು ಸೃಷ್ಟಿಸಲಾಯಿತು. ಲೈಂಗಿಕ

## ಅಕ್ರಮ ಸಂಬಂಧದ ಕೆಲವು ಕಾರಣಗಳು

### ಪುರುಷತನದ ಬಗ್ಗೆ ಅನುಮಾನ

ಹದಿಹರೆಯದಲ್ಲಿ, ಜನನಾಂಗ ಉದ್ರೇಕಗೊಂಡು, ವೀರ್ಯ ಸ್ಖಲನವಾಗುವುದು ಸಹಜ ಮತ್ತು ಸ್ವಾಭಾವಿಕ. ಹಾಗೆಯೇ ಜನನಾಂಗದ ಸ್ಪರ್ಶ ಹಿತಕರವಾಗಿ, ಸ್ವಪ್ರಚೋದನೆಯಿಂದ ವೀರ್ಯಸ್ಖಲನ ಮಾಡಿಕೊಳ್ಳುವುದೂ ಒಂದು ಸರಳ, ಸುರಕ್ಷಿತ, ನೈಸರ್ಗಿಕ ಚಟುವಟಿಕೆ. ಆದರೆ ಇವುಗಳ ಬಗ್ಗೆ ತಪ್ಪು ಕಲ್ಪನೆ, ಭಯಗಳು ಹೇರಳವಾಗಿವೆ. 'ಹಸ್ತಮೈಥುನದಿಂದ, ವೀರ್ಯಸ್ಖಲನಗಳಿಂದ ಪುರುಷ ದುರ್ಬಲನಾಗುತ್ತಾನೆ, ಷಂಡನಾಗುತ್ತಾನೆ, ಬಂಜೆಯಾಗುತ್ತಾನೆ' ಎಂಬ ಜನಪ್ರಿಯ, ಆದರೆ ಅವೈಜ್ಞಾನಿಕ ನಂಬಿಕೆಯಿಂದ ವ್ಯಕ್ತಿ ಜರ್ಝರಿತನಾಗುತ್ತಾನೆ. 'ವೀರ್ಯನಾಶವೇ ಮೃತ್ಯು ಬ್ರಹ್ಮಚರ್ಯೆಯೇ ಜೀವನ' ಎಂದು ಕೆಲವರು ಪ್ರಚಾರ ಮಾಡಿದ್ದಾರೆ. ಇದರಿಂದ ವ್ಯಾಕುಲಗೊಂಡ ಯುವಕ, ಮನೋಕ್ಲೇಶದಿಂದ ಬಳಲುತ್ತಾನೆ. ತನ್ನ ಪುರುಷತನದ ಬಗ್ಗೆ ಅನುಮಾನ ಪಡತೊಡಗುತ್ತಾನೆ. ತನ್ನ ಪುರುಷತನದ ಟೆಸ್ಟ್ ಮಾಡಲು, ವಿವಾಹ ಪೂರ್ವ ಅವಧಿಯಲ್ಲಿ ಪರಿಚಿತ ಅಥವಾ ಅಪರಿಚಿತ ಅಥವಾ ವೇಶ್ಯಾಸ್ತ್ರೀಯ ಸಂಗ ಮಾಡುತ್ತಾನೆ.

### ಲೈಂಗಿಕ ಕ್ರಿಯೆಯ ಅತಿರಂಜಿತ ಕಲ್ಪನೆ

ಲೈಂಗಿಕ ಕ್ರಿಯೆ ಹಾಗೆ ಮಾಡಬೇಕು. ಹೀಗೆ ಮಾಡಬೇಕು. ಹೆಣ್ಣಿನ ಮುಂದೆ ತನ್ನ ಪುರುಷತನ, ಲೈಂಗಿಕ ಶಕ್ತಿಯ ಪ್ರದರ್ಶನ ಮಾಡಬೇಕು ಎಂದು ಲೈಂಗಿಕ ಸುಖದ ಬಗ್ಗೆ ಅಪರಿಮಿತ ನಿರೀಕ್ಷೆಗಳಿಟ್ಟುಕೊಂಡ ಪುರುಷ, ಹೆಂಡತಿಯೊಂದಿಗೆ ನಡೆಸುವ ಲೈಂಗಿಕ ಕ್ರಿಯೆಯಿಂದ ಒಂದು ರೀತಿಯ ಭ್ರಮನಿರಸನಕ್ಕೆ ತುತ್ತಾಗುತ್ತಾನೆ. ಎರಡುಮೂರು ನಿಮಿಷಗಳಲ್ಲೇ ಮುಗಿದು ಹೋಗುವ ಲೈಂಗಿಕ ಕ್ರಿಯೆಯನ್ನು ಕಂಡು ನಿರಾಶನಾಗುತ್ತಾನೆ. ತಾನು ಕಲ್ಪಿಸಿಕೊಂಡ ಸುಖವನ್ನು ಹೆಂಡತಿಯಿಂದ ಪಡೆಯಲು ಸಾಧ್ಯವಿಲ್ಲ, ಅದು ಇನ್ನೊಬ್ಬ ಸ್ತ್ರೀಯಿಂದ ಸಿಗಬಹುದು ಎಂದು ಲೆಕ್ಕ ಹಾಕುತ್ತಾನೆ. ಕೈಹಿಡಿದ ಹೆಂಡತಿಗಿಂತ, ನೆರೆಮನೆಯ ಹೆಂಡತಿಯೋ, ಸಹೋದ್ಯೋಗಿಯೋ, ವೇಶ್ಯೆಯೋ ಆತನಿಗೆ ಹೆಚ್ಚು ಮೋಹಕವಾಗಿ, ಸೆಕ್ಸಿಯಾಗಿ ಕಾಣತೊಡಗುತ್ತಾಳೆ. ವಿವಾಹೇತರ ಸಂಬಂಧ ಮಾಡಲು ಅವನನ್ನು ಪ್ರಚೋದಿಸುತ್ತಾಳೆ.

### ಹೆಂಡತಿ ಮನೆಯಲ್ಲಿ ಇಲ್ಲದ ಅವಧಿ

ಕೆಲಸದ ನಿಮಿತ್ತವಾಗಿ, ಕಾಯಿಲೆ ದೆಸೆಯಿಂದಾಗಿ, ತೌರಿಗೆ ಹೋದ ಹೆಂಡತಿಯಿಂದಾಗಿ, ಲೈಂಗಿಕ ಬಯಕೆ ಮೂಡಿದಾಗ, ಪುರುಷನಿಗೆ ಹೊರಗೆ ಮೇಯುವ ಚಪಲ ಬರುತ್ತದೆ. ಊರಿನಲ್ಲಿ ರಂಗನಾಗಿ ಸಭ್ಯನಂತೆ ಮೆರೆಯುವ ಆತ, ಹೆಂಡತಿ ಪರ ಊರಿಗೆ ಹೋದಾಗ, ಮಂಗನಾಗುತ್ತಾನೆ. ಲಂಗುಲಗಾಮಿಲ್ಲದೆ, ಯಾರೂ ತನ್ನನ್ನು ಕೇಳುವರಿಲ್ಲ ಎಂದು ತಿಳಿದು, ಇನ್ನೊಬ್ಬ ಹೆಂಗಸಿನ ಸಂಪರ್ಕ ಮಾಡಲು ಹಾತೊರೆಯುತ್ತಾನೆ.

### ಅಸಹಜ ಕಾಮಕೇಳಿಯ ಬಯಕೆ

ಕೆಲವರಿಗೆ ಸಹಜ ಲೈಂಗಿಕ ಕ್ರಿಯೆಯಿಂದ ನಿರೀಕ್ಷಿತ ಸಂತೋಷ, ಸಂಭ್ರಮ ಸಿಗುವುದಿಲ್ಲ. ಅಸಹಜ ಅಥವಾ ವಿಕೃತ ಕಾಮ ಕೇಳಿಗಾಗಿ ಮನೆಯ ಹೊರಗಡೆ ಅರಸತೊಡಗುತ್ತಾರೆ. ಸಹಜ ಪ್ರವೃತ್ತಿಯ, ಸಂಪ್ರದಾಯ ಮನೋಭಾವದ ಹೆಂಡತಿ ಮುಖರತಿಗೆ ಒಪ್ಪಳು. ಗುದ ಸಂಭೋಗಕ್ಕೆ ಅಸಹ್ಯ ಪಡುತ್ತಾಳೆ. ಗಂಡನೆದುರು ಪೂರ್ಣವಾಗಿ ನಗ್ನಳಾಗಲೂ ನಾಚುತ್ತಾಳೆ. ಆಗ ಪುರುಷ ಈ ಬಗೆಯ ಅನುಭವಗಳಿಗಾಗಿ, ವಿವಾಹೇತರ ಸಂಬಂಧ ಮಾಡತೊಡಗುತ್ತಾನೆ.

### ಗಂಡ ಹೆಂಡತಿಯರ ವಿರಸ

ಲೈಂಗಿಕ ಕ್ರಿಯೆಯಲ್ಲಿ ಹೊಂದಾಣಿಕೆ ಇಲ್ಲದಿರುವುದು, ಪರಸ್ಪರ ದ್ವೇಷ, ತಿರಸ್ಕಾರ, ಅನೇಕ ವೈಯಕ್ತಿಕ, ಕೌಟುಂಬಿಕ, ಆರ್ಥಿಕ ಮತ್ತು ಹವ್ಯಾಸಕ್ಕೆ ಸಂಬಂಧಿಸಿದ ಕಾರಣಗಳಿಂದಾಗಿ, ದಾಂಪತ್ಯವಿರಸ ಕಾಣಿಸಿಕೊಳ್ಳುತ್ತದೆ; ಸಂಬಂಧ ಹಳಸಿಕೊಳ್ಳುತ್ತದೆ. ಪರಸ್ಪರ ಪ್ರೀತಿ-ಅನುರಾಗವಿಲ್ಲದ ಈ ದಂಪತಿಗಳು, ಲೈಂಗಿಕ ಕ್ರಿಯೆಯಲ್ಲಿ ವಿಫಲರಾಗುತ್ತಾರೆ. ಸುಖ ಪಡೆಯಲು, ಕೊಡಲು ಅನರ್ಹರಾಗುತ್ತಾರೆ. ಆಗ ಪುರುಷ ಹೊರಗಡೆ ಈ ಸುಖವನ್ನು ಪಡೆಯಲು ಮುಂದಾಗುತ್ತಾನೆ.

ಇದರಿಂದಾಗಿ ಯಾವುದೇ ಸಮಾಜದಲ್ಲಿ ಪುರುಷ ಮತ್ತು ಸ್ತ್ರೀ ತಮ್ಮ ಲೈಂಗಿಕ ಸಚ್ಚಾರಿತ್ರ್ಯವನ್ನು ಉಳಿಸಿಕೊಳ್ಳುವುದಿಲ್ಲ. ಹಾದರಕ್ಕೆ ತೊಡುಗುತ್ತಾರೆ. ಆದರೆ ಅದನ್ನು ಮುಚ್ಚಿಡುತ್ತಾರೆ. ಬಹಿರಂಗವಾಗಿ ಸಭ್ಯರಂತೆ, ಲೈಂಗಿಕ ಸಚ್ಚಾರಿತ್ರ್ಯ ಉಳ್ಳವರಂತೆ ಸೋಗು ಹಾಕುತ್ತಾರೆ. ತಾವು ಮೆಚ್ಚುವ, ಆರಾಧಿಸುವ, ಗೌರವಿಸುವ ಅಥವಾ ತಮ್ಮನ್ನು ಆಳುವ ನಾಯಕರು, ನಾಯಕಿಯರು, ಸಚ್ಚಾರಿತ್ರ್ಯ ಉಳ್ಳವರಾಗಿರಬೇಕೆಂದು ನಿರೀಕ್ಷಿಸುತ್ತಾರೆ.

**ಭಾರತದ ಪ್ರಥಮ ಪ್ರಧಾನಿಯಿಂದ ಹಿಡಿದು, ಪ್ರಸಕ್ತ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಯವರೆಗೆ ಲೈಂಗಿಕ ಚಾಂಚಲ್ಯ ಮೆರೆದವರನ್ನು ಬಹಿರಂಗವಾಗಿ ಟೀಕಿಸದೇ ಸುಮ್ಮನಾಗಿಬಿಡುತ್ತೇವೆ. ಆದರೆ ಲೈಂಗಿಕ ಮುಕ್ತತೆಯ ಸಮಾಜವಾದ ಅಮೆರಿಕಾ ದೇಶದ ಕಥೆಯು ಸ್ವಲ್ಪ ವಿಭಿನ್ನ. ಅದರ ಅಧ್ಯಕ್ಷ ಜಾನ್ ಎಫ್ ಕೆನಡಿಯು ಅನೇಕ ವಿವಾಹೇತರ ಪ್ರಕರಣಗಳಲ್ಲಿ ಸಿಕ್ಕಿ ಹಾಕಿಕೊಂಡಿದ್ದರೂ, ಸಮಾಜ ಸುಮ್ಮನಿತ್ತು. ಈಗ ಬಿಲ್‌ಕ್ಲಿಂಟನ್ ಸುಳ್ಳು ಹೇಳಿದನೆಂದು ಆತನ ಮೇಲೆ ಆಕ್ರೋಶವೇ ಹೊರತು, ಆತ ವಿಷಯಲೋಲುಪ ಎಂದಲ್ಲ.**

ಸ್ವಚ್ಛಂದತೆಗೆ ರಾಜಕೀಯ ಬಣ್ಣಬಳಿದು, ರಾಜ ಅನೇಕ ಜನ ಸ್ತ್ರೀಯರನ್ನು ಅವರ ಇಷ್ಟಾನಿಷ್ಟಗಳನ್ನು ಕಡೆಗಣಿಸಿ ವರಿಸುವ ಪದ್ಧತಿ ಬೆಳೆಯಿತು. ಚಕ್ರವರ್ತಿ ಹತ್ತಾರು, ನೂರಾರು ಪತ್ನಿ, ಉಪಪತ್ನಿಯರನ್ನು ಹೊಂದಿರುತ್ತಿದ್ದ. ಜನ ಮರುಮಾತಿಲ್ಲದೆ ಇದನ್ನು ಒಪ್ಪಿಕೊಂಡರು. ಆದರೆ ಗಂಡನನ್ನು ವರ್ಷಕ್ಕೊಮ್ಮೆಯೂ ನೋಡ ಲಾಗದ ಹೆಂಡತಿ ಮಾತ್ರ ಅವನಿಗೆ ಸದಾನಿಷ್ಠೆಯಿಂದ ಇದ್ದು ಪತೀವ್ರತಾಶಿರೋಮಣಿ ಎಂದು ಕರೆಸಿಕೊಳ್ಳಬೇಕಾಗುತ್ತಿತ್ತು. ರಾಜನಿಗಿಲ್ಲದ ಲೈಂಗಿಕ ನಿಷ್ಠೆ ನಿಯಮಗಳು, ರಾಣಿಗೆ ಕಡ್ಡಾಯ ವಾಗಿ ಅನ್ವಯವಾಗುತ್ತಿತ್ತು.

ರಾಜ ಮಹಾರಾಜರ ಈ ಚಾಳಿ, ಸಣ್ಣ ಪುಟ್ಟ ಪಾಳೆಯಗಾರರು, ಊರ ಗೌಡ, ಹಳ್ಳಿಯ ನಾಯಕ, ಶ್ರೀಮಂತರಿಗೂ ಹಬ್ಬಿತು. ಕಟ್ಟಿ ಕೊಂಡವಳು ಒಬ್ಬಬ್ಬರಾದರೆ, ಇಟ್ಟುಕೊಂಡವಳ ಸಂಖ್ಯೆ ಹತ್ತಾರು! ಯಾರು ಹೆಚ್ಚು ಸ್ತ್ರೀಯರನ್ನು ಹೊಂದುತ್ತಾರೋ ಅವರು ಪರಾಕ್ರಮಿಗಳೂ ವೀರ್ಯವಂತರು, ಗಟ್ಟಿಗರು ಎಂದು ಹೇಳ ಲಾಯಿತು ! ಏಕ ಪತ್ನೀವ್ರತ ಆಚರಣೆಗೆ ತರ ಲಾಗದ, ಒಂದು ಆದರ್ಶ ಕಲ್ಪನೆಯಾಗೇ ಉಳಿಯಿತು!

ಇಂದಿಗೂ ನಮ್ಮ ಸಮಾಜದಲ್ಲಿ ಶ್ರೀಮಂತ ಮೇಲ್ವರ್ಗಗಳಲ್ಲಿ, ಕೆಳವರ್ಗದ ಜನಗಳಲ್ಲಿ ಲೈಂಗಿಕ ಸಚ್ಚಾರಿತ್ರ್ಯ ಅಪರೂಪದ ವಸ್ತು. ವಿವಾಹೇತರ ಅಕ್ರಮ ಸಂಬಂಧಗಳು ಎಲ್ಲೆಡೆ ಕಂಡುಬರುತ್ತವೆ. ದೈಹಿಕ ಅಗತ್ಯಗಳಿಗಾಗಿ, ಲೈಂಗಿಕ ವೈವಿಧ್ಯಕ್ಕಾಗಿ, ಅನೇಕ ತಪ್ಪು ನಂಬಿಕೆಗಳಿಂದ ಗಂಡಸರು ವಿವಾಹ ಪೂರ್ವ ಮತ್ತು ವಿವಾಹೇತರ ಅಕ್ರಮ ಸಂಬಂಧ ಗಳನ್ನು ಮಾಡತೊಡಗುತ್ತಾರೆ.

ಆದರೆ, ನಾವು ಯಾರನ್ನು ನಾಯಕರು, ಮಾದರಿ ನಡವಳಿಕೆಯುಳ್ಳವರು ಎಂದುಕೊಳ್ಳುತ್ತೇವೆಯೋ, ಅವರೂ ನಮ್ಮಂತೆಯೇ ಸಾಧಾರಣ ಮನುಷ್ಯರಾಗಿರಬಹುದು. ರಾಗ ದ್ವೇಷಗಳಿಗೆ, ಕಾಮ ಮೋಹ ಮದ ಮಾತ್ಸರ್ಯಗಳಿಗೆ ಒಳಗಾಗು ವಂತವರಾಗಿರುತ್ತಾರೆ. ಆಗ ನಾವು ಅದನ್ನು ಗಮನಿಸಿಯೂ ಗಮನಿಸದಂತೆ 'ಜಾಣ ಕುರುಡರಂತೆ' ವರ್ತಿಸಬಹುದು. ಇಲ್ಲವೇ ಗದ್ದಲವೆಬ್ಬಿಸಿ ಆ ವ್ಯಕ್ತಿಯನ್ನು ಆರಾಧನಾ ವೇದಿಕೆಯಿಂದ ಕೆಳ ಗಿಳಿಸುತ್ತೇವೆ. ಭಾರತದ ಪ್ರಥಮ ಪ್ರಧಾನಿಯಿಂದ ಹಿಡಿದು, ಪ್ರಸಕ್ತ ಕರ್ನಾಟಕ ರಾಜ್ಯದ ಮುಖ್ಯ ಮಂತ್ರಿಯವರೆಗೆ ಲೈಂಗಿಕ ಚಾಂಚಲ್ಯ ಮೆರೆದವರನ್ನು ಬಹಿರಂಗವಾಗಿ ಟೀಕಿಸದೇ ಸುಮ್ಮನಾಗಿಬಿಡುತ್ತೇವೆ. ಅಥವಾ ಕೆಲವೇ ಪ್ರಕರ ಣಗಳಲ್ಲಿ, ಆ ವ್ಯಕ್ತಿ ರಾಜೀನಾಮೆ ಕೊಟ್ಟು ಮನೆಗೆ, ನೇಪಥ್ಯಕ್ಕೆ ಸರಿಯುವಂತೆ ಮಾಡಿದ್ದೇವೆ.

ಆದರೆ ಲೈಂಗಿಕ ಮುಕ್ತತೆಯ ಸಮಾಜವಾದ ಅಮೆರಿಕಾ ದೇಶದ ಕಥೆಯು ಸ್ವಲ್ಪ ವಿಭಿನ್ನ. ಅದರ ಅಧ್ಯಕ್ಷ ಜಾನ್ ಎಫ್ ಕೆನಡಿಯು ಅನೇಕ ವಿವಾಹೇತರ ಪ್ರಕರಣಗಳಲ್ಲಿ ಸಿಕ್ಕಿ ಹಾಕಿ ಕೊಂಡಿದ್ದರೂ, ಸಮಾಜ ಸುಮ್ಮನಿತ್ತು. ಈಗ ಬಿಲ್‌ಕ್ಲಿಂಟನ್ ಸುಳ್ಳು ಹೇಳಿದನೆಂದು ಆತನ ಮೇಲೆ ಆಕ್ರೋಶವೇ ಹೊರತು, ಆತ ವಿಷಯಲೋಲುಪ ಎಂದಲ್ಲ. ಯಾವುದೇ ನೀತಿ ನಿಯಮಾವಳಿಗಳ ಬಂಧನವಿಲ್ಲದೆ, ಯಾರು ಯಾರೊಂದಿಗೆ ಬೇಕಾದರೂ, ರತಿಸುಖವನ್ನು ಅನುಭವಿಸಬಹುದು. ಅದರಲ್ಲಿ ತಪ್ಪಾಗಲೀ ಪಾಪವಾಗಲೀ ಇಲ್ಲ ಎನ್ನುವ ಮುಕ್ತ ನೀತಿ ಆ ಸಮಾಜದ್ದು. ANY THING IS FAIR IN LOVE AND WAR ಎಂಬುದನ್ನು ಆ ಜನ ಅಕ್ಷರಶಃ ಪಾಲಿಸುತ್ತಾರೆ. ವರ್ಣಮಯ ಚಿತ್ರಗಳ ಸಹಿತ (ಬ್ಲೂಫಿಲ್ಮ್) ಲೈಂಗಿಕ ಪ್ರಚೋದಕ ಸಾಹಿತ್ಯ ಸಲಕರಣೆ, ದೃಶ್ಯಮಾಧ್ಯಮದ ಕ್ಯಾಸೆಟ್‌ಗಳು, ಸಿನೇಮಾಗಳು ಅಲ್ಲಿ ಎಲ್ಲರಿಗೂ ಓದಲು, ನೋಡಲು ಲಭ್ಯ. ಮುಖರತಿಯಾಗಲಿ, ಗುದರತಿಯಾಗಲಿ, ಸಲಿಂಗರತಿಯಾಗಲೀ, ಸಮೂಹರತಿಯಾಗಲೀ, ಎಲ್ಲವೂ ಅಲ್ಲಿ ಸರಿ ನಡವಳಿಕೆಯೇ. ಇತ್ತೀಚಿನ ಅಧ್ಯಯನಗಳ ಪ್ರಕಾರ ಸುಮಾರು 40 ಲಕ್ಷ ದಂಪತಿಗಳು, ವಿವಾಹ ಬಂಧನವಿಲ್ಲದೆ, ಸತಿ ಪತಿಗಳಂತೆ ಬಾಳುತ್ತಿದ್ದಾರೆ. ಇಂದು ವಿವಾಹ, ನಾಳೆ ವಿಚ್ಛೇದನ, ನಾಳಿದ್ದು ಮರು ಮದುವೆ ಅಲ್ಲಿ ಯಾವ ಆಶ್ಚರ್ಯವನ್ನೂ ಹುಟ್ಟಿಸುವುದಿಲ್ಲ. ತಮ್ಮ ಜೀವನಾವಧಿಯಲ್ಲಿ ಹಲವಾರು ಜೀವನ ಸಂಗಾತಿಗಳನ್ನು ಅವರು ಪಡೆದುಕೊಳ್ಳುತ್ತಾರೆ. ಹಾಗೆಯೇ ಬದಲಾಯಿಸುತ್ತಾರೆ. ಗಂಡ ಹೆಂಡತಿಯರು ಸಂತೋಷ ಕೂಟಗಳಲ್ಲಿ ಬೇರೆ ಬೇರೆಯಾಗಿ, ಲೈಂಗಿಕ ಸಂಗಾತಿಯನ್ನು ಆಯ್ದುಕೊಂಡು, ಸುಖಿಸುತ್ತಾರೆ. ಜೀವನದ ಉದ್ದೇಶ ದೈಹಿಕವಾಗಿ ಗರಿಷ್ಠಮಟ್ಟದ ಸುಖಪಡುವುದು ಎಂದು ಹೇಳುತ್ತಾರೆ. ಆದರೆ ಇಂತಹ ಸಮಾಜದಲ್ಲೂ ನಾಯಕರು 'ಕೌಟುಂಬಿಕ ಜೀವನ'ವನ್ನು ಎತ್ತಿ ಹಿಡಿಯಬೇಕು. ತಾವು ಮಾಡಲಾರದ್ದನ್ನು, ಅವರು ಮಾಡಿ ತೋರಿಸಬೇಕು. ಉನ್ನತ ಸ್ಥಾನದಲ್ಲಿದ್ದಾಗ ಲಂಪಟ ರಾಗಬಾರದು ಎಂದು ಜನ ನಿರೀಕ್ಷಿಸುತ್ತಾರೆ. 'ಆಸೆಗೆ, ಮೋಹಕ್ಕೆ, ಸುಖ ಲಾಲಸೆಗೆ ಮರುಳಾದೆ ಕ್ಷಮಿಸಿ' ಎಂದರೆ ಜನ ಕ್ಷಮಿಸಲು ಸಿದ್ಧರಾಗುತ್ತಾರೆ. ಅವನನ್ನು ಶಿಕ್ಷಿಸಲು ಮುಂದಾಗುವುದಿಲ್ಲ. ಇಂದು ಅಮೆರಿಕಾ ಸಮಾಜದಲ್ಲಿ 'ಬಿಲ್ ಕ್ಲಿಂಟನ್' ಲೈಂಗಿಕ ಸುಖ ಬಯಸುವ ಪುರುಷರ ನಾಯಕನಂತೆ ಕಂಡು ಬರುತ್ತಾನೆ. ವೈಯಕ್ತಿಕವಾಗಿ ಪಾರ್ಟಿಗಳಲ್ಲಿ ಅವನನ್ನು ಮೆಚ್ಚುವ, ಅವನ ಲೈಂಗಿಕ ಹಗರಣಗಳನ್ನು ತಾರೀಫು ಮಾಡುವವರೇ ಹೆಚ್ಚು. 'ವಯಾಗ್ರ' ಔಷಧಿ ದೊರೆತು, ಹಣ್ಣಾದ ಮೀಸೆಯವರೂ, ಮೀಸೆಯನ್ನು ಹುರಿ ಮಾಡಿ, ಹರೆಯದ ಲಲನೆಯನ್ನು ಸಂಭೋಗಿಸುವ ಕನಸು ಕಾಣತೊಡಗಿದ್ದಾರೆ. ಯಾವುದೇ ಬಂಧನವಿಲ್ಲದೆ, ಎಷ್ಟು ಜನರೊಂದಿಗೆ ಸಾಧ್ಯವೋ ಅಷ್ಟೊಂದು ಜನರೊಂದಿಗೆ ಕೂಡಿ ಸುಖಿಸುವ ಬಯಕೆ ಹೊತ್ತಿದ್ದಾರೆ. ಚಿಕಿತ್ಸೆ ಇಲ್ಲದ, ಪ್ರಾಣ ತೆಗೆಯುವ 'ಏಡ್ಸ್' ಅಂತ ಮಾರಕ ರೋಗವೂ ಅವರ ಲೈಂಗಿಕ ದಾಹವನ್ನು ಹತೋಟಿಯಲ್ಲಿಡಲು ವಿಫಲವಾಗಿರುವುದು ಸುಸ್ಪಷ್ಟ. ಅಮೇರಿಕೆಯ ಅಸಂಖ್ಯಾತ ಮಕ್ಕಳಿಗೆ ತಮ್ಮ ಜೈವಿಕ ತಂದೆ ಯಾರು ಎಂದು ಗೊತ್ತಿಲ್ಲ. ಯಾರನ್ನೋ (ಮಲ)ತಂದೆ ಎಂದು ಕರೆದು ತೃಪ್ತಿ ಪಟ್ಟುಕೊಳ್ಳಬೇಕು. ಇಲ್ಲವೇ ಒಂಟಿಯಾಗಿ ಹಾಸ್ಟೆಲ್‌ಗಳಲ್ಲಿ, ಬೋರ್ಡಿಂಗ್‌ಗಳಲ್ಲಿ ಅನಾಥರಾಗಿ ಬೆಳೆಯಬೇಕು. ಕುಟುಂಬ ಜೀವನ ಅಪರೂಪದ ವಸ್ತುವಾಗಿ, ಸಮಾಜದಲ್ಲಿ ಅರಾಜಕತೆ, ವಿಪ್ಲವ, ಮದ್ದು-ಮದ್ಯವ್ಯಸನ, ಅಪರಾಧ, ಅಪಘಾತ, ಮನೋದೈಹಿಕ ಬೇನೆಗಳು ಹೆಚ್ಚುತ್ತಿದ್ದರೂ, ಆ ಸಮಾಜ 'ತಂತ್ರ ಜ್ಞಾನವೇ ನಮ್ಮನ್ನು ಬದುಕಿಸುತ್ತದೆ' ಎಂದು ನಂಬಿ

ಬದುಕುತ್ತಿದ್ದಾರೆ. ಮಾನಸಿಕವಾಗಿ ಅಸ್ವಸ್ಥರಾಗುತ್ತಿದ್ದಾರೆ.

ಈ ಘೋರ ಚಿತ್ರ ನಮ್ಮ ಜನರ ಕಣ್ಣಿಗೆ ಬಿದ್ದೇ ಇಲ್ಲ. ಕುರುಡರಂತೆ ಅಮೆರಿಕೆಯ ಜೀವನ ಶೈಲಿಯನ್ನು ಅಳವಡಿಸಿಕೊಳ್ಳುತ್ತಿದ್ದೇವೆ. ಕೋಕೋ ಕೊಲಾ, ಪೆಪ್ಸಿ, ಬೀರ್, ವಿಸ್ಕಿ ಕುಡಿಯುವುದು, ರಾಕ್-ಪಾಪ್ ಮ್ಯೂಸಿಕ್ ಕೇಳುವುದು, ಬ್ರೇಕ್‌ಡ್ಯಾನ್ಸ್ ಮಾಡುವುದು, ಮದುವೆಗೆ ಮೊದಲು ಮತ್ತು ಆಮೇಲೆ ಲೈಂಗಿಕ ಸಂಬಂಧವುಳ್ಳ ಬಾಯ್ ಫ್ರೆಂಡ್, ಗರ್ಲ್‌ಫ್ರೆಂಡ್ ಮಾಡಿಕೊಳ್ಳುವುದು, ಕಾರುಬಂಗಲೆ ಮೋಜಿನ ಜೀವನ ಮಾಡುವುದು, ಲೈಂಗಿಕ ಸ್ವೇಚ್ಛಾಚಾರದಲ್ಲಿ ತೊಡಗುವುದು ಹೊಸ ಪೀಳಿಗೆಯ ಜೀವನ ಮಾರ್ಗವಾಗಿದೆ. ನಾಯಕರುಗಳ ಭ್ರಷ್ಟಾಚಾರ ನೀತಿಗೆಟ್ಟ ನಡವಳಿಕೆ, ಸ್ವಾರ್ಥಗಳನ್ನು ಕಂಡರೂ, 'ಏನು ಮಾಡುವುದು, ಕಾಲ ಕೆಟ್ಟಿದೆ' ಎಂದು ಜನ ನಿಷ್ಕ್ರಿಯರಾಗುತ್ತಿದ್ದಾರೆ. 'ಲಂಚ, ತಿನ್ನಲಿ, ಆದರೆ ಕೆಲಸ ಮಾಡಲಿ' ಎಂದು ಹೇಳುತ್ತಾರೆ. ಸತ್ಯ ಅಹಿಂಸೆ-ಸಚ್ಚಾರಿತ್ರ್ಯವೆಲ್ಲ ಸ್ವಾತಂತ್ರ ಪೂರ್ವಕ್ಕೆ ಆಗಿಹೋಯಿತು. ಈಗ ಏನಿದ್ದರೂ ಸುಳ್ಳು, ಹಿಂಸೆ, ಮೋಸ, ವಂಚನೆ, ಹೇಗೆ ಸುಲಭದಲ್ಲಿ ಸುಖ ಪಡುವುದು ಹಣ ಸಂಪತ್ತನ್ನು ಗಳಿಸುವುದು ಮಾತ್ರ. ಬೇರೇನೂ ಬೇಡ ಎನ್ನುತ್ತಾರೆ. ಬಿಲ್ ಕ್ಲಿಂಟನ್ ಕೇವಲ ರೋಗಗ್ರಸ್ತ ಅಮೆರಿಕಾ ಸಮಾಜದ ಪ್ರತಿನಿಧಿಯಲ್ಲ. ಇಡೀ ಜಗತ್ತಿನ, ಭಾರತವೂ ಸೇರಿದಂತೆ ಎಲ್ಲ ಸಮಾಜಗಳ ಸುಖ, ಆಸೆ, ವಿಷಯಾಸಕ್ತಿಯ ಸಂಕೇತವಾಗಿದ್ದಾನೆ. ಆತನಿಗೆ ಶಿಕ್ಷೆ ಆಗುತ್ತದೆ ಎಂದರೆ, ತಮಗೆ ಶಿಕ್ಷೆ ಎಂದು ಜನ ಭಾವಿಸಿದರೆ ಆಶ್ಚರ್ಯವೇನಿಲ್ಲ. ಹೀಗಾಗಿ ಅಮೆರಿಕಾದ ಜನ ಆತನ ತಪ್ಪೊಪ್ಪಿಗೆ ಅಷ್ಟೇ ಸಾಕು ಆತ ಅಧಿಕಾರದಲ್ಲಿ ಉಳಿಯಲು ಅಡ್ಡಿ ಇಲ್ಲ ಎನ್ನುತ್ತಾರೆ. ಭಾರತದ ಯುವ ಜನಾಂಗದ ದನಿಯೂ ಇದೇ ಆಗಿರಲಿಕ್ಕೆ ಸಾಕು. ಈಗ ನಮ್ಮ ದೇಶದಲ್ಲೂ ನಾಯಕರುಗಳ ಅನೈತಿಕ ಬದುಕಿಗೆ ಜನ ಜಡ್ಡು ಗಟ್ಟಿಹೋಗಿದ್ದಾರೆ. ಸರಕಾರಿ ಕಚೇರಿಯಲ್ಲಿ ಲಂಚ ಸ್ವೀಕರಿಸುವ ಜವಾನ, ಕ್ಲರ್ಕ್ ಅಥವಾ ಆಫೀಸರ್, 'ಬಿಡೀಸಾರ್ ನಮ್ಮದೇನು. ಈ ದೇಶದ ಪ್ರಧಾನ ಮಂತ್ರಿಯೇ ಲಂಚ ತೆಗೆದುಕೊಂಡಿಲ್ಲವೇ? ಎನ್ನುತ್ತಾರೆ. ಲೈಂಗಿಕ ಹಗರಣಗಳಲ್ಲೂ ಈ ದನಿ ಕೇಳಿಬರುವ ದಿನಗಳು ದೂರವೇನಿಲ್ಲ. ಲೈಂಗಿಕ ಸಚ್ಚಾರಿತ್ರ್ಯ ಒಂದು 'ಹಿಂದಿನ ಆದರ್ಶ ಕಲ್ಪನೆ'ಯಾಗಿ ಉಳಿಯಬಹುದು. ಅದನ್ನು ತಮ್ಮ ಜೀವನದ ಒಂದು ನೀತಿ ನಡವಳಿಕೆಯನ್ನಾಗಿ ಮಾಡಿಕೊಳ್ಳುವವರ ಸಂಖ್ಯೆ ಕಡಿಮೆಯಾಗುತ್ತಾ ಹೋಗಬಹುದು. ■

(15ನೇ ಪುಟದಿಂದ)

# ಭಾರತದ ರಾಜಕಾರಣಿಗಳು ಮತ್ತು ಪ್ರಣಯದ ಕತೆಗಳು

ಸಂಪಾದಕತ್ವದಲ್ಲಿ ಪ್ರಕಟಗೊಳ್ಳುತ್ತಿದ್ದ 'ಸೂರ್ಯ ಇಂಡಿಯಾ' ಪತ್ರಿಕೆಯಲ್ಲಿ ವರದಿಯಾಗಿ ಜಗಜೀವನರಾಂ ಅವರು ಪ್ರಧಾನಿಯಾಗುವ ಯೋಗವನ್ನು ತಪ್ಪಿಸಿತು.

ಒರಿಸ್ಸಾ ಮುಖ್ಯಮಂತ್ರಿ ಜೆ.ಬಿ. ಪಟ್ನಾಯಕ್ ಅವರು ಸಹ ಹಲವಾರು ಹೆಂಗಸರೊಂದಿಗೆ ಅನೈತಿಕ ಸಂಬಂಧ ಹೊಂದಿದ್ದಾರೆ ಎಂಬ ಆರೋಪ ಇದೆ. ಈ ಕುರಿತಂತೆ ಇಲ್‌ಸ್ಟ್ರೇಟೆಡ್ ವೀಕ್ಲಿ ಜೆ.ಬಿ.ಪಟ್ನಾಯಕ್ ಜೀವನದ ಸ್ತ್ರೀಯರು ಎಂಬ ಲೇಖನವನ್ನು ಪ್ರಕಟಿಸಿತು. ಇದರಿಂದ ಕುಪಿತರಾದ ಪಟ್ನಾಯಕ್ ಪತ್ರಿಕೆಯ ಸಂಪಾದಕ ಪ್ರೀತೀಷ್ ನಂದಿ ವಿರುದ್ಧ ಮಾನನಷ್ಟ ಮೊಕದ್ದಮೆ ಹೂಡಿದರು. ಪ್ರೀತೀಷ್ ನಂದಿ ಕ್ಷಮೆ ಕೋರಿದ್ದರಿಂದ ಈ ಪ್ರಕರಣ ಅಂತ್ಯವಾಯಿತು. ಪಟ್ನಾಯಕ್‌ರ ದೌರ್ಬಲ್ಯ ಅವರು ಮುಖ್ಯಮಂತ್ರಿಯಾಗುವುದನ್ನು ತಡೆಯಲಿಲ್ಲ.

ಮಹಾರಾಷ್ಟ್ರದ ಉಪ ಮುಖ್ಯಮಂತ್ರಿ ಮುಂಡೆ ಅವರು ರಂಗಭೂಮಿ ಕಲಾವಿದೆ ಬರಾಕಾ ಪಟೇಲ್ ಅವಳೊಂದಿಗೆ ಹೊಂದಿದ್ದ ಸಂಪರ್ಕ ಬಹಿರಂಗವಾದಾಗ ಅದನ್ನು ಪ್ರತಿಪಕ್ಷಗಳು ತಮ್ಮ ರಾಜಕೀಯಕ್ಕೆ ಬಳಸಿಕೊಂಡರಾದರೂ ಅದಕ್ಕೆ ಜನರ ಬೆಂಬಲ ಲಭ್ಯವಾಗಲಿಲ್ಲ. ಅಲ್ಲದೆ ಮುಂಡೆ ಅವರ ಕಾರ್ಯವನ್ನು ಸಮರ್ಥಿಸಿಕೊಂಡ ಶಿವಸೇನೆಯ ಮುಖ್ಯಸ್ಥ ಬಾಳಾ ಠಾಕ್ರೆ ಅವರು ಮಹಾತ್ಮ ಗಾಂಧೀಜಿ ಅವರೊಂದಿಗೆ ಯಾವಾಗಲೂ ಇದ್ದು ಅವರ ಸೇವೆ ಮಾಡುತ್ತಿದ್ದ ಇಬ್ಬರು ಯುವತಿಯರ ಬಗ್ಗೆ ಅಸಭ್ಯ ಟೀಕೆ ಮಾಡಿದ್ದರು. ಆದರೆ ಜನತೆ ಇದನ್ನೂ ಸಹ ಗಂಭೀರವಾಗಿ ಪರಿಗಣಿಸಲಿಲ್ಲ. ಕಾಂಗ್ರೆಸ್ ನಾಯಕ ಜಗದೀಶ್ ಟೈಟ್ಲರ್ ಕಿರಣ್ ಚೌಧುರಿಯೊಂದಿಗೆ ಹೊಂದಿದ್ದ ಸಂಪರ್ಕ ಅವರ ರಾಜಕೀಯ ಮಹತ್ವಾಕಾಂಕ್ಷೆಗೆ ಯಾವುದೇ ಅಡ್ಡಿಯುಂಟು ಮಾಡಲಿಲ್ಲ.

ಉತ್ತರಪ್ರದೇಶದ ಮುಖ್ಯಮಂತ್ರಿ ಕಲ್ಯಾಣ್‌ಸಿಂಗ್ ಅವರು ನಗರಪಾಲಿಕೆ ಸದಸ್ಯೆ ಕುಸುಮಾ ರಾಯ್ ಅವರೊಂದಿಗೆ ಹೊಂದಿರುವ ಸಂಬಂಧದ ಬಗ್ಗೆ ಗುಸುಗುಸು ಇದೆ.

ಕರ್ನಾಟಕದಲ್ಲಿಯೂ ಹಲವಾರು ರಾಜಕಾರಣಿಗಳ ವಿಲಾಸ ಜೀವನ ಆಗಾಗ ಪ್ರಸ್ತಾಪಕ್ಕೆ ಬಂದಿದೆಯಾದರೂ ಅದು ಜನತೆಯ ವಿಶೇಷ ಗಮನವನ್ನು ಸೆಳೆಯಲಿಲ್ಲ. ಗುಂಡೂರಾವ್, ರಾಮಕೃಷ್ಣ ಹೆಗಡೆ, ಎಸ್.ಎಂ.ಕೃಷ್ಣ ಜೆ.ಎಚ್. ಪಟೇಲ್, ಎಚ್. ವಿಶ್ವನಾಥ್ ಮುಂತಾದವರ ಕುರಿತಂತೆ ಗಾಸಿಪ್‌ಗಳು ಹರಡಿವೆಯಾದರೂ ಅದನ್ನು ದೃಢಪಡಿಸುವ ಯತ್ನವನ್ನು ಯಾರು ಮಾಡಲಿಲ್ಲ.

ಖ್ಯಾತ ನೃತ್ಯ ಕಲಾವಿದೆ ಪ್ರತಿಭಾ ಪ್ರಹ್ಲಾದ್ ಅವರು ಪತ್ರಿಕೆಯೊಂದಕ್ಕೆ ಸಂದರ್ಶನ ನೀಡುತ್ತಾ ತಾವು ಕಂಡ ಪುರುಷರಲ್ಲಿ ರಾಮಕೃಷ್ಣ ಹೆಗಡೆ ನಿಜವಾದ ಪುರುಷ. ಅವರ ಬಳಿ ದೇಶದ ಬಹಳಷ್ಟು ಪ್ರಸಿದ್ಧ ಸ್ತ್ರೀಯರು ತಮ್ಮ ನೋವುಗಳನ್ನು ಹಂಚಿಕೊಳ್ಳುತ್ತಾರೆ ಎಂದು ಹೇಳಿದಾಗ ಹೆಗಡೆ ಅವರ ಖಾಸಗಿ ಬದುಕಿನ ಕುರಿತಂತೆ ಕೊಂಚ ಚರ್ಚೆಗಳಾದವೇ ವಿನಾ ಆ ಬಗ್ಗೆ ಯಾರೂ ಇಣುಕು ನೋಟ ಹರಿಸಲಿಲ್ಲ.

ಟಿವಿ ವಾರ್ತಾ ವಾಚಕಿ ಮಿನು ಮತ್ತು ಖ್ಯಾತ ನೃತ್ಯ ಕಲಾವಿದೆ ಪ್ರತಿಮಾ ಬೇಡಿ ಅವರೊಂದಿಗೆ ಹೆಗಡೆ ಸಲುಗೆಯಿಂದ ಇದ್ದರು ಎಂಬ ಮಾತುಗಳೂ ಕೇಳಿಬರುತ್ತಿದ್ದವು. ಹೆಗಡೆ ಅವರು 1983ರಲ್ಲಿ ಮುಖ್ಯಮಂತ್ರಿಯಾಗಿ ಪ್ರಮಾಣ ವಚನ ಸ್ವೀಕರಿಸಿ ಮೊದಲ ಬಾರಿಗೆ ದೇವೇಗೌಡ, ಬೊಮ್ಮಾಯಿ ಅವರೊಂದಿಗೆ ದೆಹಲಿಗೆ ತೆರಳಿದಾಗ ದೆಹಲಿ ವಿಮಾನ ನಿಲ್ದಾಣದಲ್ಲಿ ನಾಲ್ಕಾರು ಹೆಂಗಸರು ಮಾಲೆಗಳನ್ನು ಹಿಡಿದು ಹೆಗಡೆ ಅವರಿಗೆ ಕಾದಿದ್ದರು. ನಂತರ ಅವರೊಂದಿಗೆ ಕಾರಿನಲ್ಲಿ ಹೋದ ಹೆಗಡೆ ಮೂರ್ನಾಲ್ಕು ದಿನ ಪತ್ತೆಯೇ ಇರಲಿಲ್ಲ. ದೇವೇಗೌಡ ಮತ್ತು ಬೊಮ್ಮಾಯಿ ಟ್ಯಾಕ್ಸಿ ಮಾಡಿಕೊಂಡು ಕರ್ನಾಟಕ ಭವನಕ್ಕೆ ತೆರಳಬೇಕಾಯಿತು ಎಂಬ ಕತೆಯೂ ಇದೆ.

ಹೇಮಾ ಚೌಧರಿ ಎಂಬ ಮಾಜಿ ನಟಿಯ ಹೆಸರು ಆಗಾಗ ಜನತಾ ದಳ ನಾಯಕರ ಹೆಸರಿನೊಂದಿಗೆ ತಳುಕು ಹಾಕಿಕೊಂಡಿದ್ದು, ಈಚೆಗೆ ನಿಧನರಾದ ಸಚಿವ ಎಂ.ಡಿ.ಜಯರಾಂ ಅವರು ಚೆಲ್ಲಾಟವಾಡಿದ್ದು, ಗುಂಡೂರಾವ್ ಮತ್ತು ಮಂಜು ಭಾರ್ಗವಿ ಸಂಬಂಧ ಯಾವುದೂ ಕರ್ನಾಟಕದ ಜನತೆಯ ಮೇಲೆ ಯಾವುದೇ ಪರಿಣಾಮ ಬೀರಲಿಲ್ಲ. 70ರ ದಶಕದಲ್ಲಿ ಮಂತ್ರಿ ಕಲ್ಲೂರ ತಮ್ಮ ಲೈಂಗಿಕ ಹಗರಣದಿಂದ ಅಧಿಕಾರ ಕಳೆದುಕೊಂಡರು. ರಾಜ್ಯದಲ್ಲಿ ಇಂಥ ಉದಾಹರಣೆ ಇದೊಂದೇ.

ಲೈಂಗಿಕ ವಿಚಾರದ ಬಗ್ಗೆ ಅತ್ಯಂತ ಮಡಿವಂತಿಕೆ ತೋರುವ ಭಾರತೀಯರು ರಾಜಕಾರಣಿಗಳ ಅನೈತಿಕ ಸಂಬಂಧಕ್ಕೆ ಯಾಕೆ ಮಹತ್ವ ಕೊಡುವುದಿಲ್ಲ ಎಂಬ ವಿಷಯ ನಿಜವಾಗಿ ಮನೋಶಾಸ್ತ್ರಜ್ಞರು ವಿಶ್ಲೇಷಿಸುವ ಪ್ರಶ್ನೆಯಾಗಿದೆ. ■



# ಇಲಿಯಾಯಣ

"ಅಯ್ಯೋ ರಾಮ ರಾಮಾ...... ಏನ್ರೀ ಏಳ್ರೀ ಲಗುನ ಏಳ್ರೀ".

ಏನ ಆತ ಇಂದರ ನನಗ ಸುಮ್ಮನ ಮಲಕೊಳ್ಳಿಕ್ಕೆ ಬಿಡತಿಯೊ ಇಲ್ಲೊ ನೀನು. ದಿನಾಲು ಬ್ಯಾಂಕನ್ಯಾಗ ಮೈಮೂರ ಕೆಲಸಾ ಮಾಡಿ ಮಾಡಿ ಸಾಕಾಗಿ ಎಂದ ರವಿವಾರ ಬರತದ ಅಂತ ದಾರಿ ಕಾಯ್ತಿರತೀನಿ. ನಾ ಎದ್ದ ಮ್ಯಾಲೆ ಏನ ಹೇಳೋದೊ ಹೇಳಮತಿ ಅಂದವರ ಮತ್ತ ಚಾದರ ಮುಸಕ ಹಾಕಿ ಮಲಕೊಂಡ ಬಿಟ್ಟರು.

ಆದರ ನಾ ಮಲಕೊಳ್ಳಿಕ್ಕೆ ಬಿಡಬೇಕಲ್ಲಾ? ನನ್ನ ಮದವ್ಯಾಗ ನಮ್ಮ ಅಪ್ಪ ಎಷ್ಟು ಪ್ರೀತಿಯಿಂದ ನೂರ ಅಲ್ಲಾ ಎರಡನೂರ ಅಲ್ಲಾ ಎಂಟಸಾವಿರ ರೊಕ್ಕಾ ಕೊಟ್ಟ ಎಂಥಾ ಛಂದ ಹಂತಾದ ಸೀರಿ ಕೊಡಸಿದ್ದಾ. ಹಾಳಾದ ಈ ಇಲಿಗೋಳು 'ಕಟಾಕಟಾ' ಕಡದ ಒಂದ ರಾತ್ರಿಯೊಳಗ ಆದ ಸೀರಿ ಚಿಂದಿ ಚಿಂದಿ ಮಾಡಿ ಬಿಟ್ಟಾವ ನೋಡ್ರಿ.

ಅಲ್ಲ ರಾಜಿ, ನಾ ನಿಂಗ ಯಾವಾಗೊ ಹೇಳಿದೆ. ಒಂದು ಅಲಮಾರಿ ತೊಗೋಳೋಣು ಅಂತ. ಆದರ ನೀನು ಏನ ಅಂದಿ? ಬ್ಯಾಡ್ರಿ, ನಮಗ ಮ್ಯಾಲಿಂದ ಮ್ಯಾಲ ಹಳ್ಳಿಹಳ್ಳಿಗೆನ ವರ್ಗ ಆಗೋದು. ಆದನ್ನ ಒಂದ ಹಳ್ಳಿಂದ ಮತ್ತೊಂದು ಹಳ್ಳಿಗೆ ತೊಗೊಂಡು ಹೋಗೋದು ಭಾಳ ತ್ರಾಸ ಆಗತದ. ಹಂಗಹಿಂಗ ಅಂತ ಏನೇನೋ ಮಾತಾಡಿ ಒಟ್ಟ ನನ್ನ ಬಾಯಿಂದ ಅಲಮಾರಿ ಅಂತ ಅನದಿದ್ದಂಗ ಮಾಡಿಬಿಟ್ಟಿ.

"ಹೌದರಿ ನನ್ನದ ತಪ್ಪ ಬಿಡ್ರಿ". ಅಬ್ಬಾ ಅಂತೂ ತನ್ನದ ತಪ್ಪು ಅಂತ ಇಷ್ಟ ಎಲ್ಲಾ ಹೇಳಿದ ಮ್ಯಾಲರೆ ಒಪ್ಪಿಗೊಂಡಲಲ್ಲಾ... ಗುನುಗುನು ಗುಟ್ಟುವಾಗ "ಏನಂದ್ರಿ?"

ಏನೂ ಇಲ್ಲ ಮಾರಾಳ್ತಿ

ಅಲ್ಲರಿ ಈಗ ಆದದ್ದ ಆಗಿ ಹೋಯ್ತು. ಮನ್ಯಾಗ ಇದ್ದ ಇಲಿಗೋಳ್ನ ಹೆಂಗ ಸಾಯಸೋದು ಅನ್ನೊದನ್ನರೆ ಹೇಳ್ರಿ

ತಡಿ ಸಟ್ಟನ ಒಂದು ವಿಚಾರ ಹೊಳದದ. ಈ ಸಲಾ ಬೆಳಗಾಂವಕ್ಕ ಹೋದಾಗ ಒಂದ ಇಲಿಬಲಿ ತಂದಬಿಡೋಣಂತ. ಅಂದವರನ ಆಗ ಪಾರಾಗಿ ಮತ್ತ ಮಲಕೊಂಡಬಿಟ್ಟರು.

ನಾವು ಬೆಳಗಾಂವಕ್ಕ ಹೋಗೋದರಾಗ ಒಂದಕ್ಕ ಎರಡು ಎರಡಕ್ಕ ನಾಲ್ಕು ಹಿಂಗ ಹನಮಂತನ ಬಾಲ ಬೆಳಕೊತ ಹೋದಂಗ ಮನಿ ತುಂಬ ಎಲ್ಲಾ ಇಲಿಗೋಳದ ಒಂದು ಸಾಮ್ರಾಜ್ಯ ಆಗಿಬಿಟ್ಟಿತ್ತು.

ಇಷ್ಟು ದಿವಸ ರಾತ್ರಿ ಆದಮ್ಯಾಲನ ಹೊರಗಬರೊ ಇಲಿಗೋಳು ಧೈರ್ಯದಿಂದ ಬೆಳಕ ಇದ್ದಾಗನೂ ಬರಲಿಕತ್ತುವು. ಬಂದಾಗ ಇಷ್ಟ ಅಯ್ಯೋವ್ವಾ ಅಂತ ಅಂದ ಸುಮ್ಮನಾಗಿಬಿಡತಿದ್ದೆ.

ನಮ್ಮ ಯಜಮಾನ್ರು ಬ್ಯಾಂಕಿಗೆ ಹೋದ ಮ್ಯಾಲೆ ವೇಳ್ಯಾನ ಹೋಗತಿದ್ದಿಲ್ಲಾ. ಆದರ ಈಗ ಹಂಗ ಅನ್ನೋಹಂಗಿಲ್ಲ. ಯಾಕಂದರ ಇಲಿಗೋಳು ಟುಣ್ ಟುಣ್ ಅಂತ ಜಿಕ್ಕೊತ ಜಂಪಿಂಗ್ ಮಾಡೋದು, ಒಂದಕ್ಕೊಂದ ರನ್ನಿಂಗ ರೇಸ್ ಕಾಂಪಿಟೇಷನ್ ಹಚ್ಚಿದಾಗ ಪಿ.ಟಿ. ಉಷಾನ ಜೊತೆ ಓಡಿದರಂತು ನಮ್ಮ ಮನ್ಯಾಗಿನ ಇಲಿಗೋಳ ಫಸ್ಟ್ ಅಲ್ಲ ರೆಕಾರ್ಡ್‌ನ ಬ್ರೆಕ್ ಮಾಡಿಬಿಡತಿದ್ದುವೊ ಏನೋ ಅನ್ನೊಹಂಗ ರನ್ನಿಂಗ ಮಾಡತಿದ್ದುವು. ದಿವಸಕ್ಕ ಒಂದೊಂದು ಹೊಸಾ ಹೊಸಾ ಆಟಾ ಕಲಿತಿದ್ದವು. ಇಂದ ಮಾಡಿತೋರಿಸಿದ್ದನ್ನ ಮಾರನೆ ದಿವಸ ಮಾಡತಿದ್ದಿಲ್ಲಾ. ಒಂದು ದಿವಸಂತು ವಿದ್ಯುತ್ತ ವಾಯರ ಮೇಲೆ ಇಲಿ ಮಾಡೋ ಸರ್ಕಸ್ ನೋಡಬೇಕರ್ರಿ. ಮನಿಗ್ವಾಡಿ ಏರಿ ಮಾಡಿನ ಸಜ್ಜಾ ಏರಿದ ಮ್ಯಾಲ ಅದಕ್ಕ ಇಷ್ಟ ಖುಷಿ ಆತಲ್ಲಾ, ತೇನಸಿಂಗ ಹಿಮಾಲಯ ಪರ್ವತ ಏರಿದಮ್ಯಾಲ ಆದಷ್ಟ ಆಗಿ ಅಲ್ಲೆ ಒಮ್ಮಿಂದೊಮ್ಮೆಲೇ ಮೈಲ್ದಗೆ ಹಾರ್ಟ್ ಅಟ್ಯಾಕ್ ಬಂದು ಮ್ಯಾಲಿನಿಂದ ಧೊಪ್ಪ ಅಂತ ಬಿದ್ದಾಗ, ನಾನ ಮತ್ತ ಅಂಥಾ ಉರಿ ಬಿಸಲ್ಯಾಗ ಬಿದ್ದದಲ್ಲಾ ಅಂತ ಫ್ಯಾನ್ ಹಚ್ಚಿ ನೀರ ಸ್ವಲ್ಪ ಗೊಜ್ಜಿದಾಗ ಯಮಲೋಕಕ್ಕೆ ಹೊಂಟಿರೋದು ಮತ್ತು ನನ್ನ ಕೃಪೆಯಿಂದ ವಾಸ್ತವ ಲೋಕಕ್ಕ ಬಂತು. ಆಗ

ಹುಟ್ಟಿದ ಕೂಸು ಪಿಳಿಪಿಳಿ ಕಣ್ಣ ಬಿಟ್ಟಾಂಗ ಬಿಟ್ಟು ಎಲ್ಲಾ ನೋಡಿ ನನ್ನ ಮನ್ಯಾಗ ನಾ ಇದ್ದೇನಿ ಅಂದದ್ದ ಮತ್ತು ಟಣ್ ಅಂತ ಜಕ್ಕೋತ ಓಡಿ ಹೋತ. ಅಂತು ನೀವು ಏನ ಅನ್ನರಿ ಮನ್ಯಾಗ ಇಲಿ ಇರೋದರಿಂದ ಬೇಜಾರ ಬರತಿದ್ದಿಲ್ಲಾ.

ನಮ್ಮ ಅಪ್ಪ ಕೊಟ್ಟ ಸೀರಿ ಕಡಿದದ್ದ ನೆನಪಾಗಿ ಮತ್ತ ಸಿಟ್ಟ ಬಂದ ಬೆಳಗಾಂವದಿಂದ ಇಲಿಬಲಿ ತಂದಬಿಟ್ಟಿವಿ. ಇಲಿಬಲಿ ತರಲಿಕ್ಕೆ ಹೋದಾಗ ಮಾಲಿಕ ಇದರೊಳಗ ಉಳ್ಳಾಗಡ್ಡಿ ಹಾಕಿದ ಭಜಿ, ಬಟಾಟಿ ಬೊಂಡಾ, ಕೊಬ್ಬರಿ ಹಾಕಿದ ಮೈಸೂರ ಭಜಿ ಹಿಂಗ ಕರದದ್ದ ಇಟ್ಟರ ಅದರ ವಾಸನೆಗೆ ಓಡೋಡಿ ಬಂದು ತಿನಲಿಕ್ಕೆ ಹೋದಾಗ ಕಟ್ಟ ಅಂತ ಬಾಗಲ ಬಂದ ಆಗತದ. ಆಮೇಲೆ ಹಿಂಗ ಸಾಯತಾವ ಅಂತ ಎಲ್ಲಾ ವಿವರಣೆ 'ಮಾಡಿ ಹೇಳೋಮುಂದ ನನ್ನ ಕಣ್ಣಾಗ ನೀರ ಬಂದಬಿಟ್ಟುವು. ನನ್ನ ಮನಿಯವ್ರು ಹೆದರಿ ಯಾಕ ಅಳ್ಳಿಕತ್ತಿ ಅಂದಾಗ, "ಅಲ್ಲರಿ ಇಷ್ಟ ದಿವಸ ನೀವು ಬ್ಯಾಂಕಿಗೆ ಹೋದಾಗ ಹೊಸಹೊಸಾ ಆಟಾ ತೋರಿಸಿ ನನ್ನ ಮನಸ್ಸಿಗೆ ಆನಂದ ಕೊಡತಿದ್ದುವಲ್ಲಾ ಅವು ಹಿಂಗಾಗಿ ಸಾಯತಾವಲ್ಲಾ ಅಂತ ಅಳು ಬಂತು" ಅಂತ ಹೇಳಿದೆ.

ಇಲಿಬಲಿ ತಂದ ಮ್ಯಾಲ "ನೋಡು ಅದರೊಳಗ ಕರದದ್ದ ಇಡಬೇಕಂತಿ. ತೆಕ್ಕಿ ತೆಕ್ಕಿ ಮಾಡಬೇಡಾ. ನಾನಂತು ಕರದದ್ದ ತಿನ್ನೋದಿಲ್ಲಾ. ನೀನು ದಪ್ಪ ಇದ್ದಿ. ಇಲಿಗೋಳ ಜೊತೆ ನೀನು ದಿನಾ ಕರದದ್ದು ತಿಂದು ಮತ್ತಷ್ಟು ದಪ್ಪ ಆಗಬೇಡಾ" ಅಂದರು. ಅದು ಒಂದು ರೀತಿ ಖರೆ ಅನಿಸಿ ನಾವಿಬ್ಬರೂ ತಿನದಿದ್ದರು ಅವುಗಳ ಸಂಬಂಧ ದಿನಾ ಹೊಸಾ ಹೊಸಾ ರುಚಿ ಮಾಡಿ ಇಟ್ಟರೆ ಇಲಿಬಲಿಯೊಳಗ ಹೋಗಿ ಮಾಡಿದ್ದೆಲ್ಲಾ ತಿಂದ ತಿಂದ ಕೊಬ್ಬಿಬಿಟ್ಟುವು. ಇಷ್ಟ ದಿವಸೆಲ್ಲಾ ಕಾಳು ಕಾಯಿಪಲ್ಲೆ ತಿಂದು ಸೊರಗಿ ಸಾಯಲಿಕ್ಕೆ ಆದದ್ದುವು, ಕರದದ್ದು ಅಂದರ ರೋಗಿಗಳಿಗೆ ಡಾಕ್ಟರ ಟಾನಿಕ್ ಕೊಟ್ಟಂಗ ಆಗಿ ದಿನಕ್ಕ ದಿನಕ್ಕ ಬೆಳವಣಿಗೆ ಆಕ್ಕೋತನ ಹೋತು. ಈಗ ಮತ್ತಷ್ಟು ತಮ್ಮ ಶಕ್ತಿ ಪ್ರದರ್ಶನ ಮಾಡಿ ತೋರಿಸತಿದ್ದವು.

ಇಷ್ಟು ದಿವಸ ಬರೀ ನನ್ನ ಸುತ್ತಮುತ್ತ ಅಷ್ಟು ಓಡಾಡಿಕೋತ ಇರೋ ಇಲಿಗಳು, ಈಗ ಅವಕ್ಕ ಪೂರ್ತಿ ಖಾತ್ರಿ ಆಗಿಬಿಟ್ಟಿತು. ನಮ್ಮ ಮಾಲಕತಿ ಭಾಳ ಭೋಲೋ ಇದ್ದಾಳ. ದಿನಾಲು ಇಷ್ಟ ರುಚಿರುಚಿ ತಿನಸೆಲ್ಲಾ ಮಾಡಿಹಾಕತಾಳಲ್ಲಾ ಅಂತ ನನ್ನ ಮ್ಯಾಲ ಪ್ರೀತಿ ಹೆಚ್ಚಾಗಿ ಒಂದ ದಿವಸ ಹಿಂದಿನಿಂದ ಗೌರಿಶಂಕರ ಶಿಖರ ಏರಿದಾಂಗ ನನ್ನ ತಲಿಮ್ಯಾಲ ಹತ್ತಿ ಜಿಗದಾಡಿ ಜೋಗದ ಜಲಪಾತದಂಗ ತಲಿಮ್ಯಾಲಿಂದ ಕೆಳಗೆ ಪಾದಕ್ಕ ಬರೋ ಅಷ್ಟೋತ್ತಿಗೆ ಸ್ಪ್ರಿಂಗ ಗೊಂಬಿ ಜಿಗದಂಗ ಮನ್ಯಾಗಿಂದ ಒಂದ ಹಾರಕಿಗೆ ಜಿಗಿದ ನಟ್ಟ ನಡಕ ರಸ್ತೆದಾಗ ಹೋಗಿ ನಿಂತಿದ್ದ.

ಹಳ್ಳಿಯೊಳಗ ನಮ್ಮ ಓಣಿಯೊಳಗಿನ ಮಂದಿಯೆಲ್ಲಾ ಬಂದು ಏನಾತ್ರಿ ಅಕ್ಕಾ ಅವರ ಅಂತ ಕೇಳಿದರು. ಎಷ್ಟೋತ್ತಿನ ಮ್ಯಾಲೆ ನಾನು ಇ.....ಲಿ...... ಇಲಿ ಅಂತ ತೊದಲಕೊತ ಹೇಳಿದೆ. ಆಗ ಎಲ್ಲಾರು ಘೊಳ್ಳಂತ ನಕ್ಕಬಿಟ್ಟರು. ಅದರಾಗ ಒಂದು ಹುಡಿಗಿ ಅಕ್ಕಾರ ನಮ್ಮ ಮನ್ಯಾಗರಿ ಇಲಿಗೋಳು, ಹಲ್ಲಿಗೋಳು, ಜೊಂಡಿಗೋಳು, ಕನಕಪ್ಪಡಿಗೋಳು, ಕುಂಬಾರ ಹುಳುಗೋಳು, ಚುಕ್ಕಾಣಿಗೋಳು, ಇಷ್ಟ ಯಾಕರಿ, ಗುದ್ದ ಮಾಡಿಕೊಂಡ ಹಾವುಗೋಳ ಮತ್ತ ಬದಕತಾವ ಅಂತ ಎಲ್ಲಾ ಹೇಳಿದಳು. ಆಗಲೆವ್ವಾ ಇಲಿ ಹಿಡಿಯವರ ಬಂದರ ನಮ್ಮ ಮನಿಗೆ ಕಳಸವಾ ಅಂತ ಹೇಳಿದೆ.

ಮಾರನೆ ದಿನಾ ನಮ್ಮ ಮನಿಗೆ ಬಂದು ಔಷಧ ಹಾಕಿದ ನಂತರ ಒಂದು ಇಲಿ ಸತ್ತಬಿದ್ದರ 1 ರೂ. ಅಂದಾಗ ಆಗ್ಲಿ ಅಂದೆ. ಮಧ್ಯಾಹ್ನ ಇಲಿಗೋಳ ಹೊರಗ ಬಂದ ಔಷಧ ತಿಂದ ಒಂದೊಂದ ಸಾಯಲಿಕ್ಕೆ ಸುರು ಆಯಿತು. ಒಂದು ಇಲಿ ಸಾಯೋ ಸಂಕಟಕ್ಕೆ ನೀರು ಕುಡಿಲಿಕ್ಕೆ ಹೋಗಿ ಅಲ್ಲೆ ತೊಟ್ಟಿಯೊಳಗನ ಸತ್ತ ಬಿದ್ದಿತ್ತು. ಎರಡ ದಿವಸಕ್ಕ ಒಮ್ಮೆ ಬರೋ ನಳಲ ಅಂತ ಸತ್ತಕೆಟ್ಟ ಮಾಡೋ ಕೆಲಸಾ ಬಿಟ್ಟ ನೀರ ತುಂಬಿದ್ದೆಲ್ಲಾ ಛಲ್ಲಿಬಿಟ್ಟೆ. ಅಮೇಲೆ ಎಲ್ಲೊ ದೂರದ ಬೋರದಿಂದ ನೀರ



ತಂದು ಸಂಜೆ ಅಷ್ಟೋತ್ತಿಗೆ 'ಜೀವಂತ ಹೆಣಾ ಬಿದ್ದಂಗ ಬಿದ್ದಿದ್ದೆ'.

ಇಲಿ ಹಿಡಿಯೋರ ಹೇಳಿದಂಗ ಅಲ್ಲಲ್ಲೇ ಮನಿತುಂಬ ಸತ್ತ ಬಿದ್ದಿದ್ದವು. ಸತ್ತ ಇಲಿಗಳನ್ನೆಲ್ಲಾ ಇರವಿ ಮುಕ್ಕರಿ, ಇಲಿ ಹೆಣಗಳನ್ನು ಜಕ್ಕೊಂಡ ಜಕ್ಕೊಂಡ ಹೊಂಟಿದ್ದವು. ಕನಿಷ್ಟ ಏನ ಇಲ್ಲಾ ಅಂದರು 'ಒಂದಿಪ್ಪತ್ತೈದು' ಇಲಿಗಳು ಸತ್ತಿದ್ದವು. ಅವರಿಗೆ ಇಪ್ಪತ್ತೈದು ರೂಪಾಯಿ ಕೊಡಬೇಕಲ್ಲಾ ಅಂದಕೊಂಡು ಸತ್ತ ಇಲಿ ಅಂತ ಆಕೆಗೆ ತೋರಿಸಲಿಕ್ಕೆ ಎರಡು ಇಟ್ಟು ಉಳದದ್ದವೆಲ್ಲಾ ಸೊಟ್ಟ ಮುಖಾಮಾಡಿ ಮೂಗಮುಚಗೊಂಡ ಬಾಯಿ

ಸುದೆಕ ಅದಾವರಿ ಅಂದಳು. ಇನ್ನು ಮುಂದ ಎಷ್ಟೆಷ್ಟ ನಾ ಕಾಣಲಾರದ ಕೇಳಲಾರದ ವಿಚಿತ್ರ ವಿಚಿತ್ರ ಪ್ರಾಣಿಗಳ ಹೆಸರ ಹೇಳತಿದ್ದರೋ ನಾ ಮಾತ್ರ ಸಾಕ ಸಾಕ ಅಂದೆ.

ಒಮ್ಮೆ ಸಂತಿಗೆ ಹೊಂಟಾಗ ಬಾಜುಕಿನ ಮನಿಯಕಿ ಕರದ "ಅಕ್ಕಾರ ಇಲ್ಲೆ ಇಲಿ ಹಿಡಿಯೋರ ಆದಾರ. ಅವರನ ಕರದಕ್ಯಾಸ ಮನ್ಯಾಗ ಔಷಧ ಹಾಕಿಸಿದರ ತಿಂದ ಮ್ಯಾಲ ಹೊಟ್ಯಾಗ ಸಂಕಟ ಆಗಾಕ ಸುರು ಆಕ್ಕೈತಿ. ಅವು ಗಾಳಿಗಂತ ಹೊರಗ ಬರತಾವ. ಮತ್ತ ನೀರ ಇದ್ದಲ್ಲೇ ಎಗರತಾವ. ನೀರ ಕುಡಿದುವಾ ಅಂದರ

ಮುಚಗೊಂಡ ಹೊರಗ ಛಲ್ಲಿ ಬಂದೆ. ಆಗ ಊಟಾ ಮಾಡಿದರೆ ಹೊಟ್ಟಿಯೊಳಗ ಇದ್ದದ್ದೆಲ್ಲಾ ವಾಂತಿ ಮಾಡಕೊಂಡೆ. ವಾಂತಿ ಮಾಡಿಕೊಂಡಿದ್ದ ನೆನಪಾಗಿ ಮತ್ತಮತ್ತ ವಾಂತಿ ಮಾಡಕೊಂಡೆ. ಎಂಟ ದಿವಸ ಊಟ ಇಲ್ಲದ ಮಲಗಿಕೊಂಡೆ. ನನ್ನ ಗಂಡ ಏನಾದರೂ ವಿಶೇಷ ಇದ್ದಿರಬೇಕಂತ ಅಂದಕೊಂಡ ಸುಮ್ಮನಾಗಿದ್ದರು. ಆದರ ನಾ ವಾಂತಿ ಮಾಡಕೊಂಡದ್ದ ಬ್ಯಾರೆದರ ಸಂಬಂಧನ. ಅದನ್ನ ಹೇಳಿದರ ಮತ್ತ ನನಗ ಬೈತಾರ ಅಂದಕೊಂಡ ಸುಮ್ಮನಾಗಿದ್ದೆ.

ಒಂದು ದಿವಸ ಲೇಡಿ ಡಾಕ್ಟರ ಕಡೆ ಚೆಕ್ ಮಾಡಿಸೋಣ ಅಂತ ಕರಕೊಂಡ ಹೋದರು. ನಾ ಇಪ್ಪತ್ತೈದು ರೂಪಾಯಿ ಉಳಿಸೋದಕ್ಕ ಶ್ಯಾಣೆತನಾ ಮಾಡಿದರ ಆ ಡಾಕ್ಟರಿಗೆ ಎರಡನೂರ ರೂಪಾಯಿ ಕೊಟ್ಟ ಬಂದಿವಿ.

ಅಂತು ಇಂತು ಈಗ ನೋಡರಿ ಮನ್ಯಾಗ ಒಂದ ಇಲಿ ಇಲ್ಲಾರಿ ಅಂತ ಮಾತಾಡಲಿಕತ್ತಿದ್ದಿವಿ. ಅಷ್ಟರಾಗನ ಒಂದು ಇಲಿ ರೆವ್‌ಅಂತ ಎರೋಪ್ಲೇನ ಬಂದಾಂಗ ಹೊರಗಿನಿಂದ ಮತ್ತ ಮನಿಗೆ ಬಂತು. ನಾ ಮನಸ್ಸನ್ಯಾಗ ಅಂದಕೊಂಡೆ. ಬಂದ ಇಲಿಯಿಂದ ಈಗ ಹೇಳಿದಷ್ಟು ಮತ್ತೊಂದು ಕಥಿನ ಆಗಬಾರದಂತ ಈಗ ಒಂದು ಬೆಕ್ಕಿನ ಸಾಕೆನಿ. ಅದಕ್ಕಂತ ಆರು ರೂಪಾಯಿ ಕೊಟ್ಟು ಅರ್ಧ ಲೀಟರ್ ಹಾಲು ತೊಗೊತಿದ್ದಿನಿ. ಏನ ಮಾಡೋದರಿ ಮತ್ತ ಮನ್ಯಾಗ ಒಂದು ಐವತ್ತು ಇಲಿ ಆಗಿ ಕಾಟಾ ಕೊಡೊಕ್ಕಿಂತಾ ಒಂದು ಬೆಕ್ಕಿನ ಸಾಕಿದರ ಸಾಕು ಅಂತ ಅಂದಕೊಂಡ ಅದರ ಜೊತಿನ ಮಾತನಾಡಕೋತ ಇದ್ದೀನಿ. ಒಟ್ಟ ನನ್ನ ಭಾಷಾ ಅದಕ್ಕ ತಿಳಿತದ ಅದರ ಭಾಷಾ ನನಗ ತಿಳಿತದ. ಇವರು ಬ್ಯಾಂಕಿಗೆ ಹೋದಾಗ ನನ್ನ ಪ್ರೀತಿಯ ಬೆಕ್ಕಿನ ಜೊತೆ ಟಾಯಮ ಪಾಸ ಮಾಡತೇನಿ.

■ ರಾಜಶ್ರೀ ವಿನಾಯಕ ಗುಮಾಸ್ತೆ

### ಚಿತ್ರಹಾರ

ಹಿಂದಿ ಚಿತ್ರಗಳ
ಹಾಡುಗಳ ಈ ಚಿತ್ರಹಾರ
ಹಾಡಿಗಿಂತಲೂ ಹೆಚ್ಚು
ನಡುವೆ ಜಾಹೀರಾತುಗಳ ಭಾರ

- ಮಹಾಲಿಂಗಯಾಳಗಿ

# ಸಮಾಜ ಸೇವಾನಿರತ ಅಧಿಕಾರಿ ಬಾಲಸುಬ್ಬಯ್ಯ

ಆಗೊಮ್ಮೆ ಈಗೊಮ್ಮೆ ಉಚಿತವಾಗಿ ಆ ಶಿಬಿರ ಈ ಶಿಬಿರ ಅಂತ ನಡೆಸಿ ಅಪಾರ ಪ್ರಚಾರ ಬಾಚುವ ನೂರಾರು ಮಂದಿ ಸಿಗಬಹುದು. ಆದರೆ, ಸುಮಾರು ಹತ್ತು ವರ್ಷಗಳಿಂದ ಸತತವಾಗಿ ತಿಂಗಳಿಗೊಮ್ಮೆ ಬಡವರಿಗಾಗಿ ಉಚಿತ ದಂತ ಹಾಗೂ ಕ್ಯಾನ್ಸರ್ ತಪಾಸಣಾ ಶಿಬಿರಗಳನ್ನು ನಡೆಸುತ್ತಾ ಎಲೆಮರೆಯ ಕಾಯಿಯಂತೆ ಸಮಾಜ ಸೇವೆಯಲ್ಲಿ ನಿರತರಾಗಿರುವ ಅಪರೂಪದ ವ್ಯಕ್ತಿ ಬಾಲಸುಬ್ಬಯ್ಯ.



ಸಮಾಜಸೇವಾ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕ ಹೊಂದಿ ಸದಾ ಕ್ರಿಯಾಶೀಲರಾಗಿರುವುದು ಈ ಅಧಿಕಾರಿಯ ಬದುಕಿನ ಭಾಗವೇ ಆಗಿದೆ.

ಬೆಂಗಳೂರಿನಲ್ಲಿರುವ ರಕ್ಷಣಾ ಇಲಾಖೆಯ ಎಲ್.ಆರ್.ಡಿ.ಇ. ನಲ್ಲಿ 'ಎ' ಗ್ರೇಡ್ ತಾಂತ್ರಿಕ ಅಧಿಕಾರಿಯಾಗಿ ಸೇವೆ ಸಲ್ಲಿಸುತ್ತಿರುವ ಬಿ. ಬಾಲ ಸುಬ್ಬಯ್ಯನವರದು ವಿಶಿಷ್ಟ ವ್ಯಕ್ತಿತ್ವ. ಸುಮಾರು ಹತ್ತು ಗಂಟೆಗಳ ಕಾಲ ಕಚೇರಿ ಕೆಲಸದಲ್ಲಿ ನಿರತರಾಗಿದ್ದರೂ, ಅನೇಕ ಸಮಾಜಸೇವಾ ಚಟು ವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಧಾರ್ಮಿಕ, ಶೈಕ್ಷಣಿಕ, ಸಾಂಸ್ಕೃತಿಕ ಹಾಗೂ ಆರೋಗ್ಯ ಕಾರ್ಯ ಕ್ರಮಗಳಲ್ಲೂ ಭಾಗವಹಿ ಸುತ್ತಾ ಬಂದಿದ್ದಾರೆ. ಪ್ರತಿಷ್ಠಿತ ಸಂಸ್ಥೆಗಳಾದ ಲಯನ್ಸ್ ಕ್ಲಬ್, ರೋಟರಿಕ್ಲಬ್, ಕ್ಯಾನ್ಸರ್ ಸೊಸೈಟಿ ಮುಂತಾದ ಹೆಸರಾಂತ ಸಂಸ್ಥೆಗಳ ನೆರವಿನಿಂದ ಹಲವಾರು ಶಿಬಿರ ಹಾಗೂ ಉಪನ್ಯಾಸಗಳನ್ನು ನೀಡಿದ್ದಾರೆ. ಪ್ರಮುಖವಾಗಿ ಮಕ್ಕಳು ಹಾಗೂ ಮಹಿಳೆಯರಿಗಾಗಿ ಮತ್ತು ಸಕ್ಕರೆ ಕಾಯಿಲೆ ಇರುವವರಿಗಾಗಿ ಶಿಬಿರಗಳನ್ನು ನಡೆಸುತ್ತಾ ಬಂದಿದ್ದಾರೆ. ಇಂತಹ ಶಿಬಿರಗಳನ್ನು ಕೇವಲ ನಗರ ಪ್ರದೇಶಗಳಲ್ಲಿ ಮಾತ್ರವಲ್ಲದೇ ಹಳ್ಳಿಗಳಲ್ಲೂ ನಡೆಸಿ ಗ್ರಾಮೀಣ ಜನರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

ಸರ್ಕಾರಿ ನೌಕರರೆಂದರೆ ಅದಕ್ಷತೆ ಹಾಗೂ ಸೋಮಾರಿತನಕ್ಕೆ ಹೆಸರಾಗಿರುವ ಇತ್ತೀಚಿನ ವರ್ಷಗಳಲ್ಲಿ, ಇದಕ್ಕೆ ಅಪವಾದ ಎಂಬಂತೆ ಗೋಚರಿಸುತ್ತಾರೆ ಬಾಲಸುಬ್ಬಯ್ಯ. ಅಪೂರ್ವ ವಾಕ್ ಚಾತುರ್ಯವುಳ್ಳ ಇವರು ಎಲ್ಲರ ಗಮನವನ್ನು ಸೆಳೆಯಬಲ್ಲ ವ್ಯಕ್ತಿತ್ವ ಹೊಂದಿದ್ದಾರೆ. ನಗರದ ಪ್ರತಿಷ್ಠಿತ ಸಂಸ್ಥೆಯಾದ 'ಮಲ್ಲೇಶ್ವರಂ ಆರ್ಯ ವೈಶ್ಯ ಸಂಘ'ದ ಅಧ್ಯಕ್ಷರಾಗಿ ಅದರ ಮೂಲಕ ಸಮಾಜಸೇವಾ ಕಾರ್ಯಗಳನ್ನು ಹಮ್ಮಿಕೊಂಡಿದ್ದಾರೆ. ಅಲ್ಲದೇ ಇನ್ನೂ ಅನೇಕ ಸಮಾಜಸೇವಾ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕ ಹೊಂದಿ ಸದಾ ಕ್ರಿಯಾಶೀಲರಾಗಿರುವುದು ಈ ಅಧಿಕಾರಿಯ ಬದುಕಿನ ಭಾಗವೇ ಆಗಿದೆ.

ಜುಲೈ 1, 1940ರಲ್ಲಿ ಆಂಧ್ರಪ್ರದೇಶದ ಮಾರ್ಕಾಪುರದಲ್ಲಿ ಜನಿಸಿದ ಬಾಲಸುಬ್ಬಯ್ಯನವರು ಹಲವಾರು ಪ್ರಶಸ್ತಿ ಪುರಸ್ಕಾರಗಳಿಗೆ ಪಾತ್ರರಾಗಿದ್ದಾರೆ. ಪ್ರಮುಖವಾಗಿ ಜನಸೇವಾ ಭಾರತಿ ಟ್ರಸ್ಟ್‌ನಿಂದ 'ಸಮಾಜಸೇವಾ ರತ್ನ', 'ಶಾರದ ಪ್ರಶಸ್ತಿ', ಕರ್ನಾಟಕ ರಾಜ್ಯ ಕ್ಷೇಮಾಭಿವೃದ್ಧಿ ಸಂಘದಿಂದ 'ಪ್ರಜಾಕಾರ್ಯ ಪ್ರವೀಣ' ಹಾಗೂ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದವರಿಗೆ ನವದೆಹಲಿಯ ಸಿಟಿಜನ್ಸ್ ಆಫ್ ಇಂಡಿಯಾ ಸಂಸ್ಥೆ ನೀಡುವ 'ಶ್ರೇಷ್ಠತಾ ಪ್ರಶಸ್ತಿ' ಯನ್ನು, ಹಾಗೂ 'ಇನಿಸ್ಟಿಟ್ಯೂಟ್ ಆಫ್ ಯೂನಿವರ್ಸಲ್ ಕಾನ್ಷಿಯಸ್‌ನೆಸ್' ಇವರಿಂದ 'ಬಿನ್ನವತ್ತಳೆ', 'SEVAK' ನಿಂದ 'ಪ್ರಶಂಸಾ ಪತ್ರ' ಹಾಗೂ ಎಲ್.ಆರ್.ಡಿ.ಇ. ಸಂಸ್ಥೆಯಿಂದ ಮೂರು ಬಾರಿ 'ಗಣರಾಜ್ಯೋತ್ಸವ' ಪ್ರಶಸ್ತಿ ಬಂದಿರುವುದು ಇವರ ಪ್ರತಿಭೆಗೆ ಸಂದ ಗೌರವ.

■ ಪಿ.ವಿ. ಕೃಪಾಕರ
ಹಿರಿಯ ಶ್ರೇಣಿಯ ಉಪನ್ಯಾಸಕರು, ರಾ.ವಿ. ತಾಂತ್ರಿಕ ಕಾಲೇಜು, ಮೈಸೂರು ರಸ್ತೆ, ಬೆಂ-59.

# ಏಡ್ಸ್‌ಗಿಂತ ನೂರು ಪಟ್ಟು ಭೀಕರ ರೋಗ!

# ಹೆಪಟೈಟಿಸ್ - ಬಿ

ಎಲ್ಲರೂ ಏಡ್ಸ್ ಬಗ್ಗೆ ಯೋಚಿಸುತ್ತಿದ್ದೇವೆಯೇ ಹೊರತು ಮೌನವಾಗಿ ಜಗತ್ತನ್ನು ವ್ಯಾಪಿಸಿರುವ ಹೆಪಟೈಟಿಸ್ 'ಬಿ' ಅಂದರೆ ಯಕೃತ್ತಿನ ಉರಿಯೂತದ ಬಗ್ಗೆ ತಲೆಕೆಡಿಸಿಕೊಳ್ಳುತ್ತಿಲ್ಲ. ಹೆಚ್.ಐ.ವಿ. ವೈರಸ್‌ಗಿಂತ ಹೆಚ್.ಬಿ.ವಿ.ವೈರಸ್ ನೂರು ಪಟ್ಟು ರೋಗದ ಸೋಂಕು ಹರಡುವ ಸಾಧ್ಯತೆ ಹೆಚ್ಚು. ವಿಶ್ವ ಆರೋಗ್ಯ ಸಂಸ್ಥೆಯ ವರದಿಯ ಪ್ರಕಾರ, ಪ್ರಪಂಚದಲ್ಲಿ ಇನ್ನೂರು ಕೋಟಿ ಜನರು ಈ ವೈರಸ್‌ನ ಸೋಂಕಿಗೊಳಗಾಗಿದ್ದಾರೆ.

ಇದೊಂದು ಯಕೃತ್ತಿಗೆ ಸಂಬಂಧಪಟ್ಟ ಕಾಯಿಲೆ. ಹೆಪಟೈಟಿಸ್-ಬಿ ವೈರಸ್‌ನಿಂದ ಸೋಂಕುಂಟಾಗಿ ಈ ಕಾಯಿಲೆ ಬರುತ್ತದೆ. ಇದು ಯಕೃತ್ತಿನ ಕೋಶಗಳನ್ನು ನಾಶಪಡಿಸಿ ಮುಂದೆ ಯಕೃತ್ತಿನ ಕ್ಯಾನ್ಸರ್‌ಗೆ ಕಾರಣವಾಗಬಹುದು. ಇದು ಪ್ರಪಂಚದಲ್ಲಿ ಮುಂಚೂಣಿಯಲ್ಲಿರುವ ಸೋಂಕು ಕೊಲೆಗಾರ ಎಂದು ವರದಿಯಾಗಿದೆ. ಹೆಪಟೈಟಿಸ್ ಬಿ ಯಿಂದ ನರಳುವ ಶೇ 90 ಭಾಗ ಜನರಲ್ಲಿ ರೋಗ ವಾಸಿಯಾಗಬಹುದು. ಶೇಕಡಾ ಹತ್ತು ಭಾಗ ಜನರು ಚಿಕ್ಕಂದಿನಲ್ಲೇ ಸೋಂಕಿಗೊಳಗಾದವರು ಜೀವನಪರ್ಯಂತ ಕ್ಯಾರಿಯರ್‌ಗಳಾಗಿ ಉಳಿದುಕೊಳ್ಳುತ್ತಾರೆ. ವೈರಸ್ ಒಂದು ಬಾರಿ ದೇಹದಲ್ಲಿ ಪ್ರವೇಶಿಸಿತೆಂದರೆ ಅದು ದೇಹದ ರೋಗನಿರೋಧಕ ಕೋಟೆಗೆ ಲಗ್ಗೆಯಿಡುತ್ತದೆ. ದುರದೃಷ್ಟದ ಸಂಗತಿಯೆಂದರೆ ಬಹಳಷ್ಟು ಜನರಿಗೆ ತಾವು ಹೆಪಟೈಟಿಸ್-ಬಿ ಸೋಂಕಿಗೊಳಗಾಗಿದ್ದೇವೆಂದು ತಿಳಿದಿರುವುದಿಲ್ಲ. ಪ್ರಾಥಮಿಕ ಹಂತದಲ್ಲಿ ಆಗಾಗ ಸುಸ್ತಾಗುತ್ತಿರುತ್ತದೆ. ಮೇಲಿಂದ ಮೇಲೆ ಕಾಮಾಲೆ ಕಾಣಿಸಿಕೊಳ್ಳುತ್ತದೆ. ಕೊನೆಗೆ ಯಕೃತ್ತಿನ ಸಿರೋಸಿಸ್ ಇಲ್ಲವೇ ಕ್ಯಾನ್ಸರ್ ಉಂಟಾಗಬಹುದು.

ಸೋಂಕು ತಗುಲಿದ ರೋಗಿಗಳನ್ನು ಮೂರು ವಿಧವಾಗಿ ವಿಂಗಡಿಸಬಹುದು. ಮೊದಲನೆಯದಾಗಿ ರೋಗಿಗೆ ಲಿವರ್ ಕ್ಯಾನ್ಸರ್ ಬಂದು ಸಾವು ಸಂಭವಿಸಬಹುದು. (ಇದು ಬಹಳ ಅಪರೂಪ) ಇನ್ನು ಕೆಲವರು ರೋಗ ನಿರೋಧಕ ಶಕ್ತಿ ಅಧಿಕವಿರುವವರು ಜೀವನ ಪರ್ಯಂತ ಯಾವುದೇ ತೊಂದರೆಯಿಲ್ಲದೇ ವೈರಸ್‌ನ್ನು ಹೊಡೆದೋಡಿಸಬಹುದು. ಮೂರನೆಯ ವಿಧದವರು ಕ್ಯಾರಿಯರ್ ಆಗಿ ಉಳಿದುಕೊಳ್ಳುವರು. ಸೋಂಕಿಗೊಳಗಾದವರಲ್ಲಿ ಶೇಕಡಾ 90 ಭಾಗ ಮಕ್ಕಳು ಹಾಗೂ ಶೇಕಡಾ ಐದು ಭಾಗ ವಯಸ್ಕರು ಜೀವನಪರ್ಯಂತ ಕ್ಯಾರಿಯರ್‌ಗಳಾಗಿ ಉಳಿದುಕೊಳ್ಳಬಹುದು. ಬಹಳಷ್ಟು ಸೋಂಕು ರೋಗಿಗಳು ಕ್ರಾನಿಕ್ ಪರ್ಸಿಸ್ಟೆಂಟ್ ಹೆಪಟೈಟಿಸ್‌ನಿಂದ ಬಳಲುತ್ತಿರುತ್ತಾರೆ. ಆದರೆ ಯಾವುದೇ ಬಾಹ್ಯ ಲಕ್ಷಣಗಳಿಲ್ಲದಿರುವುದರಿಂದ ರೋಗ ಪತ್ತೆಯಾಗುವುದಿಲ್ಲ. ವೈರಸ್‌ನ ಸೋಂಕಿಗೊಳಗಾದ ಗರ್ಭಿಣಿಯರು ಮಗುವಿಗೂ ವೈರಸನ್ನು ದಯಪಾಲಿಸುತ್ತಾರೆ. ಅವು ಬೆಳೆಯುತ್ತಾ ಬೇರೆ ಮಕ್ಕಳಿಗೂ ಹರಡುತ್ತದೆ. ಚರ್ಮರೋಗ, ಗಾಯಗಳಿದ್ದವರು, ಒಟ್ಟಿಗೆ ಆಟವಾಡುವುದರಿಂದಲೂ ಹರಡಬಹುದು.

> **ಏಡ್ಸ್ ಅಬ್ಬರದಲ್ಲಿ ಹೆಪಟೈಟಿಸ್-ಬಿ ರೋಗದ ಭೀಕರತೆ ಮರೆಮಾಚಿದಂತೆ ಕಾಣುತ್ತದೆ. ನಿಜವೆಂದರೆ ಈ ಕಾಯಿಲೆ ಏಡ್ಸ್‌ಗಿಂತ ನೂರು ಪಟ್ಟು ಅಪಾಯಕಾರಿ! ಈ ವೈರಸ್ ಒಂದು ಬಾರಿ ದೇಹವನ್ನು ಪ್ರವೇಶಿಸಿದೆಂದರೆ ತೀರಿತು. ರೋಗನಿರೋಧಕ ಕೋಟೆಗೆ ಲಗ್ಗೆ ಇಡುತ್ತದೆ. ತನ್ನ ಇರುವಿಕೆಯ ಸುಳಿವನ್ನೇ ಬಿಟ್ಟುಕೊಡದೆ ರೋಗಿಯನ್ನು ಲೀವರ್ ಕ್ಯಾನ್ಸರ್‌ಗೆ ಈಡುಮಾಡಿ ಗಹಗಹಿಸುತ್ತದೆ.**

ಎಲ್ಲರಿಗಿಂತ ಹೆಚ್ಚಾಗಿ ವೈದ್ಯಕೀಯ ಸಿಬ್ಬಂದಿಯವರು ಹಾಗೂ ವೈದ್ಯರು ಸೋಂಕಿಗೊಳಗಾಗುವುದರಲ್ಲಿ ಪ್ರಮುಖರು. ಅಂತರರಾಷ್ಟ್ರೀಯ ಪ್ರವಾಸಿಗಳಿಂದ ಈ ರೋಗ ಹರಡುವ ಸಾಧ್ಯತೆ ಹೆಚ್ಚು. ನಮ್ಮ ದೇಶದಲ್ಲಿ ಪ್ರತಿ ೨೦ ಜನರಲ್ಲಿ ಒಬ್ಬರು ಈ ವೈರಸ್‌ನ ಕ್ಯಾರಿಯರ್‌ಗಳಾಗಿರುತ್ತಾರೆ ಎಂದು ತಿಳಿದುಬಂದಿದೆ. ಪ್ರಪಂಚದಲ್ಲಿಯೇ ಭಾರತವು ಅತಿ ಹೆಚ್ಚಿನ ಕ್ಯಾರಿಯರ್‌ಗಳಿರುವ ದೇಶವಾಗಿದೆ.

'ಬಹಳಷ್ಟು ಜನರಿಗೆ ತಂಬಾಕು ಬಿಟ್ಟರೆ ಹೆಪಟೈಟಿಸ್-ಬಿ ವೈರಸ್ ಎರಡನೆಯ ಕಾರ್ಸಿನೋಜೆನ್ ಅಂದರೆ ಕ್ಯಾನ್ಸರ್ ಉತ್ಪತ್ತಿ ಮಾಡುವುದೆಂದು ತಿಳಿದಿಲ್ಲ. ಈಗಾಗಲೇ ೩೫ ಕೋಟಿ ಜನರು ಸೋಂಕನ್ನು ಹರಡುವ ಕ್ಯಾರಿಯರ್‌ಗಳಾಗಿರುವುದರಿಂದ ಇನ್ನು ಕೆಲವೇ ವರ್ಷಗಳಲ್ಲಿ ಪರಿಸ್ಥಿತಿ ಏನಾಗಬಹುದೆಂದು ಊಹಿಸುವುದು ಕಷ್ಟ.

## ವೈರಲ್ ಹೆಪಟೈಟಿಸ್

ಐದು ವಿಧವಾದ ವೈರಸ್‌ಗಳು ಯಕೃತ್ತಿನ ಮೇಲೆ ದಾಳಿ ಮಾಡಿ ಯಕೃತ್ತಿನ ಉರಿಯೂತವನ್ನು ಉಂಟುಮಾಡುತ್ತವೆ. ಕಾಮಾಲೆಯೇ ಇದರ ಪ್ರಮುಖ ಲಕ್ಷಣವಾಗಿರುತ್ತದೆ. ಈ ವೈರಸ್‌ಗಳು ಒಂದಕ್ಕಿಂತ ಒಂದು ಭಿನ್ನ. ದೇಹವನ್ನು ಪ್ರವೇಶಿಸುವ ರೀತಿಯೂ ಬೇರೆಯದಾಗಿರುತ್ತದೆ.

## ಹೆಪಟೈಟಿಸ್ ಎ

ಈ ವೈರಸ್ ಮಕ್ಕಳಲ್ಲಿ ಸಾಮಾನ್ಯವಾಗಿ ಕಾಮಾಲೆ ಉಂಟು ಮಾಡುತ್ತದೆ. ಮಳೆಗಾಲದಲ್ಲಿ ಹೆಚ್ಚಾಗಿ ಕಲುಷಿತ ನೀರು ಹಾಗೂ ಆಹಾರದಿಂದ ಉಂಟಾಗುತ್ತದೆ. ಮಕ್ಕಳಲ್ಲಿ ಸೋಂಕು ಸೌಮ್ಯ ರೂಪದಲ್ಲಿರುತ್ತದೆ. ಆದರೆ ವಯಸ್ಕರಲ್ಲಿ ಸೋಂಕು ಅನೇಕ ತೊಂದರೆಗಳಿಗೆ ಕಾರಣವಾಗಬಹುದು.

## ಹೆಪಟೈಟಿಸ್ ಬಿ

ಹೆಪಟೈಟಿಸ್ ಬಿ ಸೋಂಕಿಗೊಳಗಾಗಲು ನಾಲ್ಕು ಪ್ರಮುಖ ಕಾರಣಗಳೆಂದರೆ,

- ಇಂಜಕ್ಷನ್ನಿನ ಸೂಜಿಗಳನ್ನು ಸರಿಯಾಗಿ ಕುದಿಸದಿರುವುದರಿಂದ, ರಕ್ತ ಸಂಗ್ರಹಿಸುವ ಸಮಯದಲ್ಲಿ ಸೋಂಕಿಗೊಳಗಾಗುವುದು.



ದುರಂತವೆಂದರೆ ಯಾವುದೇ ರೋಗ ಲಕ್ಷಣವನ್ನು ತೋರದಿದ್ದ ಮಗು ವೈರಸ್‌ನ್ನು ಬೇರೆ ಆರೋಗ್ಯವಂತ ಮಗುವಿಗೆ ಹರಡಲು ಕಾರಣವಾಗಬಹುದು.

### ಲಕ್ಷಣಗಳು

ಮೊದಲು ಫ್ಲೂ ಜ್ವರದ ಲಕ್ಷಣಗಳು ಕಂಡು ಬರುತ್ತವೆ. ವಾಕರಿಕೆ ಬರುವುದು, ಹಸಿವಾಗ ದಿರುವುದು, ಆಯಾಸ, ಚಳಿ ಬರುವುದು, ಮೈಕೈನೋವು, ವಾಂತಿ ಉಂಟಾಗುತ್ತದೆ. ನಂತರ ಕಾಮಾಲೆ ಕಂಡು ಬರುತ್ತದೆ.

### ರಕ್ತ ಪರೀಕ್ಷೆ

ಸರಳವಾದ ರಕ್ತಪರೀಕ್ಷೆ ಆಸ್ಟ್ರೇಲಿಯಾ ಆಂಟಿಜೆನ್ ಟೆಸ್ಟ್‌ನಿಂದ (HBs Ag) ಹೆಪಟೈಟಿಸ್ ಬಿ ವೈರಸ್ ಸೋಂಕಿಗೊಳಗಾಗಿರುವರೋ ಇಲ್ಲವೋ ಎಂದು ದೃಢಪಡಿಸಬಹುದು.

### ಚಿಕಿತ್ಸೆ

ಸದ್ಯ ಹೆಪಟೈಟಿಸ್ ಬಿ ಗೆ ಪರಿಣಾಮಕಾರಿ ಚಿಕಿತ್ಸೆಯಿಲ್ಲ. ಇಂಟರ್‌ಫೆರಾನ್ ಕೊಡಬಹುದು. ಈ ಚಿಕಿತ್ಸೆಯಿಂದ ಅನೇಕ ದುಷ್ಪರಿಣಾಮಗಳು ಉಂಟಾಗುತ್ತವೆ. ಆದ್ದರಿಂದ ಸೋಂಕು ಉಂಟಾಗ ದಂತೆ ತಡೆಯುವುದೇ ಪ್ರಮುಖ ಚಿಕಿತ್ಸೆಯಾಗಿದೆ.

### ತಡೆಗಟ್ಟುವ ವಿಧಾನಗಳು

- ಬ್ಲಡ್ ಬ್ಯಾಂಕಿನಲ್ಲಿ ರಕ್ತದ ಸ್ಕ್ರೀನಿಂಗ್ ವಿಧಾನವನ್ನು ಅಳವಡಿಸುವುದು.
- ಉಪಯೋಗಿಸಿ ಬಿಸಾಡುವಂತಹ ಸಿರಿಂಜು ಹಾಗೂ ಸೂಜಿಗಳನ್ನು ಉಪಯೋಗಿಸುವುದು (Disposable Syringe)
- ವೈದ್ಯಕೀಯ ಸಿಬ್ಬಂದಿ ಗೌನ್, ಮಾಸ್ಕ್‌ಗಳನ್ನು ಧರಿಸುವುದು
- ವೈದ್ಯಕೀಯ ಹಾಗೂ ಶಸ್ತ್ರಚಿಕಿತ್ಸೆಯಲ್ಲಿ ಉಪಕರಣಗಳನ್ನು ಚೆನ್ನಾಗಿ ಕುದಿಸಿ ಉಪ

- ಅಕಸ್ಮಾತ್ತಾಗಿ ಸೋಂಕಿಗೊಳಗಾದ ರಕ್ತ ಹಾಗೂ ಇನ್ನಿತರ ದೇಹದ ದ್ರವಗಳ ಸಂಪರ್ಕ.
- ಸೋಂಕಿಗೊಳಗಾದ ತಾಯಿಯಿಂದ ಮಗುವಿಗೆ - ಜನನದ ಸಮಯದಲ್ಲಿ.
- ಸೋಂಕಿಗೊಳಗಾದವರೊಂದಿಗೆ ಲೈಂಗಿಕ ಸಂಪರ್ಕ ಹಲವರಿಗೆ ತಾವು ಸೋಂಕಿಗೊಳಗಾಗಿದ್ದೇವೆಂಬ ಕಲ್ಪನೆ ಇರುವುದಿಲ್ಲ. ಅಂತಹವರು ಬಹುಬೇಗನೇ ಒಬ್ಬರಿಂದೊಬ್ಬರಿಗೆ ಹರಡುತ್ತಾರೆ.

ಇನ್ನು ಹೆಚ್ಚಿನ ಸೋಂಕಿಗೆ ಗುರಿಯಾಗುವವರು ಯಾರೆಂದು ನೋಡೋಣ :

- ಎಲ್ಲ ವೈದ್ಯಕೀಯ ಸಿಬ್ಬಂದಿ ಅಂದರೆ ವೈದ್ಯರು, ದಾದಿಗಳು, ಪ್ರಯೋಗಾಲಯಗಳಲ್ಲಿ ಕೆಲಸ ಮಾಡುವವರು, ರಕ್ತನಿಧಿಗಳಲ್ಲಿ ಕೆಲಸ ಮಾಡುವವರು, ಡಯಾಲಿಸಿಸ್ ಯೂನಿಟ್ ಹಾಗೂ ಕ್ಯಾನ್ಸರ್ ವಿಭಾಗಗಳಲ್ಲಿ ಕೆಲಸ ಮಾಡುವವರು, ಇವರೆಲ್ಲರೂ ರೋಗಿಗಳ ರಕ್ತದ ಹಾಗೂ ಇನ್ನಿತರ ದೇಹದ ದ್ರವಗಳ ಸಂಪರ್ಕದಲ್ಲಿ ಸದಾ ಇರುವಂತಹವರು.
- ಥೆಲಾಸ್ಮಿಕ್ಸ್, ಹಿಮೋಫಿಲಿಯಾ ರೋಗಿಗಳು ಹಾಗೂ ಡಯಾಲಿಸಿಸ್‌ಗೆ ಒಳಗಾಗುತ್ತಿರುವ ರೋಗಿಗಳು.
- ಒಬ್ಬರಿಗಿಂತ ಹೆಚ್ಚು ಜನರ ಜೊತೆಗೆ ಲೈಂಗಿಕ ಸಂಪರ್ಕ ಹೊಂದಿರುವವರು, ಸಲಿಂಗ ಕಾಮಿಗಳು, ವೇಶ್ಯೆಯರು, ಮಾದಕ ವ್ಯಸನಿಗಳು, ರಕ್ತನಾಳದ ಮೂಲಕ ಇಂಜಕ್ಷನ್ ತೆಗೆದುಕೊಳ್ಳುವವರು.
- ಹೆಪಟೈಟಿಸ್ ಬಿ ವೈರಸ್‌ನ ಸೋಂಕಿಗೊಳಗಾದ ತಾಯಿಯಿಂದ ಜನಿಸಿದ ಮಕ್ಕಳು, ಹೆಪಟೈಟಿಸ್ ಬಿ ವೈರಸ್‌ನ ಕ್ಯಾರಿಯರ್ ಇರುವ ಮನೆಯವರು.

ಮಕ್ಕಳು ಎರಡು ರೀತಿಯಲ್ಲಿ ಸೋಂಕಿಗೊಳಗಾಗುತ್ತಾರೆ. ಮೊದಲನೆಯದಾಗಿ ಇದು ಸೋಂಕಿಗೊಳಗಾದ ತಾಯಿಯಿಂದ ಜನನದ ಸಮಯದಲ್ಲಿ ಮಗುವಿಗೆ ಬರುತ್ತದೆ. ಮಕ್ಕಳಿಂದ ಮಕ್ಕಳಿಗೆ ಹರಡುವುದು ಇನ್ನೊಂದು ಬಗೆ. ಆಟವಾಡುವಾಗ ಬಿದ್ದು ಗಾಯವಾಗುವುದರಿಂದ ಅಲ್ಲಲ್ಲಿ ತರಚುವುದರಿಂದ, ಸೋಂಕಿಗೊಳಗಾದ ಮಗುವಿನ ಸಂಪರ್ಕದಿಂದ ಗಾಯಗಳ ಮೂಲಕ ವೈರಸ್ ದೇಹದಲ್ಲಿ ಪ್ರವೇಶಿಸಬಹುದು.

ಈ ವೈರಸ್ ದೇಹವನ್ನು ಪ್ರವೇಶಿಸಲು ಕಡಿಮೆಯೆಂದರೆ 0.00004 ಮಿಲಿ ಕಲುಷಿತ ರಕ್ತವೇ ಸಾಕು.

ಸಿರಿಂಜುಗಳು, ಸೂಜಿಗಳು ಮತ್ತು ಇನ್ನಿತರ ಉಪಕರಣಗಳು ಕ್ಯಾರಿಯರ್‌ಗಳ ರಕ್ತದಿಂದ ಕಲುಷಿತವಾದಾಗ ಸೋಂಕನ್ನು ಬೇರೆಯವರಿಗೆ ಹರಡಲು ಕಾರಣವಾಗುತ್ತದೆ. ಸೋಂಕಿಗೊಳಗಾದ ಸೂಜಿಗಳನ್ನು ಕಿವಿ ಚುಚ್ಚುವ ಸಮಯದಲ್ಲಿ ಹಾಗೂ ಹಚ್ಚೆ ಹಾಕಿಸಿಕೊಳ್ಳುವಾಗ ಉಪಯೋಗಿಸುವುದರಿಂದಲೂ ಸೋಂಕುಂಟಾಗುತ್ತದೆ. ಒಬ್ಬರ ಕತ್ತರಿ, ರೇಜರ್‌ಗಳನ್ನು ಇನ್ನೊಬ್ಬರು ಉಪಯೋಗಿಸುವುದರಿಂದಲೂ ಹರಡುತ್ತದೆ.

ಸೋಂಕಿಗೊಳಗಾದ ಬಹಳಷ್ಟು ಮಕ್ಕಳಲ್ಲಿ ಯಾವುದೇ ಲಕ್ಷಣಗಳು ಕಂಡುಬರುವುದಿಲ್ಲ.

| ವಿಶ್ವ ಆರೋಗ್ಯ ಸಂಸ್ಥೆಯ ಪ್ರಕಾರ | ಏಡ್ಸ್ | ಹೆಪಟೈಟಿಸ್ ಬಿ |
|---|---|---|
| 1. ಸೋಂಕಿಗೊಳಗಾದ ಜನರು (ಪ್ರಪಂಚದಲ್ಲಿ) | 18.5 ಮಿಲಿಯನ್ | 2000 ಮಿಲಿಯನ್ |
| 2. ರೋಗಿಗಳು | 4.5 ಮಿಲಿಯನ್ | 350 ಮಿಲಿಯನ್ |
| 3. ಸೋಂಕುಂಟಾಗಬೇಕಾದರೆ ಬೇಕಾದ ಕನಿಷ್ಠ ಪ್ರಮಾಣದ ರಕ್ತ | 0. 1ಮಿ. ಲಿ. | 0.00004 ಮಿಲಿಯನ್ |
| 4. ಆಕಸ್ಮಿಕವಾಗಿ ಸೋಂಕಿಗೊಳಗಾಗುವ ಸಾಧ್ಯತೆ | 0.5 | 7-30 % |

ಯೋಗಿಸುವುದು (Sterlisation).

- ಸುರಕ್ಷಿತ ಲೈಂಗಿಕ ಸಂಪರ್ಕ (ಕಾಂಡೂಮ್ ಬಳಕೆ)
- ವ್ಯಾಕ್ಸಿನ್ ತೆಗೆದುಕೊಳ್ಳುವುದು.

ವ್ಯಾಕ್ಸಿನ್ ಮಾತ್ರವೇ ಸೋಂಕನ್ನು ಬರದಂತೆ ತಡೆಯುವ ಸಾಧನವಾಗಿದೆ. ಹೆಪಟೈಟಿಸ್ ಬಿ ವ್ಯಾಕ್ಸಿನ್ ಮೂರು ಡೋಸ್‌ಗಳನ್ನೊಳಗೊಂಡಿರುತ್ತದೆ. ಮೂರು ಡೋಸ್‌ಗಳನ್ನು 6 ತಿಂಗಳಲ್ಲಿ ನಿಗದಿಪಡಿಸಿದ ಸಮಯದಲ್ಲಿ ತೆಗೆದುಕೊಳ್ಳಬೇಕು. ವ್ಯಾಕ್ಸಿನ್ ದೇಹವನ್ನು ಪ್ರವೇಶಿಸಿದ ನಂತರ ಶರೀರವು ಹೆಪಟೈಟಿಸ್ 'ಬಿ' ಸೋಂಕುಂಟಾಗದಂತೆ ಆಂಟಿಬಾಡಿಗಳನ್ನು ಉತ್ಪತ್ತಿ ಮಾಡಲಾರಂಭಿಸುತ್ತದೆ. ಕಾಯಿಲೆ ಬಂದ ಮೇಲೆ ಯೋಚಿಸುವುದಕ್ಕಿಂತ ಬಾರದಂತೆ ನೋಡಿಕೊಳ್ಳುವುದೇ ಒಳ್ಳೆಯದು. ಪ್ರಬಲ ರೋಗ ನಿರೋಧಕ ವ್ಯವಸ್ಥೆಯೇ ಹೆಪಟೈಟಿಸ್ ಬಿ ವಿರುದ್ಧ ರಕ್ಷಣೆಯನ್ನು ಒದಗಿಸಬಲ್ಲದು.

ತಾಯಿಯು ಹೆಪಟೈಟಿಸ್ ಬಿ ಯ ಕ್ಯಾರಿಯರ್ ಎಂದು ಗರ್ಭಿಣಿಯಾಗಿರುವಾಗಲೇ ದೃಢಪಟ್ಟಿದ್ದರೆ ಮೊದಲನೆಯ ಡೋಸ್‌ನ್ನು ಮಗುವಿಗೆ ಜನನದ ಸಮಯದಲ್ಲಿಯೇ ಕೊಡಿಸಬೇಕು. ಎರಡನೆಯದನ್ನು ಒಂದು ತಿಂಗಳ ನಂತರ ಕೊಡಿಸಬೇಕು. ಮೂರನೆಯದನ್ನು ಮೊದಲನೆಯ ಡೋಸ್ ಕೊಟ್ಟ 6 ತಿಂಗಳಿಗೆ ಕೊಡಿಸಬೇಕು.

ಹೆಪಟೈಟಿಸ್ ಬಿ ಇಮ್ಯುನೋಗ್ಲೋಬುಲಿನ್‌ನ್ನು ಹೆಪಟೈಟಿಸ್ ಬಿ ವ್ಯಾಕ್ಸಿನ್‌ನ ಜೊತೆಗೆ ಮಗು ಜನಿಸಿದ 12 ಗಂಟೆಯೊಳಗೆ ಕೊಡಿಸಬೇಕು. ಒಂದು ವೇಳೆ ಇಮ್ಯುನೋಗ್ಲೋಬುಲಿನ್ ಇಲ್ಲದಿದ್ದರೂ ಹೆಪಟೈಟಿಸ್ ಬಿ ವ್ಯಾಕ್ಸಿನ್ ಒಂದೇ ಸೋಂಕು ಉಂಟಾಗುವುದನ್ನು ತಡೆಯುತ್ತದಲ್ಲದೇ ಶೇ 95 ಭಾಗ ಪರಿಣಾಮಕಾರಿಯಾಗಿರುತ್ತದೆ.

ತಾಯಿಯು ಹೆಪಟೈಟಿಸ್ ಬಿ ವೈರಸ್‌ನ ಕ್ಯಾರಿಯರ್ ಆಗಿರದಿದ್ದರೂ ಮಗುವಿಗೆ ಪೋಲಿಯೋ, ಡಿ.ಪಿ.ಟಿ ವಿರುದ್ಧ ಲಸಿಕೆ ಹಾಕಿಸುವ ಸಮಯದಲ್ಲೇ ಹೆಪಟೈಟಿಸ್ ಬಿ ವ್ಯಾಕ್ಸಿನನ್ನು ಹಾಕಿಸಬೇಕು.

ಇಂಡಿಯನ್ ಅಕಾಡೆಮಿ ಆಫ್ ಪಿಡಿಯಾಟ್ರಿಕ್ಸ್ ಹೆಪಟೈಟಿಸ್ ಬಿ ವ್ಯಾಕ್ಸಿನನ್ನು ಜನನದ ಸಮಯದಲ್ಲೇ ಹಾಕಿಸಬೇಕೆಂದು ಹೇಳುತ್ತದೆ. ತಾಯಿ ಕ್ಯಾರಿಯರ್ ಆಗಿರಲಿ ಬಿಡಲಿ ವ್ಯಾಕ್ಸಿನ್ ಹಾಕಿಸಬೇಕು. ಏಕೆಂದರೆ ಗರ್ಭಿಣಿಯಾಗಿರುವಾಗ ಯಾರೂ ಹೆಪಟೈಟಿಸ್ ಬಿ ಯ ಇರುವಿಕೆಯ ಬಗ್ಗೆ ರಕ್ತಪರೀಕ್ಷೆ ಮಾಡಿಸಿರುವುದಿಲ್ಲ. ಇದಲ್ಲದೇ ಹೆಪಟೈಟಿಸ್ ಬಿ ಯ ಸೋಂಕಿಗೊಳಗಾದ ಮಕ್ಕಳು ಯಾವುದೇ ಬಾಹ್ಯ ಲಕ್ಷಣಗಳನ್ನು ಹೊಂದಿರುವುದಿಲ್ಲ. ಮುಂದೆ ಅವರು ಕ್ಯಾರಿಯರ್‌ಗಳಾಗುವ ಸಾಧ್ಯತೆ ಹೆಚ್ಚಾಗಿರುತ್ತದೆ. ಮಗುವಿಗೆ ವೈದ್ಯರ ಸಲಹೆಯಂತೆ ವ್ಯಾಕ್ಸಿನನ್ನು ಹಾಕಿಸಬೇಕು.

### ಹೆಪಟೈಟಿಸ್ ಸಿ

ಇದು ಬಹಳ ಭಯಂಕರವಾದುದು. ಹೆಪಟೈಟಿಸ್ ಬಿ ವೈರಸ್‌ನಿಂದ ರೋಗ ನಿರೋಧಕ ಶಕ್ತಿ ಶಿಥಿಲಗೊಂಡಿರುವ ಶರೀರವು ಹೆಪಟೈಟಿಸ್ ಸಿ ವೈರಸನ್ನು ಆಕರ್ಷಿಸುತ್ತದೆ. ಇದು ರಕ್ತ ಸ್ವೀಕರಿಸಿದ ನಂತರ (Blood transfusion) ಶೇ 90 ಭಾಗ ಜನರಲ್ಲಿ ಕಾಣಿಸಿಕೊಳ್ಳುತ್ತದೆ. 1989ರಲ್ಲಿ ಅಟ್ಲಾಂಟದ ರೋಗ ನಿಯಂತ್ರಣ ಕೇಂದ್ರದಲ್ಲಿ ಹೆಪಾಟೈಟಿಸ್ ಸಿಯ ಇರುವಿಕೆಯ ಬಗ್ಗೆ ಕಂಡು ಹಿಡಿಯಲಾಯಿತು.

ಸ್ಕ್ರೀನಿಂಗ್ ಪ್ರಾರಂಭವಾಗುವ ಮುಂಚೆ, ಕಲುಷಿತ ರಕ್ತದಾನದಿಂದ ಶೇ.8 ರಿಂದ 10 ಭಾಗ ಹೆಪಟೈಟಿಸ್ ಸಿ ಹರಡಿತ್ತು. ಆದರೆ ಈಗ ಶೇ. 0.5 ಗೆ ಇಳಿದಿದೆ. ರಕ್ತನಾಳದ ಮೂಲಕ ತೆಗೆದುಕೊಳ್ಳುವ ಇಂಜಕ್ಷನ್‌ನಿಂದ ಕತ್ತರಿ, ಉಗುರು ಕತ್ತರಿಸುವ ಸಾಧನದಿಂದ, ರೇಜರ್‌ನಿಂದ ಒಬ್ಬರಿಂದೊಬ್ಬರಿಗೆ ಹರಡುತ್ತದೆ.

ಹೆಪಟೈಟಿಸ್ ಸಿ ಲಕ್ಷಣಗಳು ಬೇರೆಯವುಗಳಿಗಿಂತ ಭಿನ್ನವಾಗಿರುತ್ತದೆ. ತಲೆ ಸುತ್ತುವುದು, ನವೆಯಾಗುವುದು ಹಾಗೂ ಕೀಲುಗಳಲ್ಲಿ ನೋವಿರುತ್ತದೆ. ಹೆಪಟೈಟಿಸ್ ಸಿ ಸೋಂಕಿಗೊಳಗಾದವರಲ್ಲಿ ಶೇ 80 ರಿಂದ 90 ಜನರು ಕ್ರಾನಿಕ್ ಹೆಪಾಟೈಟಿಸ್‌ಗೆ ಒಳಗಾಗುವುದಲ್ಲದೇ ಕ್ಯಾರಿಯರ್‌ಗಳಾಗುತ್ತಾರೆ. ಶೇ. 30 ರಿಂದ 40 ಭಾಗ ಜನರು ಸಿರೋಸಿಸ್‌ಗೆ ಗುರಿಯಾಗುತ್ತಾರೆ. ಹೆಪಟೈಟಿಸ್ ಸಿ ಸೋಂಕಿಗೊಳಗಾಗುವುದರಿಂದ ರೋಗ ಪತ್ತೆಯ ಸಮಯ ಬಹಳ ವರ್ಷ ಹಿಡಿಯುತ್ತದೆ. ಸಿರೋಸಿಸ್ ಹೆಚ್ಚಾದಂತೆಲ್ಲ ಉದರ ಹಾಗೂ ಕಾಲುಗಳಲ್ಲಿ ನೀರು ತುಂಬಿಕೊಂಡು ದೇಹದೊಳಗೆ ರಕ್ತಸ್ರಾವ ಆರಂಭವಾಗಿ ನೆನಪಿನ ಶಕ್ತಿ ಕ್ಷೀಣಿಸುತ್ತದೆ.

ಕೆಲವರು ಹೆಪಟೈಟಿಸ್ ಸಿ ಸೋಂಕಿಗೊಳಗಾಗಿದ್ದರೂ ಯಾವುದೇ ತೊಂದರೆಯಿಲ್ಲದೇ ಇರುತ್ತಾರೆ. ಬಹಳಷ್ಟು ಜನರಿಗೆ ಯಕೃತ್ತಿನ ಕಾರ್ಯದಲ್ಲಿ ಏರುಪೇರಾಗುವವರೆಗೂ ಹೆಪಟೈಟಿಸ್ ಸಿ ಇರುವಿಕೆಯ ಬಗ್ಗೆ ತಿಳಿದಿರುವುದಿಲ್ಲ.

ಯಕೃತ್ತು (ಲಿವರ್) ನಮ್ಮ ದೇಹದ ಪ್ರಮುಖ ಅಂಗವಾಗಿದೆ. ಜೀರ್ಣಕ್ರಿಯೆಗೆ ಸಹಾಯವಾಗುವ ಎಲ್ಲದಕ್ಕೂ ನಾವು ಇದನ್ನೇ ಅವಲಂಬಿಸಿರುವೆವು. ವಿಷಗಳಿಂದ (toxins) ರಕ್ತಶುದ್ಧಿ ಮಾಡುವುದು, ಸಕ್ಕರೆಯನ್ನು ಕಾಯ್ದಿಡುವುದು, ಕೊಲೆಸ್ಟೆರಾಲ್

**ನೆನಪು**

'ನಾನು  
ನಾನೇ'  
ಎಂದರಿವಾಗುವುದು  
ನನ್ನ ಹೆಂಡತಿ  
ಪಕ್ಕದಲ್ಲಿದ್ದಾಗ ಮಾತ್ರ!

- ಪ್ರಕಾಶ್ ರಂಜೇರೆ

**ಕಾಯಕ**

ಇಲ್ಲದೇ ಹೋದರೆ  
ಕಾಯಕದ  
ಹಾದಿ  
ಬದುಕೊಂದು  
ಮೂಲವ್ಯಾಧಿ!

- ಶಿ.ಕಾ. ಬಡಿಗೇರ

**ಅಂತರ**

ನನ್ನವಳಿಗೆ  
ಮುಟ್ಟಿದರೆ  
ಮೈಯಲ್ಲಿ  
ಶಾಕು  
ಮುತ್ತಿಟ್ಟರೆ  
ಮೈಸೂರು  
ಪಾಕು !

- ಮಧು ಎಸ್. ಹಿರೇಮನಿ

**ಜನ್ಮದ ಅನುಬಂಧ**

ನಮ್ಮ ಬಂಧನ  
ಜನ್ಮ ಜನ್ಮಾಂತರದ್ದು  
ಎಂದವಳಿಗೆ  
ಮದುವೆಯಾಗೋಣವೆ  
ಎಂದರೆ  
ಮುಂದಿನ ಜನ್ಮದಲ್ಲಿ  
ಎನ್ನಬೇಕೆ?

-ಸುರೇಶ ವಗ್ಗಾ

ಸುಸ್ಥಿತಿಯಲ್ಲಿರುವಂತೆ ನೋಡಿಕೊಳ್ಳುವುದು, ಬೈಲ್ ಉತ್ಪತ್ತಿ ಮಾಡುವುದು ಆಹಾರದಲ್ಲಿನ ಪ್ರೋಟಿನ್‌ಗಳನ್ನು, ವಿಟಮಿನ್‌ಗಳನ್ನು ಹೀರಿ ಕೊಳ್ಳುವುದು-ಈ ಎಲ್ಲ ಕೆಲಸಗಳನ್ನು ಮಾಡುವ ಯಕೃತ್ ಸಂಕುಚಿತಗೊಂಡು ನಿಧಾನವಾಗಿ ತನ್ನ ಕಾರ್ಯವನ್ನು ಸ್ಥಗಿತಗೊಳಿಸುವುದು. ಜನರು ಯಕೃತ್ತಿಲ್ಲದೇ ಬದುಕುವುದು ಸಾಧ್ಯವಿಲ್ಲ.

ಸಾಮಾನ್ಯವಾಗಿ ಹೆಪಟೈಟಿಸ್ ಸಿ ಅಪಘಾತದ ಮೂಲಕ ತಿಳಿಯಲ್ಪಡುತ್ತದೆ. ಇಲ್ಲವೇ ರಕ್ತಪರೀಕ್ಷೆ ಮಾಡಿಸುವಾಗ (LFT) ಆರೋಗ್ಯವಂತ ಮನುಷ್ಯನಲ್ಲಿ ಏರಿರುವ ಯಕೃತ್ತಿನ ಎಂಜೈಮ್‌ಗಳು ಯಕೃತ್ತಿನ ಕಾಯಿಲೆಗೆ ಕೆಂಪು ಬಾವುಟ ತೋರಿಸ ಬಹುದು. ರಕ್ತದ ಸ್ಕ್ರೀನಿಂಗ್ ಸಮಯದಲ್ಲಿ ತಿಳಿಯಬಹುದು. ರಕ್ತ ಪರೀಕ್ಷೆಯಿಂದ ದೃಢಪಟ್ಟ ಮೇಲೆ ತಜ್ಞ ವೈದ್ಯರಿಂದ ಪರೀಕ್ಷೆ ಮಾಡಿಸಿಕೊಳ್ಳು ವುದು ಒಳ್ಳೆಯದು. ಏಕೆಂದರೆ ಕೆಲವೊಮ್ಮೆ ಸುಳ್ಳು ಫಲಿತಾಂಶವೂ ಬರುವುದುಂಟು.

**ಚಿಕಿತ್ಸೆ**

ಎರಡು ತರಹದ ಚಿಕಿತ್ಸೆ ಲಭ್ಯವಿದೆ. ಇಂಟರ್ ಫೆರಾನ್ ಇಂಜಕ್ಷನ್ ಹಾಗು ಯಕೃತ್ತಿನ ಕಸಿ ಮಾಡುವಿಕೆ (Liver transplantation)

ಇಂಟರ್‌ಫೆರಾನ್ ಚಿಕಿತ್ಸೆಯು ಎಲ್ಲರಿಗೂ ಕೊಡುವಂತಹದಲ್ಲ. ಏಕೆಂದರೆ ಇದು ಮೂಳೆ ಮಜ್ಜೆಯನ್ನು ಸಂಕುಚಿತಗೊಳಿಸಿ ರಕ್ತದ ಅನೇಕ ತೊಂದರೆಗಳಿಗೆ ಕಾರಣವಾಗಬಹುದು. ಇಂಟರ್ ಫೆರಾನ್ ಪೂರ್ಣ ಚಿಕಿತ್ಸೆ ಅಲ್ಲವೇ ಅಲ್ಲ. ಕ್ರಾನಿಕ್ ಹೆಪಟೈಟಿಸ್ ಸಿ ರೋಗಿಗಳಲ್ಲಿ ದೀರ್ಘವಾದ ಇಂಟರ್‌ಫೆರಾನ್ ಚಿಕಿತ್ಸೆಯಿಂದ ಆಗುವ ಪರಿಣಾಮಗಳ ಬಗ್ಗೆ ಸಂಶೋಧನೆ ನಡೆಯುತ್ತಿದೆ.

ರೋಗಿಗಳು ವೈದ್ಯರ ಸಲಹೆಗಳನ್ನು ಪಾಲಿಸ ಬೇಕು. ಆಹಾರದಲ್ಲಿ ಪೋಷಕಾಂಶಗಳನ್ನು ಹೆಚ್ಚು ಬಳಸುವುದು, ಒತ್ತಡ ಕಡಿಮೆ ಮಾಡಿಕೊಳ್ಳು ವುದು, ಆಲ್ಕೋಹಾಲನ್ನು ತ್ಯಜಿಸುವುದು, ಕಡಿಮೆ ಕೊಬ್ಬಿರುವ ಆದರೆ ಅಧಿಕ ನಾರಿನಂಶವಿರುವ ಆಹಾರ ಸೇವಿಸುವುದು ಒಳ್ಳೆಯದು. ಮಾಂಸ, ಕಾಫಿ ಸೇವನೆ ತ್ಯಜಿಸುವುದು. ಏಕೆಂದರೆ ಈ ಎರ ಡೂ ಯಕೃತ್ತಿಗೆ ಶ್ರಮಕೊಡುವಂತಹವುಗಳಾಗಿವೆ.

ರೋಗ ಬರದಂತೆ ತಡೆಯುವ ವ್ಯಾಕ್ಸಿನ್ ತೆಗೆದುಕೊಳ್ಳುವುದೇ ಪರಿಣಾಮಕಾರಿ ಚಿಕಿತ್ಸೆಯಾ ಗಿದೆ. ರಕ್ತ ತೆಗೆದುಕೊಳ್ಳಬೇಕಾದ ಸಂದರ್ಭದಲ್ಲಿ ರಕ್ತವನ್ನು ಪರೀಕ್ಷಿಸಿಯೇ ತೆಗೆದುಕೊಳ್ಳಬೇಕು.

**ಹೆಪಟೈಟಿಸ್ ಡಿ**

ಇದನ್ನು ಡೆಲ್ಟಾ ವೈರಸ್ ಎಂತಲೂ ಕರೆಯುತ್ತಾರೆ. ಈಗಾಗಲೇ ಹೆಪಟೈಟಿಸ್ ಬಿ ದಾಳಿಗೊಳಗಾದವರಿಗೆ ಇದು ಸೋಂಕು ಉಂಟುಮಾಡುತ್ತದೆ. ಇದು ಕೂಡ ಯಕೃತ್ತಿನ ಕಾರ್ಯನಾಶಕ್ಕೆ ಕಾರಣವಾಗುತ್ತದೆ.

**ಹೆಪಟೈಟಿಸ್ ಇ**

ಇದು ಹೆಪಟೈಟಿಸ್ ಎ ನಂತೆ ಕಲುಷಿತ ನೀರು ಇಲ್ಲವೇ ಆಹಾರದಿಂದ ಉಂಟಾಗುತ್ತದೆ. ಇದರಿಂದ ಉಂಟಾಗುವ ತೊಂದರೆಗಳು ಬಹಳ ಕಡಿಮೆ.

ಆಹಾರದ ಕೊರತೆ, ಕಲುಷಿತ ನೀರಿನ ಸೇವನೆ, ಮಕ್ಕಳ ಬಗ್ಗೆ ಕಾಳಜಿ ಇಲ್ಲದಿರುವುದರಿಂದ ನಮ್ಮ ದೇಶದಲ್ಲಿ ಪ್ರತಿ ವರ್ಷ ಮಿಲಿಯಗಟ್ಟಲೇ ಜೀವಗಳು ನಾಶವಾಗುತ್ತಿವೆ. ನಮ್ಮ ದೇಶದಲ್ಲಿ ಶೇ.75 ಭಾಗ ಹೆರಿಗೆಗಳು ಆಸ್ಪತ್ರೆಯ ಹೊರಗಡೆಯೇ ಆಗುತ್ತವೆ. ವೈರಸ್‌ನ ಪರಿಧಿಯು ನಿಧಾನವಾಗಿ ದಿನದಿಂದ ದಿನಕ್ಕೆ ಹಬ್ಬುತ್ತಿದೆ. ಇಷ್ಟಾದರೂ ನಮ್ಮ ಸರಕಾರವು ರೋಗಬಾರದಂತೆ ತಡೆಯುವ ವಿಧಾನಗಳನ್ನು ಅನುಸರಿಸುತ್ತಿಲ್ಲ. ತೈವಾನ್, ಜಪಾನ್, ಸಿಂಗಪೂರ್ ಹಾಗೂ ಚೈನಾ ದೇಶಗಳು ಈ ರೋಗದ ವಿರುದ್ಧ ಹೋರಾಡಲು ಬೇಕಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ನಮ್ಮ ದೇಶದಲ್ಲೇಕೆ ಇನ್ನೂ ಸಾಧ್ಯವಾಗಿಲ್ಲ? ವ್ಯಾಕ್ಸಿನ್‌ನ ಬೆಲೆ ಬಹಳ ಖರ್ಚಿನದಾಗಿರುವುದೂ ಒಂದು ಕಾರಣವಾಗಿರಬಹುದು. ಚಿಕ್ಕಮಕ್ಕಳಲ್ಲಿ ವ್ಯಾಕ್ಸಿನ್ ಹಾಕುವ ಕಾರ್ಯಕ್ರಮ ಹಮ್ಮಿಕೊಂಡರೆ ಶೇಕಡಾ 90 ಭಾಗ ವೈರಸ್‌ನ ದಾಳಿಯನ್ನು ತಡೆ ಗಟ್ಟಬಹುದು. ಮುಖ್ಯವಾದ ಸಮಸ್ಯೆಯೆಂದರೆ ವ್ಯಾಕ್ಸಿನ್‌ನ ಮೂರು ಡೋಸ್‌ಗಳಿಗೆ ತಗಲುವ ವೆಚ್ಚ 900 ರೂಗಳನ್ನು ಭರಿಸುವುದೇ ಆಗಿದೆ. ಮಕ್ಕಳಲ್ಲಿ ಬೇರೆ ಕಾಯಿಲೆಗಳ ನಿರೋಧಕ ವ್ಯಾಕ್ಸಿನ ಗಳಂತೆ ಹೆಪಟೈಟಿಸ್ ಬಿ ವ್ಯಾಕ್ಸಿನ್‌ನ್ನು ಪ್ರತಿರೋಧಕ ಚಿಕಿತ್ಸೆ ಕಾರ್ಯಕ್ರಮಗಳಲ್ಲಿ ಸೇರಿಸಿಕೊಂಡರೆ ಹೆಪಟೈಟಿಸ್ ಬಿ ಯಿಂದ ಉಂಟಾಗುವ ಭೀಕರತೆ ಯನ್ನು ತಡೆಗಟ್ಟಬಹುದು. ಈ ವ್ಯಾಕ್ಸಿನ್ ಜೊತೆ ಯಲ್ಲಿ ಇತರ ನಿರೋಧಕ ವ್ಯಾಕ್ಸಿನ್‌ನ್ನು ಸೇರಿಸಿ ಒಂದೇ ವ್ಯಾಕ್ಸಿನನ್ನು ತಯಾರಿಸುವಲ್ಲಿ (ಔಷಧ ಕಂಪನಿಗಳು) ಯಶಸ್ವಿಯಾದರೆ ಹಾಗೂ ಸರಕಾರ ವೂ ಈ ಯೋಜನೆಯನ್ನು ಜಾರಿಗೊಳಿಸಿದರೆ ಹೆಪ ಟೈಟಿಸ್ ಬಿ ಯನ್ನು ಭೂತಕಾಲಕ್ಕೆ ತಳ್ಳಬಹುದು.

ವಿಶ್ವ ಆರೋಗ್ಯ ಸಂಸ್ಥೆಯು ಹೆಪಟೈಟಿಸ್ ಬಿ ಯನ್ನು ಪ್ರಮುಖ ಆರೋಗ್ಯದ ತೊಂದರೆ ಎಂದು ಭಾವಿಸಿದೆ. ವಿಶ್ವ ಆರೋಗ್ಯ ಸಂಸ್ಥೆಯು ರಾಷ್ಟ್ರೀಯ ವ್ಯಾಕ್ಸಿನೇಶನ್ ಪ್ರೋಗ್ರಾಂನಲ್ಲಿ ಸೇರಿಸಬೇಕೆಂದು ಎಲ್ಲಾ ದೇಶಗಳಿಗೆ ಆದೇಶಿಸಿದೆ. ಈಗಿನವರೆಗೂ ಚೈನಾ, ಮಲೇಶಿಯಾ, ಸಿಂಗಪೂರ್, ಥೈಲ್ಯಾಂಡ್, ಫಿಲಿಪೈನ್ಸ್ ಇಂಡೋನೇಷ್ಯಾಗಳು ರಾಷ್ಟ್ರೀಯ ಪ್ರೋಗ್ರಾಂನಲ್ಲಿ ಅಳವಡಿಸಿಕೊಂಡಿವೆ. ನಮ್ಮ ಸರ್ಕಾರವೂ ಆಸಕ್ತಿವಹಿಸಿ ರಾಷ್ಟ್ರೀಯ ಪ್ರೋಗ್ರಾಂ ನಲ್ಲಿ ವ್ಯಾಕ್ಸಿನ್ ಹಾಕುವುದನ್ನು ಸೇರಿಸಲೇಬೇಕು.

■ ಡಾ.ವಸುಂಧರಾ ಭೂಪತಿ

**ಕಲಾವಿದ!**

ಈ ವರ್ಷದ ಅತ್ಯಂತ ಪ್ರಸಿದ್ಧ
'ಕಲಾವಿದ' ಯಾರು
ಕ್ಲಿಂಟನ್!
ಯಾಕೆ?
ಮೋನಿಕಾ ಲೆವಿನ್‌ಸ್ಕಿ ಬಟ್ಟೆಯ ಮೇಲೆ ತಮ್ಮ ವೀರ್ಯದಿಂದ 'ಕಲೆ' ಮಾಡಿ ಪ್ರಪಂಚದಲ್ಲೇ ಹೆಸರುವಾಸಿಯಾಗಿದ್ದಾರೆ. ಅದಕ್ಕೆ!

### ಹೆಪಟೈಟಿಸ್ 'ಬಿ'ಗೆ ಆಯುರ್ವೇದ ಚಿಕಿತ್ಸೆ

ರಕ್ತ ಪರೀಕ್ಷೆಯಿಂದ ಹೆಪಟೈಟಿಸ್ 'ಬಿ'ಯ ಇರುವಿಕೆ ತಿಳಿದ ತಕ್ಷಣ ಆಯುರ್ವೇದ ತಜ್ಞ ವೈದ್ಯರನ್ನು ಭೇಟಿಯಾಗಿ ಚಿಕಿತ್ಸೆ ತೆಗೆದುಕೊಳ್ಳಬೇಕು. ಈ ವೈರಸ್‌ನ ಹಾವಳಿಯಿಂದ ಯಕೃತ್ತಿಗೊದಗುವ ಅನಾಹುತಗಳನ್ನು ಈ ಚಿಕಿತ್ಸೆಯಿಂದ ತಪ್ಪಿಸಬಹುದು.

### ಚಿಕಿತ್ಸೆಯಲ್ಲಿ ಎರಡು ವಿಧ

ಶಮನ ಹಾಗೂ ಶೋಧನ ಶಮನ ಚಿಕಿತ್ಸೆಯಲ್ಲಿ ಔಷಧಿ ಸೇವನೆ ಹಾಗೂ ಪಥ್ಯ ಇರುತ್ತದೆ. ಭೂಮ್ಯಾಮಲಕಿ (ನೆಲನೆಲ್ಲಿ), ಭೃಂಗರಾಜ, ಏರಂಡ (ಔಡಲ), ತ್ರಿಫಲಾ, ಕುಮಾರಿ ಮುಂತಾದ ಗಿಡ ಮೂಲಿಕೆಗಳನ್ನೊಳಗೊಂಡ ಔಷಧಿ ಸೇವನೆ ಮಾಡಬೇಕಾಗುತ್ತದೆ. ಅಲ್ಲದೇ ಕರಿದ ತಿಂಡಿ, ಆಲ್ಕೋಹಾಲು, ಖಾರ, ಸಿಗರೇಟು ಸೇವನೆಯನ್ನು ವರ್ಜಿಸಬೇಕಾಗುತ್ತದೆ.

ಶೋಧನದಲ್ಲಿ 'ವಿರೇಚನ'ವನ್ನು ತೆಗೆದುಕೊಳ್ಳಬೇಕಾಗುತ್ತದೆ. ಯಾರಿಗೆ ಯಾವ ಚಿಕಿತ್ಸೆಯ ಅವಶ್ಯಕತೆಯಿದೆಯೆಂದು ರೋಗಿಯ ಬಲ, ವಯಸ್ಸು, ಪ್ರಕೃತಿ ಮುಂತಾದುವುಗಳನ್ನು ಪರೀಕ್ಷಿಸಿ ಚಿಕಿತ್ಸೆಯನ್ನು ವೈದ್ಯರೇ ನಿರ್ಧರಿಸುತ್ತಾರೆ.



ಆ. 15, 1947ರಂದು ಗುಲಬರ್ಗಾದಲ್ಲಿ ಧ್ವಜ ಹಾರಿಸಿದ ಸ್ಥಳ

## ಬಡ ಜಿಲ್ಲೆಗಳಿಗೆ ತಡವಾಗಿ ಬಂದ ಸ್ವಾತಂತ್ರ್ಯ

# ಹೈದರಾಬಾದ್ ಕರ್ನಾಟಕ ವಿಮೋಚನಾ ಚಳವಳಿ

■ ಸದಾನಂದ ಪೆರ್ಲ
ಪ್ರಸಾರ ನಿರ್ವಾಹಕರು
ಆಕಾಶವಾಣಿ
ಗುಲಬರ್ಗಾ


ಬೀದರದ ಚೌಬಾರ

**ಹೈದರಾಬಾದ್ ಕರ್ನಾಟಕದ ಬೀದರ್, ಗುಲಬರ್ಗಾ, ರಾಯಚೂರು ಜಿಲ್ಲೆಗಳಿಗೆ ಸ್ವಾತಂತ್ರ್ಯ ಬಂದದ್ದು 1947ರ ಆಗಸ್ಟ್ 15 ರಂದು ಅಲ್ಲ! ಇಲ್ಲಿನ ಜನತೆ ಸೆಪ್ಟೆಂಬರ್ 17ರಂದು ಸುವರ್ಣ ಸ್ವಾತಂತ್ರ್ಯೋತ್ಸವ ಆಚರಿಸಲಿದ್ದಾರೆ. ಈ ಭಾಗದ ವಿಮೋಚನಾ ಸತ್ಯಾಗ್ರಹದ ರೋಮಾಂಚನಕಾರಿ ವಿವರ ಇಲ್ಲಿದೆ.**

**ಭಾ**ರತದ ಸುವರ್ಣ ಮಹೋತ್ಸವಕ್ಕೆ ತೆರೆಬಿದ್ದಾಗ ಹೈದರಾಬಾದ್ ಕರ್ನಾಟಕದ ಜನತೆ 50ನೇ ಸ್ವಾತಂತ್ರ್ಯೋತ್ಸವಕ್ಕೆ ಅಂಕಣ ಪರದೆ ತೆರೆದಿದ್ದಾರೆ. ಇದನ್ನು ಕೇಳಿದಾಗ ವಿಪರ್ಯಾಸ ಅನಿಸಬಹುದು! ಹೌದು! 1947 ಆಗಸ್ಟ್ 15ರಂದು ಭಾರತೀಯರೆಲ್ಲರೂ ದಾಸ್ಯದ ಶೃಂಖಲೆಯಿಂದ ಹೊರಬಂದು ಸಂತಸದಿಂದ ಕುಣಿದು ಕುಪ್ಪಳಿಸಿದರು. ಆದರೆ ಹೈದರಾಬಾದ್ ಕರ್ನಾಟಕದ ಜನರು ನಿಜಾಮನ ಆಳ್ವಿಕೆಯ ಕಪಿ ಮುಷ್ಟಿಯಿಂದ ಹೊರಬರಲು ಸಾಧ್ಯವಾಗದೆ ಕರಿನೆರಳಲ್ಲಿ ದುಃಖವನ್ನು ಅನುಭವಿಸುತ್ತಿದ್ದರು. ಹೈದರಾಬಾದ್ ಕರ್ನಾಟಕದ ಜನತೆಗೆ ಪಿತಾಮಹನಾದ ಅಂದಿನ ಗೃಹ ಸಚಿವ ಉಕ್ಕಿನ ಮನುಷ್ಯ ಸರ್ದಾರ್ ವಲ್ಲಭಭಾಯಿ ಪಟೇಲ್ ಅವರ ಕೆಚ್ಚೆದೆಯ ತೀರ್ಮಾನದಿಂದ 1948 ಸೆಪ್ಟಂಬರ್ 17 ರಂದು ಸ್ವಾತಂತ್ರ್ಯ ಪ್ರಾಪ್ತಿಯಾಯಿತು.

ಆಗ ಹೈದರಾಬಾದ್ ಕರ್ನಾಟಕದ ಬೀದರ್, ಕಲಬುರ್ಗಿ, ರಾಯಚೂರು ಜಿಲ್ಲೆಗಳು ನಿಜಾಮ ಸಂಸ್ಥಾನದ ಭಾಗವಾಗಿದ್ದವು. ಸ್ವಾತಂತ್ರ್ಯ ಪೂರ್ವ ಭಾರತದಲ್ಲಿ ಇಡೀ ಭಾರತ 'ಬ್ರಿಟಿಷ್ ಇಂಡಿಯಾ' ಮತ್ತು 'ಸಂಸ್ಥಾನಿಕ ಇಂಡಿಯಾ' ಎಂದು ವಿಭಜನೆಗೊಂಡಿತ್ತು. ಇದರಲ್ಲಿ ಮೂರನೇ ಒಂದರಷ್ಟು ಬ್ರಿಟಿಷರಲ್ಲೂ, ಮೂರನೇ ಎರಡರಷ್ಟು ಭಾಗ ಸುಮಾರು 552 ಸಂಸ್ಥಾನಿಕರ ಆಡಳಿತಕ್ಕೂ ಒಳಪಟ್ಟಿತ್ತು. ಬ್ರಿಟಿಷರ ಅಡಿಯಾಳಾಗಿ ಆಡಳಿತ ಮುಂದುವರಿಸಲು ಒಪ್ಪಿಕೊಂಡ ಸಂಸ್ಥಾನಗಳಾಗಿದ್ದವು. ಇದರಲ್ಲಿ ಹೈದರಾಬಾದ್ ಸಂಸ್ಥಾನದ ನಿಜಾಮನ ಆಡಳಿತಕ್ಕೆ ಕರ್ನಾಟಕದ ಈ ಮೂರು ಜಿಲ್ಲೆಗಳು ಸೇರ್ಪಡೆಗೊಂಡಿದ್ದವು.

ಬ್ರಿಟಿಷರು ಭಾರತವನ್ನು ಬಿಟ್ಟು ತೊಲಗಿದಾಗ ಸಂಸ್ಥಾನಿಕ ಇಂಡಿಯಾದ ರಾಜರಿಗೆ ಮೂರು ಆಯ್ಕೆಯ ಅವಕಾಶ ಕಲ್ಪಿಸಿದ್ದರು. ಮೊದಲನೆಯದು, ಸಂಸ್ಥಾನಿಕರು ಸ್ವತಂತ್ರ ಭಾರತದಲ್ಲಿ ವಿಲೀನವಾಗಬಹುದು. ಎರಡನೆಯದು, ತಾವೇ ಸ್ವತಂತ್ರರೆಂದು ಘೋಷಿಸಿಕೊಳ್ಳುವುದು. ಮೂರನೆಯದು ಪಾಕಿಸ್ತಾನದ ಜತೆ ವಿಲೀನಗೊಳ್ಳುವುದು. ಬ್ರಿಟಿಷರ ಕೃಪಾಕಟಾಕ್ಷದಿಂದ ಸ್ವತಂತ್ರ ಆಳ್ವಿಕೆಯೊಂದಿಗೆ ನಿಜಾಮನು ಪ್ರತ್ಯೇಕವಾಗಿ ಸೇನೆ, ಸಾರಿಗೆ, ರೈಲ್ವೆ, ಅಂಚೆ, ನಾಣ್ಯ, ಆಕಾಶವಾಣಿ ಹಾಗೂ ಶಿಕ್ಷಣ ಮುಂತಾದ ಎಲ್ಲ ಸೌಕರ್ಯಗಳ ಸಾರ್ವಭೌಮತ್ವ ಹೊಂದಿರುವುದರಿಂದ ಆಯ್ಕೆಯ ವಿಷಯ ಬಂದಾಗ ಸಹಜವಾಗಿ ಸ್ವತಂತ್ರವಾಗಿ ಉಳಿಯುವ ನಿರ್ಧಾರಕ್ಕೆ ಬಂದನು. ಈ ಒಂದು ನಿರ್ಧಾರ ಹೈದರಾಬಾದ್ ಕರ್ನಾಟಕದ ಜನತೆಯನ್ನು ಬಡಿದೆಬ್ಬಿಸಿತು. ಕ್ರಾಂತಿಯ ಕಿಡಿ ಹತ್ತಿತು. ಹೋರಾಟದ ರಣಕಹಳೆಯೂದಿ ದೇಶಭಕ್ತರ ದಂಡು ರಣಾಂಗಣಕ್ಕೆ ಇಳಿಯಿತು.

ಹೈದರಾಬಾದ್ ಕರ್ನಾಟಕ ವಿಮೋಚನಾ ಸತ್ಯಾಗ್ರಹದ ಯಶೋಗಾಥೆ ರೋಮಾಂಚನಕಾರಿ ಅನುಭವ. ಬ್ರಿಟಿಷ್ ಭಾರತದಲ್ಲಿ ಸ್ವಾತಂತ್ರ್ಯದ ಚಳವಳಿ ಬಿರುಸಿನಲ್ಲಿದ್ದಾಗ ಹೈದರಾಬಾದ್ ಕರ್ನಾಟಕದ ಜನರು ಹೋರಾಟಕ್ಕಿಳಿದಿದ್ದರು. ವಿದೇಶಿ ವಸ್ತು ಬಹಿಷ್ಕಾರ, ವಂದೇ ಮಾತರಂ ಚಳವಳಿ, ಕ್ವಿಟ್ ಇಂಡಿಯಾ ಚಳವಳಿ, ಧ್ವಜವಂದನಾ ಮುಂತಾದ ಕಾರ್ಯಕ್ರಮಗಳಲ್ಲಿ



ಶಹಾಪುರದ ಬಳಿ ಶ್ರೀ ರಮಾನಂದತೀರ್ಥರೊಂದಿಗೆ ಹೋರಾಟಗಾರರು

ಈ ಭಾಗದ ಜನರೇ ಭಾಗಿಯಾಗಿದ್ದಾಗ, ನಿಜಾಮನು ನಿಷೇಧ ಹೇರಿ ನೂರಾರು ಮಂದಿ ದೇಶಭಕ್ತರನ್ನು ಬಂಧನಕ್ಕೊಳಪಡಿಸಿ ಬ್ರಿಟಿಷರ ಮುಂದೆ ಸ್ವಾಮಿನಿಷ್ಠೆ ಪ್ರದರ್ಶಿಸಿದ್ದನು.

## ರಜಾಕಾರರ ಹಾವಳಿ

ನಿಜಾಮನ ಆಡಳಿತದ ಕಹಿಯನ್ನುಂಡ ಜನತೆ ಬಳಲಿ ಬೆಂಡಾಗಿದ್ದರು. 1947 ಜೂನ್ 26ರಂದು ನಿಜಾಮನು ''ಫರ್ಮಾನು'' ಹೊರಡಿಸಿ ಹೈದರಾಬಾದ್ ರಾಜ್ಯದ ಸ್ವತಂತ್ರ ದೊರೆ ಎಂದು ಸ್ವಯಂಘೋಷಿಸಿಕೊಂಡು ಭಾರತ ಒಕ್ಕೂಟ ದಿಂದ ದೂರವಿರಲು ತೀರ್ಮಾನಿಸಿರುವುದು ಸ್ವತಂತ್ರ ಭಾರತದ ಇತಿಹಾಸದಲ್ಲೊಂದು ಕಪ್ಪು ಚುಕ್ಕೆ. ಹೈದರಾಬಾದ್ ಸಂಸ್ಥಾನದಲ್ಲಿ ಅರಾಜಕತೆಯ ಕರಿಛಾಯೆ ಆವರಿಸಿತು. ದೇಶಭಕ್ತರ ಮೇಲೆ ಆಕ್ರಮಣ, ದರೋಡೆ, ಹತ್ಯೆ, ಬೆಂಕಿ ಪ್ರಕರಣ ಮುಂತಾದ ಅಮಾನವೀಯ ಕೃತ್ಯಗಳು ನಡೆದವು. ಇಂತಹ ಕಾರ್ಯಾಚರಣೆಗಾಗಿಯೆ ''ರಜಾಕಾರ'' ಸಂಘಟನೆ ಅಸ್ತಿತ್ವಕ್ಕೆ ಬಂತು. ಮಹಾರಾಷ್ಟ್ರದ ಲಾತೂರಿನಲ್ಲಿ ಸಾಧಾರಣ ವಕೀಲನಾದ ಕಾಶಿಮ್ ರಜ್ವಿ 1946ರಲ್ಲಿ ಹೈದರಾಬಾದ್‌ಗೆ ಹೋಗಿ 'ಇತ್ತೇಹಾದುಲ್ ಮುಸಲ್ಮೀನ್ಸ್' ಸಂಘಟನೆಯ ಹೈದರಾಬಾದ್ ರಾಜ್ಯ ಸಂಘಟನಾಕಾರನಾಗಿ



ಬೀದರ್ ಕೋಟೆಯ ಸುಂದರ ದೃಶ್ಯಗಳಲ್ಲಿ ಇದೂ ಒಂದು



ಚಂದ್ರಶೇಖರ ಪಾಟೀಲ ಮಹಾಗಾಂವ

ಸೇರಿಕೊಂಡು ಶಾಂತಿಸಾಮರಸ್ಯವನ್ನು ಕೆಡಿಸಿ ಲೂಟ, ಅಪಹರಣ, ದಂಗೆ, ಅನ್ಯಾಯಕ್ಕೆ ಪ್ರೇರಣೆ ನೀಡಿದನು. ಇತ್ತೇಹಾದ್ ಮತ್ತು ರಜಾಕರ ಸಂಘಟನೆಗಳು ಹೈದರಾಬಾದ್ ಕರ್ನಾಟಕದ ದೇಶಭಕ್ತ ಜನತೆಯ ಮಾರಣ ಹೋಮ ನಡೆಸಲು ಕುಮ್ಮಕ್ಕು ನೀಡಿದವು. ನಿಜಾಮ ಸೇನೆ ಬೀದರ್, ಚಿಟಗುಪ್ಪ, ಮುಚಳಂಬಿ, ದುದನಿ, ಅಫಜಲ್ಪುರ, ರಾಯಚೂರು....... ಹೀಗೆ ಹೈದರಾಬಾದ್ ಕರ್ನಾಟಕದ ಮೇಲೆ ಸತತ ದಾಳಿ ಮಾಡಿ ದ್ವೇಷಮಯ ವಾತಾವರಣ ಸೃಷ್ಟಿಸಿತು.

ಹೈದರಾಬಾದ್ ಕರ್ನಾಟಕದ ವಿಮೋಚನಾ ಸತ್ಯಾಗ್ರಹಕ್ಕೆ ನಾಂದಿಯೆಂಬಂತೆ ದೇಶಭಕ್ತಿಯ ಸೆಳೆಯಾಗಿ 1947 ಆಗಸ್ಟ್ 15 ರಂದು ಕಲಬುರ್ಗಿಯಲ್ಲಿ ಹನುಮಂತರಾವ್ ಕಕ್ಕೇರಿಯವರು ತಮ್ಮ ಕಟ್ಟಡದ ಮೇಲೆ 'ತಿರಂಗ ಝುಂಡಾ' ಹಾರಿಸಿದರು. ಇದು ಕಲಬುರ್ಗಿಯಲ್ಲಿ ಹಾರಿದ ಮೊಟ್ಟ ಮೊದಲ ರಾಷ್ಟ್ರಧ್ವಜ. ಚಿಟಗುಪ್ಪಾದಲ್ಲಿ ದೇಶಭಕ್ತರ ದಂಡು ರಾತ್ರೋರಾತ್ರಿ ಧ್ವಜ ಕಟ್ಟಿಕೊಂಡು ಗುಡಿಸಲಲ್ಲಿ ಠಿಕಾಣಿ ಹೂಡಿ ಮುಂಜಾನೆ ವೇಳೆಗೆ ಧ್ವಜ ಹಾರಿಸಿದರು. ನಿಜಾಮನ ನಿಷ್ಠ ಪೊಲೀಸರು ರಾಷ್ಟ್ರಭಕ್ತ ಪ್ರಜೆಗಳನ್ನು ದರದರನೆ ಎಳೆದು ರಾಷ್ಟ್ರಧ್ವಜವನ್ನು ಕಿತ್ತು ಹಾಕಿ ಅಪಮಾನ ಮಾಡಿದ ಘಟನೆಯನ್ನು ನರಸಿಂಗರಾವ್ ಬಾಚಾ ನೋವಿನಿಂದ ಈಗಲೂ ಸ್ಮರಿಸುತ್ತಾರೆ.

## ಹೋರಾಟದ ಕಣ್ಮಣಿಗಳು

ದೇಶಭಕ್ತರ ದಂಡು ಒಗ್ಗೂಡಿತು. ಹೈದರಾಬಾದ್ ರಾಜ್ಯ ಕಾಂಗ್ರೆಸ್ ಸಂಸ್ಥಾಪಕ ಸ್ವಾಮಿ ರಮಾನಂದ ತೀರ್ಥರ ದಕ್ಷ ಮಾರ್ಗದರ್ಶನದಲ್ಲಿ ಸಾವಿರಾರು ಮಂದಿ ನಿಜಾಮನ ವಿರುದ್ಧ ಹೋರಾಟದ ಕಣಕ್ಕೆ ಧುಮುಕಿದರು. ನಿಜಾಮನು ''ವಂದೇಮಾತರಂ'' ಗೀತೆಗೆ ನಿಷೇಧ ಹೇರಿ ಶಿಕ್ಷಣ ಸಂಸ್ಥೆಗಳಲ್ಲಿ 'ಅಸಫಜಾ' ಗೀತೆಯನ್ನು ಜಾರಿಗೊಳಿಸಿದನು. ಇದನ್ನು ಪ್ರತಿಭಟಿಸಿ ಜಗನ್ನಾಥ ಚಂಡ್ರಿಕಿ ಮುಂತಾದವರು ವಿದ್ಯಾರ್ಥಿ ದೆಸೆಯಲ್ಲಿ



ಜಗನ್ನಾಥ್ ರಾವ್ ಚಂಡ್ರಿಕಿ

ಹೋರಾಟಕ್ಕೆ ಇಳಿದರು. ಗಾಂಧೀಜಿಯವರ ಕರೆಯ ಮೇರೆಗೆ 'ಮಾಡು ಇಲ್ಲವೆ ಮಡಿ' ಚಳವಳಿಯನ್ನು ಭೂಗತವಾಗಿ ಸಂಘಟಿಸಿ 'ಮೊಗಲಾಯಿ' ಆಡಳಿತಶಾಹಿ ವಿರುದ್ಧ ಸಿಡಿದೇಳುವಂತೆ ಹುರಿದುಂಬಿಸಿದ ಅನೇಕ ಹಿರಿಯರು ಈಗಲೂ ತಮ್ಮ ಹಳೆ ನೆನಪಿನ ಬುತ್ತಿ ಬಿಚ್ಚಿಕೊಳ್ಳುತ್ತಾರೆ. ತ್ರಿವರ್ಣಧ್ವಜದೊಡನೆ ದಸರಾ, ಗಣೇಶ ಹಬ್ಬ ಆಚರಿಸಿದ ತಪ್ಪಿಗಾಗಿ ಚಂಡ್ರಿಕಿ, ಕೇಲೂರು ಮಲ್ಲಪ್ಪ ಮುಂತಾದವರು 6 ತಿಂಗಳಿಗೂ ಅಧಿಕ ಕಾಲ ಸೆರೆಮನೆವಾಸ ಕಂಡರು.

ಸ್ವಾತಂತ್ರ್ಯದ ರಣಕಹಳೆ ಎಲ್ಲೆಡೆ ಮೊಳಗಿತು.

**ಜನರೇ ಆಗಿರೆಚ್ಚರ । ಆಗಬೇಡಿರುಹ್ಚ್ಯಾರ**
**ಬೀಸಹತ್ತಿದೆ ಪೂರ್ವದ ಗಾಳಿ ।**
**ಕೂಗಹತ್ತಿದೆ ಬೆಳಗಿನ ಕೋಳಿ**
**ಕೀಸರಿಟ್ಟದೆ ಕಾಂಗ್ರೆಸ್ ಕಹಳೆ ।**
**ಸ್ವತಂತ್ರರಾಗಿ ಬಾಳಿರೆಂದು**
**ಗುಲಾಮಗಿರಿಯು ಸಾಕಿನ್ನೆಂದು ।**

ಸಾರುವ ದೇಶಭಕ್ತಿ ಗೀತೆಯನ್ನು ಹಾಡಿ ಜನಜಾಗೃತಿ ಮೂಡಿಸುವ ಕೆಲಸ ಭರದಿಂದ ಸಾಗುತ್ತಿತ್ತು. ಜಗನ್ನಾಥ್‌ರಾವ್ ಚಂಡ್ರಿಕಿ, ಸರ್ದಾರ್ ಶರಣಗೌಡ ಇನಾಂದಾರ್, ವೀರಣ್ಣ, ತಿಮ್ಮಾಜಿ, ಜನಾರ್ಧನ ರಾವ್ ದೇಸಾಯಿ, ಶರಣಪ್ಪ, ಬೈರ್ಜಿ, ನಾರಾಯಣ ಕಾನಿಹಾಳ್, ಮಾಣಿಕಪ್ಪ ಜಿ.ಪಾಟೀಲ್, ಎಸ್.ರುದ್ರಪ್ಪ ನಾಗಪ್ಪ, ಆರ್.ಜಿ.ಜೋಷಿ, ಚಂದ್ರಶೇಖರ ಪಾಟೀಲ ಮಹಾಗಾಂವ, ಹನುಮನ ಗೌಡ ಅಣ್ಣಾರಾವ್ ಗಣಮುಖಿ, ದತ್ತಾತ್ರೇಯ ಅವರಾದಿ, ಲಕ್ಷ್ಮಣರಾವ್, ಜಮದ್ರಖಾನೆ, ಜಿ.ಪ್ರಾಣೇಶ ಚಾರ್, ಕೊಟ್ರಬಸಯ್ಯ, ಡಿ.ಬಿ.ಕಲ್ಮಣಕರ್ ಮುಂತಾದ ಅನೇಕರು ಹಳ್ಳಿ ಹಳ್ಳಿಗೆ ಪ್ರವಾಸ ಕೈಗೊಂಡು ಸತ್ಯಾಗ್ರಹವನ್ನು ಸಂಘಟಿಸುವ ರೂವಾರಿಗಳಾದರು.

### ಬಾರ್ಡರ್ ಕ್ಯಾಂಪ್

ನಿಜಾಮನ ಸೇವೆಯ ಮುಂದೆ ದೇಶಭಕ್ತರು ದನಿ ಎತ್ತುವುದು ಕಷ್ಟಕರವಾಗಿತ್ತು. ರಜಾಕಾರರ ಹಾವಳಿಗೆ ತುತ್ತಾದ ಜನರು ಮಾನ ಪ್ರಾಣ ರಕ್ಷಣೆಗೆ ಪರಿತಪಿಸಬೇಕಾಯಿತು. ನಿಜಾಮನ ವಿರುದ್ಧ ಬಂಡೆದ್ದು ಹೋರಾಟ ಪ್ರಬಲಗೊಳಿಸಲು ಭೂಗತ ಚಟುವಟಿಕೆಗಳು ತೀವ್ರಗೊಂಡವು. ನಿಜಾಮನ ಶಕ್ತಿ ದಮನ ಕಾರ್ಯಕ್ಕಾಗಿ ಹೈದರಾಬಾದ್ ಸಂಸ್ಥಾನದ ಗಡಿಭಾಗಗಳಲ್ಲಿ ಶಿಬಿರಗಳು ಪ್ರಾರಂಭಗೊಂಡವು. ಹೋರಾಟಕ್ಕಾಗಿ ಸಮಿತಿಗಳನ್ನು ರಚಿಸಲಾಯಿತು. ಮಹಾರಾಷ್ಟ್ರ ಶಿಬಿರ ಸಂಘಟನೆಗಾಗಿ ಗೋವಿಂದ ರಾವ್ ಸ್ರಾಫ್ ಆಂಧ್ರಕ್ಕೆ ಜಮುನಾಲಾಲ್ ಕೇಶವರಾವ್, ಕರ್ನಾಟಕಕ್ಕೆ ಆರ್.ವಿ.ಬೀಡಪ್ಪ 'ಬಾರ್ಡರ್ ಕ್ಯಾಂಪ್' ಉಸ್ತುವಾರಿ ಹೊಣೆ ವಹಿಸಲಾಯಿತು. ಶಸ್ತ್ರಾಸ್ತ್ರ ಜಮಾವಣೆ, ನಿಜಾಮನ ನೌಕಾ, ಪೊಲೀಸ್ ಠಾಣೆಗಳ ಮೇಲೆ ಮುತ್ತಿಗೆ, ರಜಾಕಾರ ಮತ್ತು ನಿಜಾಮನ ಸೇನೆಯಿಂದ ಕಿರುಕುಳ ಅನುಭವಿಸುತ್ತಿರುವ ಜನರಿಗೆ ರಕ್ಷಣೆ ನೀಡಲು ಸಜ್ಜಾದರು.

ಕಲಬುರ್ಗಿ, ರಾಯಚೂರು ಜಿಲ್ಲೆಗಳಲ್ಲಿ 10ಕ್ಕೂ ಹೆಚ್ಚು ಇಂತಹ ಕ್ಯಾಂಪ್‌ಗಳು ಆರಂಭಗೊಂಡವು. ವಾಗ್ದರಿ - ಎ.ವಿ.ಪಾಟೀಲ (ಆಳಂದ), ಸಿಂದಗಿ- ಶರಣಗೌಡ ಇನಾಂದಾರ (ಜೇವರ್ಗಿ), ಗೌಡಗಾಂವ - ಭೈರಪ್ಪ ಗೌಡ ಭೂಸನೂರ (ತಾ.ಆಳಂದ), ದುಧನಿ ಗುರುಭೀಮರಾಯ ಪಾಟೀಲ (ತಾ.ಆಳಂದ), ಸಾಲೋಟಗಿ - ಬಸವಂತರಾಯ ಪಾಟೀಲ (ಹಗರಟಗಿ ತಾ.ಸುರಪುರ), ಇವರ ನೇತೃತ್ವದಲ್ಲಿ ಕಲಬುರ್ಗಿ ಜಿಲ್ಲೆಯಲ್ಲಿ ಕ್ಯಾಂಪ್ ಕಾರ್ಯಾಚರಿಸಿದವು. ರಾಯಚೂರು ಜಿಲ್ಲೆಯಲ್ಲಿ ಗುಡದ ಮಲ್ಲಾಪುರ (ಶಾಂತಗಿರಿ), ಆರ್.ವಿ. ಬೀಡಪ್ಪ ಬೀದರ್, ಮುಂಡರಗಿ - ಶಿವಮೂರ್ತಿ ಸ್ವಾಮಿ ಅಳವಂಡಿ, ಇಟಗಿ ವಿರೂಪಾಕ್ಷಯ್ಯ ಹಳ್ಳಿಕೇರಿ ಮುದಿಗೌಡ ಪೊಲೀಸ್ ಪಾಟೀಲ, ಗಜೇಂದ್ರಗಡ ಪುಂಡಲಿಕಪ್ಪ ನೇತೃತ್ವ ವಹಿಸಿದ್ದರು. ಬೀದರ್ ಜಿಲ್ಲೆಯಲ್ಲಿ ಕ್ಯಾಂಪ್‌ನ ಕೊರತೆಯಿಂದಾಗಿ ನಿಜಾಮನ ಸೇನೆಯು ಮುಗ್ಧ ಜನರನ್ನು ತೀವ್ರ ಹಿಂಸೆಗೆ ಗುರಿಮಾಡಿರುವುದು ಇತಿಹಾಸದ ದುರದೃಷ್ಟ ಘಟನೆ. ಮುಚಳಂದಿಯಲ್ಲಿ ಒಂದೇ ದಿನ ಶರಣಪ್ಪ ಮಾಲಿಗೌಡರ 7 ಮಂದಿಯನ್ನು ಸುಟ್ಟು ಭಸ್ಮ ಮಾಡಲಾಯಿತು. ರಾಮಣ್ಣ ದೇವಪ್ಪ, ಮುನಿ ದೇವಪ್ಪ, ಕರಬಟ್ಟಿ ಮಾದಪ್ಪ, ಶ್ರೀಮತಿ ಗುರಮ್ಮಾ ಅಲಶೆಟ್ಟಿ ಮುಂತಾದವರನ್ನು ದಯನೀಯವಾಗಿ ಹತ್ಯೆ ಮಾಡಲಾಯಿತು. ಗೊರಟಿ, ದಾಡಗಿ ಮುಂತಾದ ನೂರಾರು ಹಳ್ಳಿಗಳ ಕಣ್ಣೀರ ಕಥೆ ಇದೇ ರೀತಿ. ಮುಚಳಂಬಿಯ ಘೋರ ಘಟನೆಯು ಭುಲಾಯಿ ಹಾಡುಗಳಲ್ಲಿ ಈಗಲೂ ಜೀವಂತವಾಗಿದೆ.

**ಗಾಂಧಿ ಟೋಪಿ ಇಲ್ಲದ್ದು ನೋಡಿ**
**ರಝಾಕಾರ್ರು ಬಂದಾರ ಓಡಿ**
**ಅವರೀಗಿ ಮಾಡತಾರ ಹೊಡಿ ಬಡಿ**
**ಮನಿ ಮಾಳಿಗಿ ಎಲ್ಲ ಕೆದರಿ**
**ಎಣ್ಣಿ ಹಾಕಿ ಹಚ್ಚ್ಯಾರ ಬೆಂಕಿ**

## ಹೈದರಾಬಾದ್ ಕರ್ನಾಟಕ ಸುವರ್ಣ ಸ್ವಾತಂತ್ರ್ಯ

- ಹೈದರಾಬಾದ್ ಕರ್ನಾಟಕ ವಿಮೋಚನಾ ಸತ್ಯಾಗ್ರಹದ 50ನೇ ವರ್ಷಾಚರಣೆಗೆ ಶಾಸಕರು, ಸಂಸದರು, ಜನಪ್ರತಿನಿಧಿಗಳು, ವಾಣಿಜ್ಯೋದ್ಯಮಿಗಳು, ಬುದ್ಧಿಜೀವಿಗಳು ಮುಂತಾದವರು ಸೇರಿಕೊಂಡು ಸಮಿತಿ ರಚಿಸಿ ಕಾರ್ಯ ಪ್ರವೃತ್ತರಾಗಿದ್ದಾರೆ.
- ಕಲಬುರ್ಗಿಯ ಸರ್ದಾರ್ ವಲ್ಲಭಾಯಿ ಪಟೇಲ್ ವೃತ್ತದಲ್ಲಿ ವಲ್ಲಭಾಯಿ ಪಟೇಲ್ ಅವರ ಭವ್ಯ ಮೂರ್ತಿ ಅನಾವರಣಕ್ಕೆ ಕೆಲಸ ಪ್ರಗತಿ ಹಂತದಲ್ಲಿದೆ.
- ಸ್ಮರಣ ಸಂಚಿಕೆ ಬಿಡುಗಡೆಗೆ ಲೇಖನ - ಬರಹಗಳು ಸಿದ್ಧಗೊಂಡಿವೆ.
- ಸೆಪ್ಟಂಬರ್ 17ರಂದು ಹೈದರಾಬಾದ್ ಕರ್ನಾಟಕ ಜಿಲ್ಲೆಗಳಲ್ಲಿ ಸರಕಾರ ರಜಾ ಘೋಷಿಸಿದೆ.
- ಅಂದಿನ ಗೃಹ ಸಚಿವರಾಗಿದ್ದ ಉಕ್ಕಿನ ಮನುಷ್ಯ ಸರ್ದಾರ್ ವಲ್ಲಭಾಯಿ ಪಟೇಲ್ ಪ್ರತಿಮೆ ಅನಾವರಣಕ್ಕೆ ಕೇಂದ್ರದ ಗೃಹ ಸಚಿವರಾದ ಎಲ್.ಕೆ.ಅಡ್ವಾಣಿ ಅವರ ಉಪಸ್ಥಿತಿ ಖಚಿತಗೊಂಡಿದೆ.
- ಹೈದರಾಬಾದ್ ಕರ್ನಾಟಕ ವಿಮೋಚನಾ ದಿನಾಚರಣೆಯನ್ನು ಸೆ.16 ರಿಂದ 18ರ ತನಕ ವೈವಿಧ್ಯಮಯ ಕಾರ್ಯಕ್ರಮಗಳೊಂದಿಗೆ ಆಚರಿಸಲು ಕರ್ನಾಟಕದ ಎಲ್ಲ ಅಕಾಡೆಮಿಗಳು ಕಾರ್ಯಕ್ರಮ ಹಮ್ಮಿಕೊಂಡಿವೆ. ವಿವಿಧ ಸಾಂಸ್ಕೃತಿಕ ಕಾರ್ಯಕ್ರಮ ನೆರವೇರಲಿದೆ.

ಏಳು ಮಂದ್ಯಾಗ ಉಳಿದಿಲ್ಲ ಬಾಕಿ
॥ ಕೋಲಣ್ಣ ಕೋಲ ॥

ಚಳುವಳಿಯಲ್ಲಿ ಭಾಗಿಯಾದ ರಾಮಲಿಂಗಪ್ಪ ಮುಚಳಂಬಿ ಅವರು ನೋವಿನ ಧ್ವನಿಯನ್ನು ಭುಲಾಯಿ ಹಾಡಿನಲ್ಲಿ ವ್ಯಕ್ತಪಡಿಸಿದ್ದಾರೆ. ಆಶು ಕವಿತ್ವದ ಜನಪದ ಕವಿಗಳ ಬಾಯಲ್ಲಿ ಹೈದರಾಬಾದ್ ಕರ್ನಾಟಕ ವಿಮೋಚನಾ ಸತ್ಯಾಗ್ರಹದ ರೋಮಾಂಚನಕಾರಿ ಘಟನೆಗಳು ಕಣ್ಣಿಗೆ ಕಟ್ಟುವಂತೆ ಗುನುಗುನಿಸುತ್ತವೆ. ಆರಾಯಿಪದ, ಗೀಗಿಪದ, ಲಾವಣಿಪದ, ಭುಲಾಯಿ ಹಾಡುಗಳಲ್ಲಿ ಚಳವಳಿಯ ಇತಿಹಾಸ ಮೈದಳೆದು ನಿಂತಿದೆ.

## ಹೋರಾಟಕ್ಕೆ ಸಂದ ಜಯ

ವಿಮೋಚನಾ ಸತ್ಯಾಗ್ರಹದಲ್ಲಿ ಸಕ್ರಿಯವಾಗಿ ತೊಡಗಿಸಿ ಜನರನ್ನು ಸಂಘಟಿಸುವ ಕೆಲಸದಲ್ಲಿ ನಿರತರಾದವರಲ್ಲಿ ದತ್ತಾಯಿ ಅವರಾದಿ, ಜಗನ್ನಾಥ್‌ರಾವ್ ಚಂಡ್ರಿಕೆ, ಶರಣಗೌಡ ಇನಾಂದಾರ್, ಕುಸುಮಾಕರ ದೇಸಾಯಿ, ತ್ರಿಲೋಚನ ದೀಕ್ಷಿತ್, ಕೊಟ್ರಬಸಯ್ಯ, ಕೊಲೂರು ಮಲ್ಲಪ್ಪ, ಲಕ್ಷ್ಮಣರಾವ್ ಜಮದ್ರಖಾನ, ಹನುಮಗೌಡ, ದಾಸರಾವ್ ಮೈಲಾರರಾವ್ ಮೊಖ್ತೇದಾರ, ಎಸ್.ರುದ್ರಪ್ಪ ನಾಗಪ್ಪ, ಅಣ್ಣಾರಾವ್ ಗಣಮುಖಿ, ವೀರಣ್ಣ ತಿಮ್ಮಾಜಿ, ನಾರಾಯಣರಾವ್ ಕಾನಿಹಾಳ್, ವೀರನಗೌಡ ಹುಲು ಗುಂಚಿ, ಭಾವೂ ಸಾಹೇಬ್ ದೇವಳಗಾಂವಕರ್, ವಾಸುದೇವ ದೀಕ್ಷಿತು, ವಿ.ಪಿ. ದೇವುಳಗಾಂವಕರ್, ಪರಮಣ್ಣ ಬಿಳವಾರ, ಅನಂತಶರ್ಮ ಚಿಂಚೋಳಿ, ಭಗವನರಾವ್, ಕಿಶನ್‌ರಾವ್, ಡಿ.ಬಿ.ಕಲ್ಮಣಕರ್ ಮತ್ತಿತರ ಸಾವಿರಾರು ಮಂದಿ ನಾಯಕರು ನಮಗೆ ಪೂಜನೀಯರು.


ಶರಣಗೌಡ ಇನಾಂದಾರ್

ರಜಾಕಾರರ ಹಾವಳಿಯನ್ನು ಹತ್ತಿಕ್ಕಲು ಜನತೆಯ ಬಲಕ್ಕೆ ಸಾಧ್ಯವಾಗಲಿಲ್ಲ. ಘನಘೋರ ರಕ್ತಪಾತ ಪ್ರಾರಂಭಿಸಿದ ನಿಜಾಮನ ಹುಟ್ಟಡಗಿಸಲು ಆಗಿನ ಗೃಹಮಂತ್ರಿಯಾದ ಸರ್ದಾರ್ ವಲ್ಲಭಭಾಯಿ ಪಟೇಲ್ ಅವರಿಗೆ ಮನವಿ ಸಲ್ಲಿಸಿದರು. ಭಾರತ ಒಕ್ಕೂಟವನ್ನು ಸೇರಲು ನಿರಾಕರಿಸಿದ ಸಂಸ್ಥಾನಿಕರಲ್ಲಿ ಜುನಾಗಡ ಹಾಗೂ ಹೈದರಾಬಾದ್ ಪ್ರಾಂತಗಳು ಮಾತ್ರ ಇದ್ದು ಕೆಲವು ದಿನಗಳ ನಂತರ ಜುನಾಗಢ ವಿಲೀನಗೊಂಡಿತು. ಹೈದರಾಬಾದ್ ಮಾತ್ರ ತನ್ನ ಅಚಲ ನಿರ್ಧಾರಕ್ಕೆ ಅಂಟಿಕೊಂಡಿತ್ತು. ಅಮಾಯಕರ ಹತ್ಯೆ, ಕೊಲೆ, ಸುಲಿಗೆ, ಲೂಟಿ ದಂಗೆಗಳಿಂದ ರೋಸಿ ಹೋಗಿದ್ದ ಹೈದರಾಬಾದ್ ಸಂಸ್ಥಾನವನ್ನು ಭಾರತ ಒಕ್ಕೂಟದೊಡನೆ ವಿಲೀನಗೊಳಿಸಲು ಸರ್ದಾರ್

### ತಡವಾಗಿ ಬಂದ ಸ್ವಾತಂತ್ರ್ಯದ ಫಲವೆ ?

| | ಉದ್ಯೋಗ ವಿನಿಮಯ ಕಚೇರಿ | ನ್ಯಾಯಬೆಲೆ ಅಂಗಡಿಗಳು | ಪೊಲೀಸ್ ಠಾಣೆ | ಪಶುವೈದ್ಯ ಶಾಲೆ | ಬ್ಯಾಂಕ್‌ಗಳು | ಸಾರಿಗೆ ರಾಷ್ಟ್ರೀಯ ಹೆದ್ದಾರಿ | ಪ್ರಾಥಮಿಕ ಶಾಲೆಗಳು | ಪಾಲಿಟೆಕ್ನಿಕ್ | ಬಿಎಡ್ | ಬಿಪಿಎಡ್ | ಪ್ರಾಥಮಿಕ ಆರೋಗ್ಯ ಕೇಂದ್ರ |
|---|---|---|---|---|---|---|---|---|---|---|---|
| ಬೆಂಗಳೂರು ವಿಭಾಗ | 12 | 6798 | 364 | 50 | ವಾಣಿಜ್ಯ 1076 ಗ್ರಾಮೀಣ 484 | ಕೀ.ಮಿ 638 | 15978 | 84 | 41 ದಕ್ಷಿಣ | 80 | 409 |
| ಮೈಸೂರು ವಿಭಾಗ | 08 | 4480 | 271 | 44 | ವಾಣಜ್ಯ 918 ಗ್ರಾಮೀಣ 484 | 406 | 11035 | 29 | ಕರ್ನಾಟಕ | | 460 |
| ಬೆಳಗಾವಿ ವಿಭಾಗ | 07 | 4498 | 251 | 47 | ವಾಣಿಜ್ಯ 605 ಗ್ರಾಮೀಣ 319 | 953 ಉತ್ತರ ಕರ್ನಾಟಕ | 9410 | 37 | ಉತ್ತರ ಕರ್ನಾಟಕ | | 370 |
| ಕಲಬುರ್ಗಿ ವಿಭಾಗ | 06 | 3674 | 185 | 32 | ವಾಣಿಜ್ಯ 292 ಗ್ರಾಮೀಣ 274 | - | 6072 | 23 | 24 | 46 | 270 |
| ರಾಜ್ಯದಲ್ಲಿ ಒಟ್ಟು | 33 | 19450 | 1071 | 173 | ವಾಣಿಜ್ಯ 2891 ಗ್ರಾಮೀಣ 1077 | 1997 | 42495 | 173 | 65 | 126 | 1509 |

ಪಟೇಲರು 10.9.1948ರಂದು ದಿಟ್ಟ ತೀರ್ಮಾನ ಕೈಗೊಂಡರು. ನಿಜಾಮನ ಶರಣಾಗತಿಗೆ ಸೇನೆಯ ಕಾರ್ಯಾಚರಣೆ ಅಗತ್ಯವೆಂದು ಮನಗಂಡು ಸೆಪ್ಟಂಬರ್ 13, 1948ರಂದು ಜನರಲ್ ಜೆ.ಎನ್. ಚೌಧರಿ ಅವರ ನಾಯಕತ್ವದಲ್ಲಿ ಸೇನೆ ಮುತ್ತಿಗೆ ಕಾರ್ಯ ಆರಂಭಿಸಿತು. ಆಂಧ್ರದ ಚಾಂದ್, ಮಹಾರಾಷ್ಟ್ರದ ಸೋಲಾಪುರ ಹಾಗೂ ಬೆಜವಾಡ್, ಕರ್ನಾಟಕದ ಹೊಸಪೇಟೆ ಹೀಗೆ ನಾಲ್ಕು ಕಡೆಗಳಿಂದ ಏಕಕಾಲಕ್ಕೆ ಭಾರತೀಯ ಸೇನೆ ನಿಜಾಮ್ ಸಂಸ್ಥಾನಕ್ಕೆ ಮುನ್ನುಗ್ಗಿದ್ದವು. ನಿಜಾಮನ ಸೇನೆ ಹಾಗೂ ರಜಾಕಾರರು ಭಾರತದ ಸೇನೆಗೆ ಶರಣಾಗ ತೊಡಗಿದರು. ಸೆಪ್ಟಂಬರ್ 17ರಂದು ಸುಮಾರು 4 ಗಂಟೆಗೆ ಹೈದರಾಬಾದ್‌ನ್ನು ಆಕ್ರಮಿಸಿಕೊಂಡಿತು. ನಿಜಾಮನ ಆಗಿನ ಪ್ರಧಾನಮಂತ್ರಿ ಲಾಯಕ್ ಅಲಿ ತಮ್ಮ ಶರಣಾಗತಿಯನ್ನು ಸಾರಿದರು. ಇಡೀ ಹೈದರಾಬಾದ್ ಸಂಸ್ಥಾನ ಭಾರತೀಯ ಸೇನೆಯ ವಶವಾಯಿತು. ಸೆಪ್ಟಂಬರ್ 17, 1948 ರಂದು ಹೈದರಾಬಾದ್ ಪ್ರಾಂತವು ವಿಧಿವತ್ತಾಗಿ ಸ್ವತಂತ್ರ ಭಾರತದಲ್ಲಿ ಲೀನವಾಯಿತು. ದೇಶಭಕ್ತರ ವೀರೋಚಿತ ಹೋರಾಟದಿಂದ ಪೊಲೀಸ್ ರಾಜ್ಯವಾಗಿದ್ದ ಹೈದರಾಬಾದ್ ಪ್ರಾಂತ್ಯದಲ್ಲಿ ನಿಜಾಮನ ನಿರಂಕುಶ ಆಡಳಿತ ಕೊನೆಗೊಂಡು ಭಾರತದ ಒಕ್ಕೂಟದಲ್ಲಿ ಸಮಗ್ರತೆಯನ್ನು ಕಾಪಾಡುವ ಜವಾಬ್ದಾರಿ ಜನತೆಯ ಸರಕಾರದ ಉದಯಕ್ಕೆ ನಾಂದಿ ಹಾಡಲಾಯಿತು.

**ತಡವಾಗಿ ಬಂತು !**

ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಎಲ್ಲವೂ ತಡವಾಗಿಯೇ! ಸ್ವಾತಂತ್ರ್ಯ ಲಭಿಸುವಲ್ಲಿಂದ ಉಂಟಾದ ವಿಳಂಬದಿಂದ ತೊಡಗಿ ಇಂದಿನ ಅಭಿವೃದ್ಧಿಯ ಕನಸುಗಳು ಕೂಡಾ ತಡವಾಗಿಯೆ ಮುಟ್ಟುತ್ತಾ ಇವೆ. ಉರ್ದು ಮತ್ತು ಮರಾಠಿ ಪ್ರಾಬಲ್ಯದ ಮಧ್ಯೆ ಕನ್ನಡ ಕೂಡಾ ಸೊರಗಿ ಹೋಗಿದೆ.

ಕನ್ನಡದ ಮೊಟ್ಟ ಮೊದಲ ಕೃತಿ 'ಕವಿರಾಜ ಮಾರ್ಗ' ಕೃತಿಗೆ ಮೂಲ ನೆಲೆಯಾದ ಹಾಗೂ ಜನಭಾಷೆ ಕನ್ನಡದಲ್ಲಿ ವಚನ ರಚನೆಗೊಂಡು ವಿಶ್ವಸಾಹಿತ್ಯಕ್ಕೆ ಅನುಪಮ ಕಾಣಿಕೆ ನೀಡಿದ ಈ ಮಣ್ಣಿನಲ್ಲಿ ಕನ್ನಡಕ್ಕೆ ಈ ದುಸ್ಥಿತಿ ಬಂದು ಬಿಟ್ಟಿರುವುದು ದುರ್ದೈವ!

ಭಾಲ್ಕಿ ಮಠದ ಚನ್ನಬಸವ ಪಟ್ಟದ್ದೇವರು ಬೀದರ್‌ನ ನಾರಾಯಣಖೇಡ ತಾಲೂಕದ ಮೋರಗಿಯಲ್ಲಿ 1936ರಲ್ಲಿ ಕನ್ನಡ ಶಾಲೆ ಆರಂಭಿಸಿ ಕನ್ನಡ ಕಲಿಕೆಗೆ ನಾಂದಿಹಾಡಿದರು. ಹೊರಗಡೆ ಉರ್ದು ನಾಮಫಲಕ ತೂಗು ಹಾಕಿ ಒಳಗೆ ಕನ್ನಡ ಪಾಠ ಪ್ರವಚನ ನಡೆಸಿದರು. ಕಲಬುರ್ಗಿಯಲ್ಲಿ ಪೂಜ್ಯ ದೊಡ್ಡಪ್ಪ ಅಪ್ಪ ಅವರು 1918ರಲ್ಲಿ ಶರಣಬಸವೇಶ್ವರ ವಾಚನಾಲಯ ಹಾಗೂ 1924ರಲ್ಲಿ ಹೆಣ್ಣು ಮಕ್ಕಳ ಸಲುವಾಗಿ ಮಹಾದೇವಿ ಕನ್ನಡ ಶಾಲೆ ಆರಂಭಿಸಿ ಕನ್ನಡ ಕಟ್ಟುವ ಕೆಲಸ ಮಾಡಿದರು. ಬಾಲಗಂಗಾಧರ ತಿಲಕರ ಸ್ವರಾಜ್ಯ ಮತ್ತು ರಾಷ್ಟ್ರೀಯ ಶಿಕ್ಷಣದ ಹೆಗ್ಗುರುತಾಗಿ ನೂತನ ವಿದ್ಯಾಲಯ ಸಂಸ್ಥೆ ಕೂಡಾ ಕನ್ನಡದ ಕೆಲಸಕ್ಕೆ ತನ್ನದೇ ಆದ ಕೊಡುಗೆ ನೀಡಿತು. ಸುಮಾರು 100 ವರ್ಷಗಳ ಕನಿಷ್ಠಾವಧಿಯಲ್ಲಿ ಮತ್ತೆ ಕನ್ನಡ ಈ ಮಣ್ಣಿನಲ್ಲಿ ಬೆಳಗಿದೆ. ಉರ್ದು, ಮರಾಠಿ ಸೋದರ ಭಾಷೆಯಾಗಿ ಕನ್ನಡದ ಜತೆ ಮಿಳಿತಗೊಂಡಿದೆ. ಹೈದರಾಬಾದ್ ಕರ್ನಾಟಕದ ಕನ್ನಡ ತನ್ನದೇ ಸೊಗಡಿನಿಂದ ಕಂಪನ್ನು ಬೀರುತ್ತಿದೆ.

ಸ್ವಾತಂತ್ರ್ಯನಂತರದ ಪ್ರಾದೇಶಿಕ ಅಸಮತೋಲನಕ್ಕೆ ಹೈದರಾಬಾದ್‌ಕರ್ನಾಟಕ ಪ್ರದೇಶವೂ ಹೊರತಾಗಿಲ್ಲ. ಹಿಂದುಳಿದ ಪ್ರದೇಶವೆಂಬ ಕೂಗು ನಿರಂತರ ಕೇಳಿಬರುತ್ತಿದೆ. ಇಲ್ಲಿನ ಭೂ ಅಭಿವೃದ್ಧಿಗೆ, ನೈಸರ್ಗಿಕ ಸಂಪನ್ಮೂಲಗಳ ಬಳಕೆಗೆ, ಶೈಕ್ಷಣಿಕ ಗುಣಮಟ್ಟದ ವಿಕಾಸಕ್ಕೆ ನೀರಾವರಿ ಯೋಜನೆಗಳಿಗೆ, ಆರೋಗ್ಯ ಸುಧಾರಣೆಗೆ, ವೃತ್ತಿ ಶಿಕ್ಷಣದ ಪ್ರಗತಿಗೆ, ಸಾರಿಗೆ ಸಂಪರ್ಕದ ಅನುಕೂಲತೆಗೆ, ಇನ್ನೂ ಕಾಯಬೇಕಾಗಿದೆ. 1993-94ನೇ ಅಂಕಿ ಅಂಶದಂತೆ ಬೆಂಗಳೂರು ವಿಭಾಗದ ಒಬ್ಬ ವ್ಯಕ್ತಿಯ ತಲಾ ಆದಾಯ ರೂ. 8066, ಮೈಸೂರು ವಿಭಾಗದಲ್ಲಿ ರೂ.7655, ಬೆಳಗಾವಿ ವಿಭಾಗದಲ್ಲಿ ರೂ. 6494, ಕಲಬುರ್ಗಿ ವಿಭಾಗ ರೂ. 5703, ಹೀಗೆ ಕೊನೆಯ ಸ್ಥಾನ ಎಲ್ಲದರಲ್ಲೂ! ಕರ್ನಾಟಕದ 1 ಕೋಟಿ 3 ಲಕ್ಷ ಹೆಕ್ಟೇರ್ ಬರ ಪ್ರದೇಶದಲ್ಲಿ ಶೇಕಡಾ 75 ರಷ್ಟು ಭಾಗ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿದೆ ! ಮಹತ್ವಾಕಾಂಕ್ಷೆಯ ಕೃಷ್ಣಾ ನೀರಾವರಿ ಯೋಜನೆ ಪೂರ್ಣಗೊಂಡರೆ 30 ದಶಲಕ್ಷ ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಸೌಲಭ್ಯ ದೊರೆಯುವುದು. ಆದರೆ ಈ ವರೆಗೆ ಸುಮಾರು 8 ದಶಲಕ್ಷ ಹೆಕ್ಟೇರ್ ಮಾತ್ರ ನೀರಾವರಿ ಲಭ್ಯವಾಗಿದೆ, ಕೃಷ್ಣೆಯ ಮಡಿಲು ಹಸಿರುಡುಗೆಯಿಂದ ರಾರಾಜಿಸುವುದೆಂತು?

ತಡವಾಗಿ ಬಂದ ಸ್ವಾತಂತ್ರ್ಯದ ಸುವರ್ಣ ಮಹೋತ್ಸವ ಆಚರಿಸುವ ಹೈದರಾಬಾದ್ ಕರ್ನಾಟಕ ಪ್ರದೇಶದ ಜನತೆ, ಸ್ಥಿತಪ್ರಜ್ಞರಾಗಿ ಶಾಂತಿ ಸ್ವರೂಪದ ಮೂರ್ತಿಗಳಾಗಿ ಆಶಾಭರಿತ ಕಣ್ಣುಗಳಿಂದ ನೋಡುತ್ತಿದ್ದಾರೆ. ಇಲ್ಲಿ ಕೇಳಿ ಬರುವ ಭುಲಾಯಿ ಪದದ ಸಾಲು

**ಸತ್ಯಲಿಂದು ಸ್ವರಾಜ್ಯ ಗೆದ್ದು**
**ಹಿಂದುಸ್ಥಾನ ಕುಂತಿತು ಎದ್ದು।**
**ಜಾತಿ ಧರ್ಮ ಎಂದು ಇಟ್ಟಿಲ್ಲ**
**ಭೇದು, ಕೋಲೆಣ್ಣ ಕೋಲ।**

■



# ಸಂವೇದನೆ

■ ಎಂ. ಎಸ್. ಮೂರ್ತಿ

## ನೊಂದು ಬೆಂದವರು

**ಈಗಲೂ ಒಮ್ಮೊಮ್ಮೆ ಆ ಮುಚ್ಚಿದ ಅಂಗಡಿ ಕಡೆ ನೋಡುತ್ತಿರುತ್ತೇನೆ. ಆ ಹುಡುಗರು ಎಲ್ಲೋ ಬೇಯುತ್ತಿರಬಹುದು - ಉರಿವ ಸ್ಟೌವ್, ಕುದಿಯುವ ಎಣ್ಣೆಯ ಮುಂದೆ.**

'**ಯಾ**ವುದನ್ನೂ ಸಾವಧಾನವಾಗಿ ನೋಡಿ, ಗ್ರಹಿಸಿ, ಮನನ ಮಾಡಿಕೊಂಡು ಪ್ರಶ್ನಿಸುವ ಮೂಲಕ ಪ್ರತಿಕ್ರಿಯಿಸಬೇಕು' ಎಂದು ನನ್ನ ಮಗನಿಗೆ ಶಾಲೆ ಸೇರುವ ಸಂದರ್ಭದಲ್ಲಿ ಹೇಳಿದ್ದೆ. ಈಗಲೂ ಅದೇ ಅರ್ಥ ಬರುವ ಮಾತನ್ನು ಬೇರೆ ರೀತಿಯಲ್ಲಿ ಹೇಳುತ್ತಿರುತ್ತೇನೆ. ಸೂಕ್ಷ್ಮವಾಗಿ ನೋಡುವುದು, ಅರ್ಥಮಾಡಿಕೊಳ್ಳುವುದು ಈ ಮೂರು ಕ್ರಮಗಳು ನಮ್ಮ ಬದುಕಿನ ಎಲ್ಲ ಅರಿವಿಗೂ ತುಂಬಾ ಮುಖ್ಯ ಎಂದು ನನ್ನ ನಂಬಿಕೆ. ಯಾಕೆಂದರೆ ಈ ಪ್ರಕ್ರಿಯೆ ಮೂಲಕ ಮನುಷ್ಯರನ್ನೂ ಕಾಣಬಹುದು.

ತುಂಬಾ ಬುದ್ಧಿವಂತನೇನೂ ಅಲ್ಲದ, ಹಾಗೇ ದಡ್ಡ ಎನಿಸಿಕೊಳ್ಳದ ನನ್ನ ಮಗ ತೀರಾ ಸಾಮಾನ್ಯ ಜ್ಞಾನದ ಸಣ್ಣ ಹುಡುಗ. ನನ್ನೊಂದಿಗೆ ಹೆಚ್ಚು ಸುತ್ತಾಡುವ ಅವನಿಗೆ ನನ್ನ ಅಭಿರುಚಿಗಳು ಇಷ್ಟ-ಅನಿಷ್ಟಗಳೆಲ್ಲದರ ಬಗ್ಗೆ ಪರಿಚಯವಿದೆ; ರಸ್ತೆಯಲ್ಲಿ ಉಗುಳುವವರೊಂದಿಗೆ ನಾನು ಜಗಳ ವಾಡುವುದನ್ನು ತಮಾಷೆಯಾಗಿ ನೋಡುತ್ತಲೇ ನನ್ನ ಎಲ್ಲಾ ನಡಾವಳಿಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ.

ಒಂದು ದಿನ ನಾವು ವಾಸಿಸುವ ಬಡಾವಣೆಯ ಮುಖ್ಯ ರಸ್ತೆಯಲ್ಲಿ ಒಂದು ಹೊಸ ಅಂಗಡಿ ಪ್ರಾರಂಭವಾಯಿತು. ಅದನ್ನು ಪ್ರಾರಂಭಿಸಿದವರು ಸಣ್ಣ ವಯಸ್ಸಿನ ಇಬ್ಬರು ಮಲಯಾಳೀ ಯುವಕರು. ಇಬ್ಬರೂ ಅಣ್ಣ, ತಮ್ಮಂದಿರು. ಅಣ್ಣ ಖಾರದ ತಿಂಡಿ ತಯಾರಿಸುವ ನಿಪುಣ. ಎಲ್ಲೋ ಕೆಲಸ ಮಾಡುತ್ತಿದ್ದವರು ಬಿಟ್ಟು ಬಂದು ಸ್ವಲ್ಪ ಬಂಡವಾಳ ಹಾಕಿ ಈ ಸಣ್ಣ ಖಾರದ ತಿಂಡಿಗಳ ಅಂಗಡಿಯನ್ನು ತೆರೆದಿದ್ದರು. ಅಣ್ಣ ಆಲೂಗಡ್ಡೆ ಚಿಪ್ಸ್, ಚೌಚೌ ಮತ್ತು ಇತರೆ ಖಾರದ ಕುರುಕು ತಿಂಡಿಗಳನ್ನು ತಯಾರಿಸಿದರೆ, ಅಂಗಡಿಯಲ್ಲಿ ನಿಂತು ಅವುಗಳನ್ನು ಪ್ಯಾಕ್ ಮಾಡಿ ಮಾರಾಟ ಮಾಡುತ್ತಿದ್ದವನು ಸಣ್ಣವನು. 5 X 5 ಅಡಿಯ, ಇಬ್ಬರು ಮಾತ್ರ ನಿಲ್ಲಬಹುದಾದಷ್ಟು ಜಾಗ ಇರುವ ತೀರಾ ಸಣ್ಣದಾದ ಆ ಪುಟ್ಟ ಅಂಗಡಿಯನ್ನು ಕುರುಕು ತಿಂಡಿ ತುಂಬಿದ್ದ ಷೋಕೇಸ್ ಪೂರ್ತಿಯಾಗಿ ಆವರಿಸಿಕೊಂಡಿತ್ತು. ಅದರ ಹಿಂದೆ ನಿಂತೇ ಉತ್ಸಾಹದಿಂದ ಅವನ ತಮ್ಮ ವ್ಯಾಪಾರ ಮಾಡುತ್ತಿದ್ದ.

ಅಂಗಡಿಯ ಮುಂದೆ ಫುಟ್‌ಪಾತ್‌ನಲ್ಲೇ ಒಂದು ಸ್ಟೌವ್. ಅದರ ಮೇಲೆ ದೊಡ್ಡ ಬಾಣಲೆಯಲ್ಲಿ ಕುದಿವ ಎಣ್ಣೆಗೆ ಚಕಚಕನೆ ಆಲೂಗಡ್ಡೆಯನ್ನು ತುರಿಯುತ್ತಿದ್ದ. ಅರ್ಧಗಂಟೆಯಲ್ಲಿ ಗರಿಗರಿಯಾದ 'ಚಿಪ್ಸ್' ತಯಾರಾಗುತ್ತಿತ್ತು ಮತ್ತು ಅರ್ಧ ಗಂಟೆಯಲ್ಲೇ ಖಾಲಿಯಾಗುತ್ತಿತ್ತು. ರಸ್ತೆಯಲ್ಲೇ ತಯಾರಿಸಿ ವಿಭಿನ್ನವಾಗಿ ವ್ಯಾಪಾರ ಮಾಡುವ ಅವನ ಕ್ರಮದಿಂದಲೋ ಆ ಸ್ಟೌವ್‌ನ ಶಬ್ದದಿಂದಲೋ ಅಥವಾ ಆ ಯುವಕರು ತಯಾರಿಸುವ ರುಚಿಯಾದ, ತಾಜಾ ಕುರುಕು ತಿಂಡಿಗಳಿಂದಲೋ ಹೆಚ್ಚು ಜನರು ವ್ಯಾಪಾರ ಮಾಡುತ್ತಿದ್ದರು. ಬಹು ಬೇಗ ಆ ಮಲಯಾಳೀ ಹುಡುಗರು ಇಡೀ ಬಡವಾಣೆಯಲ್ಲಿ ಪ್ರಖ್ಯಾತರಾದರು.

ಅನೇಕ ವರ್ಷಗಳಿಂದ ನಾವು ಅಲ್ಲಿ ವಾಸವಾಗಿದ್ದರೂ ಈ ಹಿಂದೆ ಆ ಸಣ್ಣ ಅಂಗಡಿಯ ಬಾಗಿಲು ತೆರೆದದ್ದನ್ನೂ ಕಂಡಿರಲಿಲ್ಲ. ಯಾವುದಕ್ಕೂ ಉಪಯೋಗವಾಗದಂತಿದ್ದ ಅಂಗಡಿಯೆನ್ನುವ ಆ ಜಾಗವನ್ನು ಸರಿಯಾದ ವ್ಯಾಪಾರಕ್ಕೆ ಆರಸಿ ಸೂಕ್ತವಾಗಿ ಬಳಸಿಕೊಂಡಿದ್ದರು; ಅಲ್ಲಿ ಯಶಸ್ವಿಯಾಗಿ ವ್ಯಾಪಾರ ಕುದುರಿಸಿದ ಆ ಯುವಕರಿಂದ ಕತ್ತಲು ಕತ್ತಲಾಗಿದ್ದ ಆ ಮೂಲೆ ಶುಚಿಯಾಗಿ, ಸಂಜೆಯಲ್ಲಿ ಬೆಳಕು ಕಂಡು ವಾತಾವರಣದಲ್ಲಿ ಚಟುವಟಿಕೆ ಕಾಣುತ್ತಿತ್ತು.



ಸಣ್ಣವನು ಬೆಳಗಿನಿಂದಲೇ ಅಂಗಡಿ ತೆರೆದು ವ್ಯಾಪಾರ ಪ್ರಾರಂಭಿಸುತ್ತಿದ್ದ. ಕನ್ನಡ ಭಾಷೆ ತಿಳಿಯದಿದ್ದರೂ ತನ್ನ ನಗುವಿನಿಂದಲೇ ಗಿರಾಕಿಗಳನ್ನು ಸೆಳೆಯುತ್ತಿದ್ದ. ಅದೃಷ್ಟವೆಂಬಂತೆ ಸಂಜೆ ಹೊತ್ತಿಗೆ ಎಲ್ಲ ತಿಂಡಿಗಳು ಖಾಲಿಯಾಗುತ್ತಿತ್ತು. ಬೆಳಿಗ್ಗೆ ಮಾರುಕಟ್ಟೆಯಿಂದ ಸಾಮಾನು ತಂದು,

ಸಂಜೆಗೆ ತಿಂಡಿಗಳ ತಯಾರಿಗೆ ಅಣ್ಣ ಟೊಂಕ ಕಟ್ಟಿ ನಿಲ್ಲುತ್ತಿದ್ದ. ಕುದಿಯುವ ಎಣ್ಣೆಯ ಬಾಣಲೆಗೆ ಅವನು ಆಲೂಗಡ್ಡೆಯನ್ನು ತುರಿಯುವ ಕೌಶಲ್ಯವನ್ನು ಅನೇಕರು ನಿಂತು ನೋಡುತ್ತಿದ್ದರು. ನಾನೂ ಅನೇಕ ಸಾರಿ ನಿಂತು ನೋಡಿದ್ದೆ. ಬಿಸಿ ಬಿಸಿಯಾದ ಚಿಪ್ಸ್ ತಯಾರಾಗಿ ಅಂಗಡಿಯ ಒಳಗೆ ಬರುವುದೇ ತಡ ಉಪ್ಪು -ಖಾರ ಉದುರಿಸಿದ ಗರಿಗರಿಯಾದ 'ಚಿಪ್ಸ್' ಕ್ಷಣದಲ್ಲಿ ಮಾರಾಟವಾಗುತ್ತಿತ್ತು. ನಾಲ್ಕೈದು ಗಂಟೆಗಳ ಕಾಲ ಕುದಿವ ಎಣ್ಣೆಯ ಮುಂದೆ ನಿಂತು ತಪಸ್ಸಿನಂತೆ, ಶ್ರದ್ಧೆಯಿಂದ ತನ್ನ ಕೆಲಸ ಮಾಡುತ್ತಿದ್ದ ಹುಡುಗನನ್ನು ಅನೇಕ ಬಾರಿ ಕುತೂಹಲದಿಂದ ಗಮನಿಸಿದ್ದೆ ; ಅವನಲ್ಲಿ ಒಬ್ಬ ನುರಿತ ಕಲಾವಿದನ ಕುಶಲತೆ ಮತ್ತು ಜೀವನೋತ್ಸಾಹ ಎದ್ದು ಕಾಣುತ್ತಿತ್ತು.

ಹೀಗೆ ಒಂದು ವರ್ಷ ಕಳೆಯಿತೇನೋ. ಒಂದು ದಿನ ಇದ್ದಕ್ಕಿದಂತೆ ಆ 'ಖಾರದ ತಿಂಡಿಗಳ' ಅಂಗಡಿ ಮುಚ್ಚಿತ್ತು. ಕಾರಣ ತಿಳಿಯದೇ ಸುಮ್ಮನಾಗಿದ್ದೆ. ಒಂದೆರಡು ತಿಂಗಳುಗಳ ನಂತರ ಸ್ವಲ್ಪ ದೂರದಲ್ಲೇ ಇನ್ನೊಂದು ಅದೇ ರೀತಿಯ 'ಖಾರ ತಿಂಡಿಗಳ' ಅಂಗಡಿ ತೆರೆಯಿತು. ಆಶ್ಚರ್ಯದ ಸಂಗತಿಯೆಂದರೆ ಆ ಅಂಗಡಿ ತೆರೆದವರು ಇದೇ ಮಲಯಾಳೀ ಸೋದರರು ! ಒಂದೆರಡು ದಿನ ಗಮನಿಸಿದೆ. ಅಂಗಡಿಯಲ್ಲಿ ಅದೇ ಸಣ್ಣ ಹುಡುಗ ವ್ಯಾಪಾರಕ್ಕೆ ನಿಂತಿದ್ದ, ಷೋಕೇಸ್‌ನ ಹಿಂದೆ ಕೈ ಕಟ್ಟಿ ನಿಂತು ರಸ್ತೆಯ ಕಡೆಗೆ ನೋಡುತ್ತಿದ್ದ. ಹಳೆಯ ಅಂಗಡಿಗಿಂತಲೂ ತುಸು ದೊಡ್ಡದಾದ್ದ ಸ್ಥಳ. ಆದರೂ ಆ ಹುಡುಗನಲ್ಲಿ ಹಿಂದಿನ ಸಣ್ಣ ಅಂಗಡಿಯಲ್ಲಿದ್ದ ಅವನ ಮೊದಲ ಉತ್ಸಾಹ ಕಾಣಲಿಲ್ಲ. ನನ್ನ ಕುತೂಹಲ ಹೆಚ್ಚಾದಂತೆ ಅನೇಕ ಪ್ರಶ್ನೆಗಳು ನನ್ನನ್ನು ಕಾಡಿದವು. ಅಷ್ಟೊಂದು ಚೆನ್ನಾದ ವ್ಯಾಪಾರ ನಡೆಯುತ್ತಿದ್ದ ಅಂಗಡಿಯನ್ನು ಬಿಟ್ಟು ಇಲ್ಲಿಗೇಕೆ ಬಂದ ಅಥವಾ ಅಂಗಡಿ ಮಾಲೀಕ ಬಾಡಿಗೆ ಹೆಚ್ಚು ಮಾಡಿದನೇ ? ಕೊನೆಗೂ ಒಂದು ದಿನ ನನ್ನ ಈ ಎಲ್ಲಾ ಅನುಮಾನಗಳಿಗೆ ಉತ್ತರವೆಂಬಂತೆ ಆ ಹುಡುಗರು ವ್ಯಾಪಾರ ಪ್ರಾರಂಭಿಸಿ ಬಿಟ್ಟ ಹಳೆಯ ಅಂಗಡಿ ಮತ್ತೆ ತೆರೆಯಿತು. ಅದೇ ರೀತಿಯ ಷೋಕೇಸ್‌ನಲ್ಲಿ ಅದೇ ರೀತಿಯಲ್ಲಿ ಕುರುಕು ತಿಂಡಿಗಳು ಜೋಡಿಸಿದ್ದವು. ಆದರೆ ಅಲ್ಲಿ ಆ ಹುಡುಗರು ಇರಲಿಲ್ಲ. ಆ ಯುವಕರ ಏಳಿಗೆಯನ್ನು ಸಹಿಸದ, ಅಂಗಡಿಯ ಹಿಂದೆಯೇ ವಾಸಿಸುತ್ತಿದ್ದ ಅದರ ಮಾಲೀಕ ತನ್ನ ಕೆಟ್ಟ ಆಲೋಚನೆಯಿಂದ ಅವರನ್ನು ಬಿಡಿಸಿ ತಾನು ಅದೇ ವ್ಯಾಪಾರ ಪ್ರಾರಂಭಿಸಿದ್ದ. ದಿಕ್ಕು ಕಾಣದೆ ಅನಿರೀಕ್ಷಿತವಾದ ಆ ಪರಿಸ್ಥಿತಿಯನ್ನು ನಿಭಾಯಿಸಿ ಪಕ್ಕದಲ್ಲೇ ಮತ್ತೊಂದು ಅಂಗಡಿ ಹಿಡಿದಿದ್ದರು ಆ ಯುವಕರು. ಇದನ್ನು ತಿಳಿದು ಮನುಷ್ಯನ ಆಸೆಯ ಬಗ್ಗೆ ಯೋಚಿಸಿದಾಗ, ಮನುಷ್ಯ ಮತ್ತೊಬ್ಬನನ್ನು ಹಾಳು ಮಾಡಿ ಬದುಕುವ ಈ ರೀತಿಯ ದುರಾಸೆಯ ಬಗ್ಗೆ ಅಸಹ್ಯ ಎನಿಸಿತು; ಈ ಬಗೆಯ ಮೋಸ ನಾನು ಕಂಡಿರಲಿಲ್ಲ. ಅಕ್ಕಪಕ್ಕದಲ್ಲೇ ಎರಡು ಅಂಗಡಿಗಳು; ಸಂಜೆ ಎರಡು ಸ್ಟೌವ್‌ಗಳು ಉರಿಯುತ್ತಿದ್ದವು. ಮಲೆಯಾಳಿ ಹುಡುಗರು ಧೃತಿಗೆಡದೆ ತಮ್ಮ ಕೆಲಸವನ್ನು ಶ್ರದ್ಧೆಯಿಂದ ಮಾಡುತ್ತಿದ್ದರು. ತಾವು ಕಷ್ಟಪಟ್ಟು ಮಾಡಲು ಪ್ರಾರಂಭಿಸಿದ ಅಂಗಡಿ ಬೇರೆಯವರು ಕಸಿದುಕೊಂಡ ಬಗ್ಗೆ, ತಮ್ಮ ಅಸಹಾಯಕತೆ ಬಗ್ಗೆ



ಯೋಚಿಸದೆ ಮೌನವಾಗಿ ತಮ್ಮ ಮುಂದಿನ ಕೆಲಸ ನಿರ್ವಹಿಸುತ್ತಿದ್ದ ಆ ಯುವಕರ ಬಗ್ಗೆ ನನ್ನ ಮನಸ್ಸಿನಲ್ಲಿ ಅನುಕಂಪ ಮತ್ತು ಹೆಮ್ಮೆ ಮೂಡಿತ್ತು. ಎಂದಿನಂತೆ ಅಣ್ಣ ತಿಂಡಿ ಮಾಡುವುದು, ತಮ್ಮ ಮಾರಾಟ ಮಾಡುವುದು ನಡೆಯುತ್ತಿತ್ತು. ಆದರೆ ಅಲ್ಲಿ ಹಿಂದಿನ ಜೀವನೋತ್ಸಾಹ ಇರಲಿಲ್ಲ. ಅನಿರೀಕ್ಷಿತವಾಗಿ ಆದ ಮೋಸದಿಂದ ಅವರಿಗೆ ಆಘಾತವಾಗಿತ್ತು. ಆ ನೋವು ಯಾರಿಗೂ ಕಾಣಿಸದಂತೆ ತಮ್ಮ ಕೆಲಸದಲ್ಲಿ ತೊಡಗಿದ್ದರು.

ಇಲ್ಲಿ ಹಳೆಯ ಅಂಗಡಿಯ ಮಾಲೀಕ ಮಲಯಾಳೀ ಹುಡುಗನಂತೆ ಹೊಸ ಉತ್ಸಾಹದಲ್ಲಿ ಹೊರಗಡೆ ನಿಂತು 'ಚಿಪ್ಸ್' ಮಾಡುತ್ತಿದ್ದ. ಅವನ ಹೆಂಡತಿ ಅಂಗಡಿಯಲ್ಲಿ ನಿಂತು ವ್ಯಾಪಾರ ಮಾಡುತ್ತಿದ್ದಳು. ಯಾಕೋ ಅವರಿಬ್ಬರ ಮುಖಗಳು ನನಗೆ ಅನಿಷ್ಟದಂತೆ ಕಾಣುತ್ತಿತ್ತು.

ಈ ಅಂಗಡಿಗಳ ಬಗ್ಗೆ, ಮಲಯಾಳೀ ಸೋದರರ ಬಗ್ಗೆ ನಾನು ಮನೆಯಲ್ಲಿ ಮಾತಾಡಿದ್ದನ್ನು ಕೇಳಿಸಿಕೊಂಡಿದ್ದ ನನ್ನ ಮಗ ಆ ಬಗ್ಗೆ ಅನೇಕ ಪ್ರಶ್ನೆಗಳಿಂದ ನನ್ನನ್ನು ಕಾಡಿದ್ದ. ಸಂಕ್ಷಿಪ್ತವಾಗಿ ಈ ಬಗ್ಗೆ ಅವನಿಗೆ ಹೇಳಿದ್ದೆ. ಒಂದು ದಿನ 'ಚಿಪ್ಸ್' ತರಲು ನನ್ನ ಮಗನೊಂದಿಗೆ ಹೊರಟೆ. 'ನಾವು ಈಗ ಚಿಪ್ಸ್ ತರುವುದು ಎಲ್ಲಿಂದ ?' ಎಂದು ಪ್ರಶ್ನೆ ಹಾಕಿದ ನನ್ನ ಮಗನ ಪ್ರಶ್ನೆ ನನ್ನದೂ ಆಗಿತ್ತು. ಆ ಬಗ್ಗೆ ನಾನು ಯೋಚಿಸಿಯೇ ಇರಲಿಲ್ಲ. 'ನೀನೇ ಹೇಳು' ಎಂದೆ ಕುತೂಹಲದಿಂದ.

'ಆ ಹುಡುಗರ ಅಂಗಡಿಗೇ ಹೋಗೋಣ' ಎಂದ.

ನನಗೆ ಕುತೂಹಲ ಹೆಚ್ಚಾಗಿ 'ಯಾಕೆ, ಇನ್ನೊಂದು ಅಂಗಡಿ ಬೇಡ ?' ಎಂದೆ. 'ಅವರು ಗ್ರೀಡೀ ಪಿಗ್ಸ್' ಎಂದ. ನಾನು ಏನೂ ಹೇಳದೆ ಸುಮ್ಮನಾದೆ. ಹೀಗೇ ಮಾತನಾಡುತ್ತಾ ಅಂಗಡಿ ಹತ್ತಿರ ಬಂದೆವು. ನಮಗೆ ಮತ್ತೊಂದು ಆಶ್ಚರ್ಯ ಕಾದಿತ್ತು. ಆ ಮಾಲಯಾಳೀ ಹುಡುಗರ ಅಂಗಡಿ ಮುಚ್ಚಿತ್ತು ! ಇದು ನಮ್ಮಿಬ್ಬರಿಗೂ ಅನಿರೀಕ್ಷಿತ. ಬಹುಶಃ ಇನ್ನು ತೆರೆಯಲಾರದು ಎಂದು ಅನಿಸಿ ಪಕ್ಕಕ್ಕೆ ತಿರುಗಿದೆ. ಪಕ್ಕದ ಅಂಗಡಿಯಲ್ಲಿ ದೊಡ್ಡ ಕಾರ್ಖಾನೆಯಂತೆ ಉರಿಯುವ ಸ್ಟೌವ್ ದೊಡ್ಡ ಶಬ್ದ ಮಾಡುತ್ತಿತ್ತು. ಬಾಣಲೆ ತುಂಬಾ ಕುದಿಯುವ ಎಣ್ಣೆಗೆ ಆ ಅಂಗಡಿ ಮಾಲೀಕ ಕೆಟ್ಟ ಉತ್ಸಾಹದಲ್ಲಿ ಆಲೂಗಡ್ಡೆ ತುರಿಯುತ್ತಿದ್ದ. ಇದೆಲ್ಲದರ ಯಾವ ವ್ಯತ್ಯಾಸವನ್ನು ತಿಳಿಯದ ಜನರು ಚಳಿಯಲ್ಲಿ ಉಪ್ಪು-ಖಾರ ಹಾಕಿದ್ದ 'ಚಿಪ್ಸ್'ನ್ನು ಖಾರದ ತಿಂಡಿಗಳನ್ನು ಕೊಳ್ಳುತ್ತಿದ್ದರು.

ಅಲ್ಲಿ 'ಚಿಪ್ಸ್' ತೆಗೆದುಕೊಳ್ಳುವುದಕ್ಕೆ ನನ್ನ ಮಗ ಒಪ್ಪಲಾರನೆಂದು ತಿಳಿದಿದ್ದರೂ ಕೇಳಿದೆ. 'ಬೇಡ !' ಎಂದ. ಆ ಮಲೆಯಾಳೀ ಹುಡುಗರು ಎಲ್ಲಿ ಹೋಗಿರಬಹುದು ಎಂದು ಆಲೋಚಿಸುತ್ತಾ ಬರಿಗೈಯಲ್ಲಿ ಖೇದದಿಂದ ಮನೆಗೆ ನಡೆದೆವು.

ಈಗಲೂ ಒಮ್ಮೊಮ್ಮೆ ಆ ಮುಚ್ಚಿದ ಅಂಗಡಿ ಕಡೆ ನೋಡುತ್ತಿರುತ್ತೇನೆ. ಆ ಹುಡುಗರು ಎಲ್ಲೋ ಬೇಯುತ್ತಿರಬಹುದು- ಉರಿವ ಸ್ಟೌವ್, ಕುದಿಯುವ ಎಣ್ಣೆಯ ಮುಂದೆ. ■

## ಪ್ರೇಮಿ

ಅವಳ ನಂಬಿ
ಪ್ರೀತಿಸಿ ಮನೆ ಬಿಟ್ಟೆ.
ಹಾಕಿಸಿದ ನೋಡಿ
ಅವಳಪ್ಪ ಕೈಗೆ ಬೇಡಿ
ಈಗ ನೋಡಿ
ಕೈಯಲ್ಲೊಂದು ಕಟ್ಟು ಬೀಡಿ.

-ಶಿವರಾಜಮ್ಮ



# ಶಿಖರ ಸಾಧನೆ ಮಾಡಿದ ಪ್ರೊ. ಹಿರೇಮಲ್ಲೂರ ಈಶ್ವರನ್

**ಹಿಂದಿನ ಸಂಚಿಕೆಯಲ್ಲಿ ಮನುಷ್ಯನ ಶಿಖರ ಸಾಧನೆಗೆ ಕಾರಣವಾಗುವ ಸಪ್ತ ಸೂತ್ರಗಳನ್ನು ವಿವರಿಸಿದ ಬಸವರಾಜ ಪುರಾಣಿಕ ಅವರು ಈ ಬಾರಿ ಇಂಥ ಸಾಧನೆ ಮಾಡಿದ ವ್ಯಕ್ತಿಯ ನಿದರ್ಶನವನ್ನು ಮುಂದಿಟ್ಟಿದ್ದಾರೆ.**

ಮಾನವ ಕಾಯದಲ್ಲಿ ಅಕಾಯವಾಗಿ ನೆಲೆಸಿರುವ ಮನ ಅವನ ಜೀವನದ ಏಕೈಕ ಸಾಧನ. ಅದು ಕೆಲವರೊಂದಿಗೆ ಮಂಗಚೇಷ್ಟೆ ಮಾಡಿದರೆ, ಹಲವರನ್ನು ಸ್ವೈರದ ಕಾಡುಕುದುರೆಯಾಗಿ ಮಾಡಿ ಹಂಬಲಿಸುತ್ತದೆ. 'ಕೊಟ್ಟ ಕುದುರೆಯನೇರಲರಿಯದೆ ಮತ್ತೊಂದು ಕುದುರೆಯನೇರ ಬಯಸುವವರು ವೀರರೂ ಅಲ್ಲ, ಧೀರರೂ ಅಲ್ಲ' ಎಂದು ಅಲ್ಲಮಪ್ರಭು ಪರಿಹಾಸ್ಯ ಮಾಡಿರುವುದು ಇಂಥವರನ್ನೇ. ಮನವು ದೃಢಮನವಾದಾಗ ಅದು ನೆಗೆಯುವ ಎತ್ತರಗಳಿಗೆ ಎಲ್ಲೆ ಇಲ್ಲ; ಅದು ಇಳಿಯುವ ಆಳಗಳಿಗೆ ತಳಬುಡ ಇರುವುದಿಲ್ಲ; ಅದು ಹಡೆಯದ, ಪಡೆಯದ ಸಿದ್ಧಿ ಪ್ರಸಿದ್ಧಿಗಳು ಇಲ್ಲ. ಮನಕ್ಕೆ ಅಧಿಪತಿಯಾಗಿ ಬಾಳುವವರದೊಂದು ಕುಲ ಹಾಗೂ ಮನಕ್ಕೆ ಅಧೀನರಾಗಿ ಬದುಕುವವರಿನ್ನೊಂದು ಕುಲ ಎಂದು ಕವಿ ಸಿದ್ಧಯ್ಯ ಪುರಾಣಿಕ ಗುರುತಿಸಿದ್ದಾರೆ. ಮನ ವಾಳುವ ಜನಕ್ಕೆ ಅವರ ಕಾಯ ಕರ್ರನೆ ಕಂದಿದರೇನು? ಮಿರ್ರನೆ ಮಿಂಚಿದರೇನು? ಅದು ಅವರ ಮನೋಸಂಕಲ್ಪಕ್ಕೆ ಸಹಚರಿಯಾಗಿ, ಸಮಸಾಮಯಿಕವಾಗಿ, ಸಹಾಯಕ್ಕೆ ಸಿದ್ಧ ಇರುತ್ತದೆ. ಆದರೆ ಮನವಾಳ್ವ ಜನರು ಅಪರೂಪ.

ಧಾರವಾಡದಲ್ಲಿ ಜೂನ್ 23, 1998ರಂದು ನಿಧನ ಹೊಂದಿದ ಪ್ರೊ. ಹಿರೇಮಲ್ಲೂರ ಈಶ್ವರನ್ ಎಂದು ಪ್ರಸಿದ್ಧರಾಗಿದ್ದ ಪ್ರೊ. ಕೆ. (ಕರೆಗೌಡ್ರ) ಈಶ್ವರನ್ ಮನವಾಳುವ ಜನರ ಪ್ರತಿನಿಧಿ ಆಗಿದ್ದರು. ಧಾರವಾಡ ಜಿಲ್ಲೆಯ ಕುಗ್ರಾಮವೊಂದರ ಈ ಹೈದ ಅಂತರ್‌ರಾಷ್ಟ್ರೀಯ ಖ್ಯಾತಿಯ ಸಾಮಾಜಿಕ ಮಾನವಶಾಸ್ತ್ರದ ಪಾರಂಗತನೆಂದು ಉತ್ತುಂಗ ಶಿಖರವನ್ನೇರಿದ. 'ಬ್ರಹ್ಮಬಲಂ ಬಲಂ ಬಲಂ' ಎನ್ನುವಂತೆ, ತನ್ನ ಮನೋಬಲದಿಂದ ಮೂಡಣ ದೇಶದ ಈ ಮಗು ಪಡುವಣ ದೇಶದ ಉಚ್ಚ ಶ್ರೇಣಿಯ ನಾಗರಿಕನಾದದ್ದು ಒಂದು ಯಶೋಗಾಥೆ ಆಗಿದೆ.

ಬೆಳಗಾವಿಯ ಲಿಂಗರಾಜ ಕಾಲೇಜಿನಲ್ಲಿ ಓದಿ ಎಂ.ಎ. (ಕನ್ನಡ) ಪದವಿಯನ್ನು ಪಡೆದಾಗಲೇ ಈಶ್ವರನ್‌ರ ಸಣ್ಣ ಸಣ್ಣ ಕನಸುಗಳ 'ಶಿವನ ಬುಟ್ಟಿ'ಗೆ ಕಿಡಿ ಬಿದ್ದಿತು. ತಾನು ನಿರೀಕ್ಷಿಸಿದ ಪ್ರಥಮ ದರ್ಜೆ (ಅದಕ್ಕೆ ಆತ ಅನರ್ಹನಿದ್ದನೆಂದು ಆತನ ವೈರಿ ಕೂಡ ನುಡಿಯಲಾರನು) ಕೈತಪ್ಪಿದಾಗ, ಆ ಕೊರತೆಯನ್ನು ತುಂಬಿಕೊಳ್ಳಲು ಈಶ್ವರನ್ 'ಹರಿಹರನ ರಗಳೆಗಳ ಸಂಖ್ಯಾ ನಿರ್ಣಯ' ಎಂಬ ಸಂಪ್ರಬಂಧ ಸಲ್ಲಿಸಿ ಪಿ.ಎಚ್.ಡಿ. ಪದವಿ ಗಳಿಸಿದರು.

ತಾನು ಲೇಖಕನಾಗಬೇಕೆಂದು ಛಲದಿಂದ ಬರೆಯಲಾರಂಭಿಸಿದ್ದ ಈಶ್ವರನ್ ಸಣ್ಣ ಸಣ್ಣ ವಾಕ್ಯಗಳಲ್ಲಿ ಅಂದಚೆಂದದ ಪದಬಂಧಗಳಲ್ಲಿ ದೇಸಿ ಸೊಗಡನ್ನು ಹಾಗೂ ಸೊಬಗನ್ನು ಸೆರೆಹಿಡಿದರು. ಮೋಹಕ ನುಡಿಯ ಮನೋಸ್ಪರ್ಶಕ ಶೈಲಿಯ ಬರಹಗಾರನೆಂದು ನಾಡಿನಲ್ಲೆಲ್ಲ ಹೆಸರು ಮಾಡಿದರು. 'ಶಿವನ ಬುಟ್ಟಿ' 'ವಿಷ ನಿಮಿಷಗಳು' 'ಕನ್ನಡ ತಾಯ್‌ನೋಟ' ಮೊದಲಾದ ಕೃತಿಗಳು ಹೊರಬಂದವು. ಜೊತೆಗೆ ಪತ್ರಿಕೆಗಳಿಗೆ ಅಂಕಣ ಬರೆದರು.

ಜೀವನೋಪಾಯಕ್ಕೆ ಆಯ್ದುಕೊಂಡಿದ್ದ ಶಿಕ್ಷಕ ವೃತ್ತಿಯಲ್ಲಿ ಉಪನ್ಯಾಸಕನಿಂದ ಪ್ರಿನ್ಸಿಪಾಲ ಹುದ್ದೆಯವರೆಗೆ ಬಡ್ತಿ ಹೊಂದಿದರು. ಈ ಎಲ್ಲಾ ಲಬ್ಧಿಗಳನ್ನು ಪಡೆದಿದ್ದರೂ, ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕ ಹುದ್ದೆಯ ಅವರ ಆಶೆ ಮರೀಚಿಕೆಯಾಗಿ ಪರಿಣಮಿಸಿತು. ಅಲ್ಲಿಗೆ, ಈಶ್ವರನ್‌ರ ಕಾಯ್ದು ನೋಡುವ ಸೈರಣೆ ಮುಗಿಯಿತು. ಇನ್ನೇನನ್ನೋ ಮಾಡಲೇಬೇಕೆಂಬ ಒತ್ತಡದ ಪ್ರೇರಣೆ ಕಾಡಿಸತೊಡಗಿತು. ಇಂಗ್ಲಿಷ್ ಭಾಷೆಯ ನಿಚ್ಚಣಿಕೆಯಿಂದ ತಮ್ಮ ಆಶೆಯ ಪರ್ವತವನ್ನು ಏರಬೇಕೆಂದು ಆ ಭಾಷೆಯ ಎಂ.ಎ. ವಿದ್ಯಾರ್ಥಿ ಸಹ ಆದರು.

ಆಗ, ಅವರ ಜೀವನದಲ್ಲಿ ಒಂದು ತಿರುವು ಮೂಡಿತು. ವಿದೇಶದಲ್ಲಿ, ಅದೂ ಆಕ್ಸಫರ್ಡ್ ವಿಶ್ವವಿದ್ಯಾಲಯದಲ್ಲಿ ಓದಲೇಬೇಕೆಂಬ ಅವರ ಅಹರ್ನಿಶಿ ಪ್ರಯತ್ನ ಫಲಿಸಿತು. ಅಲ್ಲಿ ಬಿ.ಲಿಟ್ ಪದವಿಗೆ ಅಧ್ಯಯನ ಕೈಗೊಳ್ಳಲು ಅವರಿಗೆ ಪ್ರವೇಶ ದೊರೆಯಿತು.

ತಾವು ಗಳಿಸಿದ್ದ ಪುಡಿಗಾಸಿಗೆ ಗೆಳೆಯರ ಹಾಗೂ ಹಿತೈಶಿಗಳ ಬಿಡಿಗಾಸು ಹಾಗೂ ಹಿಡಿಗಾಸುಗಳನ್ನು ಸೇರಿಸಿಕೊಂಡು ಈಶ್ವರನ್ ಮನದಲ್ಲಿ ಮುದವನ್ನು ಹಾಗೂ ಕಣ್ಣಲ್ಲಿ ಮಿಂಚನ್ನು ತುಂಬಿಕೊಂಡು ಆಕ್ಸಫರ್ಡ್‌ಗೆ ತೆರಳಿದರು. ಅಲ್ಲಿ 'ಮನುಸ್ಮೃತಿಯಲ್ಲಿ ಪಾತಕ ಹಾಗೂ ದಂಡನೆ' ಎಂಬ ಪ್ರಬಂಧ ಬರೆದರು. ಆ ಅವಧಿ ಅವರ ಬದುಕಿನಲ್ಲಿಯೇ ಅತ್ಯಂತ ಕ್ರೂರ ಕಾಲ. ಬಹಳಷ್ಟು ಎಡರು ತೊಡರುಗಳನ್ನು ಅನುಭವಿಸಬೇಕಾಯಿತು. ಯಾವುದಕ್ಕೂ ಕುಗ್ಗಲಿಲ್ಲ, ಬಗ್ಗಲಿಲ್ಲ, ಕೊರಗಲಿಲ್ಲ ಹಾಗೂ ಪ್ರಲಾಪಿಸಲಿಲ್ಲ. ಈಶ್ವರನ್‌ರ ಜಾಯಮಾನವೇ ಅಂತಹದು.

ತನ್ನವರೆಂಬ ಹುಲುಜೀವಿಗಳೂ ಸಹ ಇಲ್ಲದೆ ತಾಳಿ ಬಾಳಿದ ಈಶ್ವರನ್ ಹುಲ್ಲುಗಾವಲಿನ ನೆದರ್ ಲ್ಯಾಂಡ್‌ನಲ್ಲಿ ನೆಲೆ ಹುಡುಕಿದರು. ಸಾಮಾಜಿಕ ಮಾನವಶಾಸ್ತ್ರದ ವಿಸ್ಮಯಲೋಕದಲ್ಲಿ ಈ

**‘ನಿನಗೆ ಒಂದು ಮಾರ್ಗ ಇಲ್ಲದಿದ್ದರೆ, ಒಂದನ್ನು ಹುಡುಕು, ಅದು ಕೈಗೆ ಸಿಕ್ಕದಿದ್ದರೆ ನೀನೇ ಮಾರ್ಗವೊಂದನ್ನು ನಿರ್ಮಿಸಿಕೋ’**

‘ಕಲ್ಪನಾ’ ಪ್ರಿಯ ಈಶ್ವರನ್ ಧುಮ್ಮಿಕ್ಕಿದರು. ಅದೇ ತನ್ನ ಗತಿ, ಅದೇ ತನ್ನ ಮಿತಿ ಎಂದು ದಿನದ ಇಪ್ಪತ್ನಾಲ್ಕು ಗಂಟೆಗಳನ್ನು ಸವೆಯಿಸಿದರು. ಸಂತವಾದ ಹಾಗೂ ಸುಸಂಬದ್ಧವಾದ ಸಾಧನೆಗೆಯ್ದು ತಮ್ಮ ಸಿದ್ದಿ ಪಡೆದರು. ಎಂ.ಎ ಹಾಗೂ ಪಿ.ಎಚ್.ಡಿ. ಪದವಿಗಳೆರಡನ್ನೂ ಗಳಿಸಿದ ತೃಪ್ತಿಯ ಉಸಿರು ಬಿಟ್ಟರು. ತಮ್ಮ ಜೀವನದ ಹೊಸ ಅಧ್ಯಾಯವನ್ನು ಬರೆಯಲಾರಂಭಿಸಿದರು. ಅದಕ್ಕೆ ಪ್ರೇರಕಳಾಗಿ ನೆದರ್‌ಲ್ಯಾಂಡಿನ ಕನ್ನೆ ಈಶ್ವರನ್‌ರ ಸತಿಯಾದಳು.

ಭಾರತಕ್ಕೆ ಮರಳಿದ ಈಶ್ವರನ್ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸಾಮಾಜಿಕ ಮಾನವಶಾಸ್ತ್ರ ವಿಭಾಗದ ಮೊದಲ ಮುಖ್ಯಸ್ಥ ಹಾಗೂ ರೀಡರ್ ಎಂದು ನಿಯುಕ್ತರಾದರು. ಅವರ ದೈತ್ಯ ಮನೋಬಲದೊಂದಿಗೆ ಸಂಸಾರದ ಸತಿ ನೀಡಿದ ಭಾವಬಲವೂ ಸೇರಿದಾಗ ಈಶ್ವರನ್ ಅಲ್ಪ ಸಮಯದಲ್ಲಿಯೇ, ಭಾರತದಲ್ಲಿ. ಅಷ್ಟೇ ಏಕೆ? ವಿದೇಶಗಳಲ್ಲಿ ತಮ್ಮ ವಿಷಯದಲ್ಲಿ ಬೆರಗುಗೊಳಿಸುವಂತೆ ಹೆಸರು ಮಾಡಿದರು. ಹಲವು ಅಲ್ಪಮನದ ಸಹೋದ್ಯೋಗಿಗಳ ತಂತ್ರಗಾರಿಕೆ, ಹಾಗೂ ಅಂದಿನ ಕಪಿಮುಷ್ಟಿಯ ಆಡಳಿತ ಈಶ್ವರನ್‌ರಿಗೆ ಅಲ್ಲಿ ಬಹಳ ದಿನ ಇರಗೊಡಲಿಲ್ಲ. ಹಿಂದಿರುಗಿ ನೋಡಿ, ಹೊಂದಾಣಿಕೆ ಮಾಡಿಕೊಂಡು, ತನ್ನ ಬದ್ಧತೆಗಳನ್ನು ಬಲಿ ಕೊಡುವ ಜೀವಿಯಲ್ಲ ಈಶ್ವರನ್. ಬದುಕಿನ ಜೂಜಿನಲ್ಲಿ ಕೊನೆಯದೊಂದು ದಾಳ ಎಸೆದರು.

ಕೆನಡಾದ ಟೊರೊಂಟೊ ನಗರದಲ್ಲಿರುವ ಯಾರ್ಕ್ ವಿಶ್ವವಿದ್ಯಾಲಯವನ್ನು ಸೇರಿ ಅಲ್ಲಿಯೇ ಸ್ಥಾನಮಾನಗಳನ್ನು ಪಡೆಯುತ್ತ ನಿವೃತ್ತರಾದರೂ ಎಮಿರಟಿಸ್ ಪ್ರೊಫೆಸರ್ ಎಂದು ಸಂಬಂಧ ಹೊಂದಿದ್ದರು. ಹಲವಾರು ಉತ್ಕೃಷ್ಟ, ಸಂಶೋಧನಾತ್ಮಕ ಪತ್ರಿಕೆಗಳ ಸಂಪಾದನೆ, ಜಾಗತಿಕ ಮಟ್ಟದ ಸಮ್ಮೇಳನಗಳ ಅಧ್ಯಕ್ಷತೆ ಹಾಗೂ ವಿವಿಧ ವಿಷಯಗಳ ಕುರಿತ ಗ್ರಂಥ ರಚನೆ, ಸಂಪಾದನೆ ಹಾಗೂ ಪ್ರಕಾಶನಗಳಲ್ಲಿ ಈಶ್ವರನ್ ಮಗ್ನರಾಗಿದ್ದರು. ಇಂಗ್ಲೀಷಿನಲ್ಲಿ ಅವರು ಬರೆದ ಹಾಗೂ ಸಂಪಾದಿಸಿದ ಗ್ರಂಥಗಳು ಐವತ್ತಕ್ಕೂ ಹೆಚ್ಚು. ಅವುಗಳಲ್ಲಿ "Speaking of Basava' ಎಂಬ ಗ್ರಂಥ ಅವರಿಗೆ ಅಚ್ಚುಮೆಚ್ಚಾಗಿತ್ತು.

ವೃತ್ತಿಯಲ್ಲಿ, ಜೀವನದಲ್ಲಿ ಸಂಪತ್ತನ್ನು ಸಮೃದ್ಧಿಯನ್ನು ಗಳಿಸಿದರೂ ಸಹ ಈಶ್ವರನ್ ಧಾರವಾಡವನ್ನು ಮರೆಯಲಿಲ್ಲ. ಅಲ್ಲಿ ಅವರ ಚಿರಂತನ ಸ್ಫೂರ್ತಿ ‘ಕಲ್ಪನಾ’ ಹೆಸರಿನ ಮನೆ ಕಟ್ಟಿದರು. ವರ್ಷಕ್ಕೊಮ್ಮೆ, ಕೆಲವು ಸಲ ಅದಕ್ಕೂ ಹೆಚ್ಚು ಸಲ, ಅಲ್ಲಿಗೆ ಬಂದು ನೆಲೆಸುತ್ತಿದ್ದರು. ಕನ್ನಡದ ಕೈಂಕರ್ಯ ನೆರವೇರಿಸುತ್ತಿದ್ದರು. ‘ಬಸವೇಶ್ವರ ಹಾಗೂ ಲಿಂಗಾಯತ ಧರ್ಮ’ ‘ಲಿಂಗಾಯತ ಧರ್ಮ ಹಾಗೂ ಸಂಸ್ಕೃತಿ’ ಹಾಗೂ ‘ಕರ್ನಾಟಕದ ಮತಮಾನ್ಯಗಳು’ ಮೊದಲಾದ ಗ್ರಂಥಗಳನ್ನು ನವೀನ ದೃಷ್ಟಿಯಿಂದ ಬರೆದರು.

ತಮ್ಮ ಹುಟ್ಟಿನೊಂದಿಗೆ ಬಂದಿದ್ದ ಕಥನ ಕಲೆ ಈಶ್ವರನ್‌ರ ಜೀವನದಲ್ಲಿ ಬಹಳ ದಿನ ಗುಪ್ತಗಾಮಿನಿಯಾಗಿತ್ತು. ತಮ್ಮ ಮಗಳು ಅರುಂಧತಿಯ ಜೀವನದ ದುರಂತವನ್ನು ಕಂಡುಂಡ ಈಶ್ವರನ್‌ರಲ್ಲಿ ಆ ಕಲೆ ಪುನರಪಿ ಆವಿರ್ಭವಿಸಿ ‘ಅರುಂಧತಿ, ನನ್ನ ಮಗಳು’ ಎಂಬ ಕಾದಂಬರಿ ಬರೆಯಿಸಿತು. ತೀವ್ರವಾದ ಆದರೆ ಅಷ್ಟೇ ನವಿರಾದ ನಿರೂಪಣೆಯ ಈ ಬರಹ ಮರೆಯಲಾಗದ ಸಂವೇದನೆಯನ್ನು ಮೂಡಿಸುತ್ತದೆ.

**‘ಕೊಟ್ಟ ಕುದುರೆಯನೇರಲರಿಯದೆ ಮತ್ತೊಂದು ಕುದುರೆಯನೇರ ಬಯಸುವವರು ವೀರರೂ ಅಲ್ಲ, ಧೀರರೂ ಅಲ್ಲ’**

ಇಷ್ಟೆಲ್ಲ ಮೇರುಸದೃಶ ಸಾಧನೆ ಮಾಡಿದ ಈಶ್ವರನ್‌ರ ಜೀವನದ ರಹಸ್ಯವೆಂದರೆ ಅವರ ಅದಮ್ಯ ಮನೋಬಲ. ಎಡರು ಎದುರಾದಾಗ, ತೊಡರು ಕಾಲಿಗೆ ತೊಡಕಾದಾಗ ತನ್ನ ಕ್ಷಮತೆಗಳ ಅರಿವಿನಿಂದ, ತನ್ನ ಸುತ್ತಲೂ ಉದ್ಭವಗೊಳ್ಳುತ್ತಲಿರುವ ಹೊಸ ಹೊಸತು ಕ್ಷಿತಿಜಗಳನ್ನು ಗಮನಿಸಿ, ಗುರುತಿಸಿ ಅವುಗಳಲ್ಲಿ ಧುಮುಕುವುದು ಹಾಗೂ ಅಲ್ಲೊಂದು ತನ್ನ ದಾರಿಯನ್ನು ಕಂಡುಕೊಳ್ಳುವುದು - ಇದು ಈಶ್ವರನ್‌ರ ಮನೋಧರ್ಮ. ‘ನಿನಗೆ ಒಂದು ಮಾರ್ಗ ಇಲ್ಲದಿದ್ದರೆ, ಒಂದನ್ನು ಹುಡುಕು, ಅದು ಕೈಗೆ ಸಿಕ್ಕದಿದ್ದರೆ ನೀನೇ ಮಾರ್ಗವೊಂದನ್ನು ನಿರ್ಮಿಸಿಕೋ’ ಎಂಬ ಕನ್‌ಫ್ಯೂಸಿಯಸ್‌ನ ಮಾತಿಗೆ ಈಶ್ವರನ್ ಜೀವಂತ ಉದಾಹರಣೆ ಆಗಿದ್ದರು. ಪಂಪನ ‘ವಿಕ್ರಮಾರ್ಜುನವಿಜಯ’ದಲ್ಲಿ ‘ಕುಲಂ ಕಲಂ ಅಲ್ತು, ಚಲಂ ಕುಲಂ’ ಎಂಬ ಮಾತೊಂದಿದೆ. ಆ ಮಾತು ಈಶ್ವರನ್‌ರಿಗೆ ನೂರಕ್ಕೆ ನೂರು ಅನ್ವಯಿಸಿತು.

1994ರಲ್ಲಿ ಈಶ್ವರನ್‌ರಿಗೆ ಕ್ಯಾನ್ಸರ್ ತಗಲಿ ಅವರನ್ನು ಸಣ್ಣ ಮಾಡತೊಡಗಿತು. ಆರಂಭದಿಂದಲೂ ‘ಶಿವನ ಬುಟ್ಟಿ’ಯನ್ನು ಏರುಸುತ್ತಲೇ ‘ವಿಷ ನಿಮಿಷಗಳನ್ನು’ ಅನುಭವಿಸಿದ ಈಶ್ವರನ್‌ರಿಗೆ ಯಾವ ಹಾಲಾಹಲ ಏನು ಮಾಡುವಂತಿತ್ತು? ಹಾಲಾಹಲವನ್ನು ಈಂಟುತ್ತಲೇ ಹಿಮಾಲಯ ಸಾಧನೆಯನ್ನು ಮಾಡಿದ ಈಶ್ವರನ್‌ರ ಎದುರು ಕ್ಯಾನ್ಸರ್ ಅಟ್ಟಹಾಸ ನಡೆಯಲಿಲ್ಲ.

ತಮ್ಮ ಜೀವನದ ಸಾಧನೆಯಲ್ಲಿ ಅರ್ಜಿಸಿದ ಅಪಾರ ಜ್ಞಾನವನ್ನು, ಸತ್ವವನ್ನು ಹಾಗೂ ಸ್ವತ್ವವನ್ನು ಜಗತ್ತಿಗೆ ನೀಡಲು ಈಶ್ವರನ್ ಮರೆಯಲಿಲ್ಲ. ಅವರ ಕನ್ನಡದ ಕೈಂಕರ್ಯ ಉಸಿರಿನ ಕೊನೆಯವರೆಗೂ ನಿರಂತರ ನಡೆಯಿತು.

‘ವಲಸೆ ಹೋದ ಕನ್ನಡಿಗನ ಕತೆ’ ಎಂದು ಈಶ್ವರನ್ ತಮ್ಮ ಆತ್ಮ ಚರಿತ್ರೆ ಬರೆದಿದ್ದಾರೆ. ಕನ್ನಡದ ಉಪಾಸನೆಗೆ ಧಾರವಾಡದಲ್ಲಿಯೆ ನೆಲೆಸಬೇಕೆಂದಿದ್ದ ಈಶ್ವರನ್ ಪರಿಸ್ಥಿತಿಗಳ ವಿಲಕ್ಷಣತೆಯಿಂದಾಗಿ ಕೆನಡಾದಲ್ಲಿ ನೆಲೆ ನಿಂತರೂ, ಅಲ್ಲಿಯೇ ಸತಿ, ಸುತ-ಸುತೆಯರಿದ್ದರೂ ಈಶ್ವರನ್ ತಮ್ಮ ‘ನಿಜ’ ನೆಲೆಯನ್ನು ಪಡೆದದ್ದು ಧಾರವಾಡದಲ್ಲಿ ಎಂಬ ಸಂಗತಿಯನ್ನು ಯೋಗಾಯೋಗ ಎಂದು ಕರೆಯೋಣವೆ? ಕಟ್ಟಿಯ ಕಲ್ಲು ಕಟ್ಟಿ ಸೇರಿತು ಎನ್ನೋಣವೆ?

ಹುಬ್ಬಳ್ಳಿಯಲ್ಲಿ ನಾನು ಹುಡುಗನಾಗಿದ್ದಾಗ ಈಶ್ವರನ್‌ರನ್ನು ದೂರದಿಂದಲೇ ನೋಡುತ್ತಿದ್ದೆ. ಮುಂದೆ ಅವರ ಕ್ರಮಬದ್ಧ ಸಾಧನೆಯನ್ನು ದೂರದಿಂದಲೇ ಗಮನಿಸುತ್ತಿದ್ದೆ. ಕೊನೆಕೊನೆಯಲ್ಲಿ ಅವರೊಂದಿಗೆ ಸಂಪರ್ಕ ಸ್ನೇಹ ಬೆಳೆದರೂ ಸಹ ನನ್ನಲ್ಲಿ ಅವರ ಬಗ್ಗೆ ಮೂಡಿದ್ದ ಒಂದು ಬಗೆಯ ‘ಏಕಲವ್ಯತನ’ ಇಂದಿಗೂ ಹಚ್ಚ ಹಸಿರಾಗಿದೆ. ಅವರ ಬಗ್ಗೆ ಬರೆಯುವುದೇ ಒಂದು ಹೆಮ್ಮೆ, ಒಂದು ಗೆಯ್ಮೆ !

■ಬಸವರಾಜ ಪುರಾಣಿಕ

## ವೈದ್ಯರು ತಪ್ಪು ಮಾಡುವುದಿಲ್ಲವೇ?

(ವೈದ್ಯಕೀಯ ಲೇಖನಗಳ ಸಂಗ್ರಹ)

ಲೇ: ಎಂ.ಬಿ. ರೇಣುಕಾರ್ಯ
ಪ್ರ: ಸನತ್ ಪ್ರಕಾಶನ, ನಂ. 823,
ಮೂರನೇ ಕ್ರಾಸ್, ಶ್ರೀರಾಮಪುರಂ,
ಬೆಂಗಳೂರು - 560 021.
ಮುದ್ರಣ: 1998,
ಪುಟ: XVIII+213, ಬೆಲೆ: ರೂ. 85/-

"ವೈದ್ಯರು ತಪ್ಪು ಮಾಡುವುದಿಲ್ಲವೆ ?" ಎಂದು ಡಾ. ರೇಣುಕಾರ್ಯರು ಪ್ರಶ್ನಿಸಿರುವುದು ವೈದ್ಯರುಗಳನ್ನು ಚುಚ್ಚುವ ದೃಷ್ಟಿಯಿಂದಲ್ಲ. ರೋಗಿಗಳ ಬಗೆಗಿನ ಕಾಳಜಿಯಿಂದ, ವೈದ್ಯರು ತಪ್ಪು ಮಾಡಬಾರದೆನ್ನುವುದು ಅವರ ಕಳಕಳಿ. ಯಾವುದೇ ಕಾರಣಕ್ಕೂ ರೋಗಿಗಳಿಗೆ ತೊಂದರೆಯಾಗಬಾರದೆನ್ನುವುದು ಅವರ ಆಶಯ. ಇತ್ತೀಚೆಗೆ ಶಸ್ತ್ರ ಚಿಕಿತ್ಸೆ ಸಂದರ್ಭದಲ್ಲಿ ಅನಿಸ್ತೀಷಿಯಾ ಕೊಡುವಾಗ ತಪ್ಪಾಗಿ ಅನೇಕರು ಪ್ರಾಣ ಕಳೆದುಕೊಂಡಿರುವುದನ್ನು ಪತ್ರಿಕೆಗಳಲ್ಲಿ ಓದಿದ್ದೇವೆ. ಆಪರೇಷನ್ ಮಾಡುವಾಗ ಮರೆವಿನಿಂದಾಗಿ ವೈದ್ಯರು ಹೊಟ್ಟೆಯಲ್ಲಿಯೇ ಕತ್ತರಿ, ನ್ಯಾಪ್‌ಕಿನ್ ಮುಂತಾದುವುಗಳನ್ನು ಬಿಟ್ಟು ಹೊಲಿಗೆ ಹಾಕಿದ್ದರಿಂದ, ರೋಗಿಗಳು ನರಳಬೇಕಾದ ಘಟನೆಗಳನ್ನು ಗಮನಿಸಿದ್ದೇವೆ. ವೈದ್ಯರು ತಪ್ಪು ಮಾಡದಿದ್ದರೆ ಇಂತಹ ಘಟನೆಗಳು ಹೇಗೆ ಸಂಭವಿಸುತ್ತವೆ?

ಈ ಸಂಕಲನ ಕನ್ನಡ ವೈದ್ಯಕೀಯ ಸಾಹಿತ್ಯವನ್ನು ಶ್ರೀಮಂತಗೊಳಿಸುತ್ತದೆ ಎನ್ನುವ ಖಚಿತ ನಂಬಿಕೆ ನನಗಿದೆ.

■ ಬಿ.ವಿ.ವೈಕುಂಠರಾಜು

## ಮಹಾಬಲ

(ಅಭಿನಂದನಾ ಗ್ರಂಥ)

ಲೇ: ಟಿ.ಮಹಾಬಲೇಶ್ವರ ಭಟ್ಟ
ಪ್ರ: ಹೇಮಂತ ಸಾಹಿತ್ಯ
972, ಸಿ, 4ನೇ 'ಇ' ಬ್ಲಾಕ್, ರಾಜಾಜಿನಗರ,
ಬೆಂಗಳೂರು - 560 010.
ಮುದ್ರಣ: 1997, ಪುಟ: XVI+486,
ಬೆಲೆ: ರೂ. 295/-

ಸಾಗರದ ಟಿ.ಮಹಾಬಲೇಶ್ವರ ಭಟ್ಟರು ಹುಟ್ಟಾ ಕನ್ನಡದ ಕೆಲಸಗಾರರು. ನಾಡು ನುಡಿಯ ಬಗ್ಗೆ ತುಂಬಾ ಕಳಕಳಿಯುಳ್ಳವರು. ತೊರೆಮನೆ ಎಂಬ ಪುಟ್ಟಹಳ್ಳಿಯಲ್ಲಿ ಹುಟ್ಟಿ ಸಾಹಿತ್ಯ ಕ್ಷೇತ್ರ, ಸಾಮಾಜಿಕ ಕ್ಷೇತ್ರಗಳೆರಡರಲ್ಲೂ ದುಡಿದು ಖ್ಯಾತಿಯ ಮೆಟ್ಟಿಲನ್ನೇರಿದ್ದಾರೆ. ಇವರ 'ಹೊಸೂರಿನ ಹಲವರು' ಗ್ರಾಮೀಣ ಬದುಕಿನ ಚಿತ್ರಣವನ್ನು ಬಿಂಬಿಸುವ ಕೃತಿಯಾಗಿದ್ದು ಮಲೆನಾಡಿನ ಜನಜೀವನವನ್ನು ಬಹು ಸುಂದರವಾಗಿ ಅನಾವರಣ ಮಾಡಿದ್ದಾರೆ. ಇವರ ಇನ್ನೊಂದು ಕೃತಿ 'ಅಣ್ಣ ತಂಗಿ' ಸಮಾಜದಲ್ಲಿ ಇಂದಿಗೂ ಬೇರೂರಿ ನಡೆಯುತ್ತಿರುವ ಅನಿಷ್ಟ ನಡವಳಿಕೆಗಳ ಬಗ್ಗೆ ಅಸಹಾಯಕರ ಶೋಷಣೆಯ ಬಗ್ಗೆ ಬಹಳ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ಕೃಷಿಗೈದಿರುವ ಶ್ರೀಯುತರ ಶೈಲಿ ಬಹು ವಿಶಿಷ್ಟವಾದದ್ದು. ಇವರ 'ಋತುಗಾನ' ಎಂಬ ಮತ್ತೊಂದು ಕೃತಿ ಬಹು ಜನಪ್ರಿಯವಾಗಿದೆ. ಶ್ರೀಭಟ್ಟರು ಪ್ರಸ್ತುತ ಸಂಯುಕ್ತ ಕರ್ನಾಟಕ ಪತ್ರಿಕೆಯ ಜನಪ್ರಿಯ ಅಂಕಣ ಬರಹಗಾರರು. ಶಿಸ್ತು ಮತ್ತು ಅಚ್ಚುಕಟ್ಟುತನ ಇವರಿಗೆ ಹುಟ್ಟಿನಿಂದಲೂ ಮೈಗೂಡಿ ಬಂದಿದೆ.

ಎಪ್ಪತ್ತನ್ನು ಮುಟ್ಟುತ್ತಿರುವ ಶ್ರೀಯುತರಿಗೆ ಶತಮಾನದ ಆಯುಸ್ಸು ತುಂಬಿ ಮಂಗಳವಾಗಲೆಂದು ಹಾರೈಸುತ್ತೇನೆ.

■ ಮತ್ತೂರು ಕೃಷ್ಣಮೂರ್ತಿ

## ಆರೋಗ್ಯ

(ಸೂಕ್ತಿ ಸಂಗ್ರಹ)

ಲೇ: ಟಿ.ವಿ. ವೆಂಕಟರಮಣಯ್ಯ
ಪ್ರ: ಟಿ.ವಿ.ವೆಂಕಟರಮಣಯ್ಯ
ಇಡಬ್ಲ್ಯುಎಸ್ 218,
ಕೆ.ಹೆಚ್.ಬಿ. ಕಾಲೋನಿ, 2ನೇ ಹಂತ,
5ನೇ ಕ್ರಾಸ್, ಬೆಂಗಳೂರು - 560 079.
ಮುದ್ರಣ: 1998
ಪುಟ: IV+60
ಬೆಲೆ: ರೂ. 20/-

ಯಾವುದೇ ವ್ಯಕ್ತಿಗೆ ಆರೋಗ್ಯವೇ ನಿಜವಾದ ಭಾಗ್ಯ. ಆರೋಗ್ಯವನ್ನು ಹೊರತುಪಡಿಸಿ ಉಳಿದಂತೆ ಏನಿದ್ದರೇನು?

ಪ್ರಸ್ತುತ ಸಂಗ್ರಹದಲ್ಲಿ ಆರೋಗ್ಯ ಕುರಿತ ಸಾಮಾನ್ಯ ಅಂಶಗಳಲ್ಲದೆ, ಅದಕ್ಕೆ ಸಂಬಂಧಿಸಿದ ಇತರ ಅಂಶಗಳಾದ - ಆಸ್ಪತ್ರೆ, ದಾದಿ, ವೈದ್ಯ, ಆಹಾರ ಕ್ರಮ, ರೋಗಗಳು, ಚಿಕಿತ್ಸೆ, ಪಥ್ಯ ಇತ್ಯಾದಿ ಕುರಿತ ಸೂಕ್ತಿಗಳು ಹಾಗೂ ಗಾದೆಗಳನ್ನು ಅಳವಡಿಸಲಾಗಿದೆ.

■ ಟಿ.ವಿ. ವೆಂಕಟರಮಣಯ್ಯ

## ಬಹುರೂಪಿ

(ಕಾದಂಬರಿ)

ಲೇ: **ಸಿದ್ಧರಾಮ ಉಪ್ಪಿನ**
ಪ್ರ: ರಂಗಪರಿಕರ ಪ್ರಕಾಶನ
ಆದರ್ಶ ಕಾಂಪ್ಲೆಕ್ಸ್, ನಂ.6,
ಶಹಾಪುರ - 585 223. (ಕಲಬುರ್ಗಿ ಜಿಲ್ಲೆ)
ಮುದ್ರಣ: 1997, ಪುಟ: X+94
ಬೆಲೆ: ರೂ. 35/-

ಪ್ರಿಯ ಸಿದ್ದರಾಮ,

ನಿಮ್ಮ ಬಹುರೂಪಿಯನ್ನು ಒಂದೇ ಏಟಿಗೆ ಓದಿ ಮುಗಿಸಿದಾಗ ಇದನ್ನು ಸಾಹಿತ್ಯದ ಯಾವ ಪ್ರಕಾರಕ್ಕೆ ಸೇರಿಸಬೇಕು ಅನ್ನುವ ಗೊಂದಲ ಶುರುವಾಯಿತು. ನಮ್ಮಂಥವರ ಗೋಳೇ ಇದು. ಬರಹಕ್ಕೆ ಒಂದು ಹಣೆಪಟ್ಟಿ ಅಂಟಿಸಿ, ಅದು ಇದೇ ಅಂತ ಖಾತ್ರಿಪಡಿಸಿಕೊಂಡು ನಿರುಮ್ಮಳವಾಗಿರುವುದು.

ಆದರೆ ನಿಮ್ಮ ಬರಹ ಹಾಗಿರಲು ಬಿಡುವುದಿಲ್ಲ. ಅದು ನಿಮ್ಮ ಕೃತಿಯ ಶಕ್ತಿ ಮತ್ತು ದೌರ್ಬಲ್ಯ ಎರಡೂ ಹೌದು. ಇಲ್ಲಿ ಕತೆಯ ಹಾಗೆ ತಂತ್ರ, ಶೈಲಿ, ನಿರೂಪಣೆ ಎಲ್ಲವೂ ಬಹುರೂಪಿ. ಹೀಗಾದಾಗ ನೀವು ಒಂದು ಕಡೆಯಿಂದ ಓದುಗನ ಗಮನವನ್ನು ಕೇಂದ್ರೀಕರಿಸಲು ಯತ್ನಿಸುತ್ತಿದ್ದ ಹಾಗೇ, ಇನ್ನೊಂದು ಕಡೆಯಿಂದ ಅವನನ್ನು ಚಂಚಲನನ್ನಾಗಿ ಮಾಡುತ್ತೀರಿ. ಇಂಥ ನಿರೂಪಣೆ ಕೃತಿಗೆ ಎಷ್ಟರ ಮಟ್ಟಿಗೆ ಸಹಾಯ ಮಾಡುತ್ತದೆ ಅನ್ನುವುದನ್ನು ಕೊನೆಗೂ ನಿರ್ಧರಿಸಬೇಕಾದವನು ಓದುಗನಾದ್ದರಿಂದ ಆ ಬಗ್ಗೆ ನಾನು ತಕರಾರು ಎತ್ತುವುದಿಲ್ಲ.

■ **ಜೋಗಿ**



## ಬೇರೊಂದು ದಾರಿ

(ಕಥಾ ಸಂಕಲನ)

ಲೇ: **ಕೆ.ಆರ್. ಸಂಧ್ಯಾರೆಡ್ಡಿ**
ಪ್ರ: 1044, 4ನೇ ಮೇನ್, 8ನೇ ಕ್ರಾಸ್
ಶ್ರೀನಿವಾಸನಗರ, ಬೆಂಗಳೂರು - 560 050.
ಮುದ್ರಣ: 1998,
ಪುಟ: VI+ 103, ಬೆಲೆ: ರೂ. 30/-

ಈ ಕಥೆಗಳಲ್ಲಿನ ಬಹುಪಾಲು ನಾಯಕಿಯರು ದಿಟ್ಟ ನಿಲುವಿನವರು. ಆ ನಿಲುವನ್ನು ಸಮರ್ಥಿಸಿಕೊಳ್ಳಲು ಒತ್ತಾಯಪೂರ್ವಕವಾದ ವಾದಗಳನ್ನು, ಚಿಂತನೆಯನ್ನು ಹೇರದೆ ಸರಳವಾಗಿ ವಸ್ತು ವಿವರಣೆಯ ಮೂಲಕವೇ ಓದುಗರ ಒಳಮನ ತಟ್ಟುವ ಇಲ್ಲಿ ಘಟಿಸಿದ್ದೆಲ್ಲ ನಮ್ಮ ಪಕ್ಷದಲ್ಲಿಯೇ ನಡೆದಿತ್ತಲ್ಲ ಎನ್ನುವ 'ಒಳಗೊಳ್ಳುವ' ಭಾವಗಳಿಂದಾಗಿ ಅಬ್ಬರವಿಲ್ಲದೇ ಶಾಂತವಾಗಿ ಓದಿಸಿಕೊಳ್ಳುವ ಗುಣ ಪಡೆದ ಕಥೆಗಳಿವೆಯೆಂಬುದೇ ಹಿರಿಮೆ! ಹಲವೆಡೆಗಳಲ್ಲಿನ ನಿವೇದನಾ ಶೈಲಿಯಿಂದಾಗಿ ಇನ್ನೂ ಆಪ್ತವೆನಿಸುತ್ತವೆ. ಮಹತ್ವಾಕಾಂಕ್ಷೆಗಳಿಲ್ಲದೆಯೇ ಮನ ಮುಟ್ಟುತ್ತವೆ!

■ **ಮೋಹನ ನಾಗಮ್ಮನವರ**



## ನಿಶ್ಶಬ್ದ ಹಾಡು

(ಕವನ ಸಂಕಲನ)

ಲೇ: **ಅಭಿಸಾರಿಕಾ**
ಪ್ರ: ''ಅಭಿಸಾರಿಕಾ ಪಬ್ಲಿಕೇಶನ್ಸ್''
ರಾಜು ತೇರದಾಳ, ವೀರಶೈವ ಲೈಬ್ರರಿ ಹಿಂದೆ,
ಗದಗ - 582 101,
ಮುದ್ರಣ: 1998, ಪುಟ: X+41,
ಬೆಲೆ: ರೂ. 10/-

ಯಾವುದೇ ಸಾಂಪ್ರದಾಯಿಕ ಪೂರ್ವಾಗ್ರಹವಿಲ್ಲದೆ ಸ್ವಚ್ಛವಾದ ದೃಷ್ಟಿಯಿಂದ ನೋಡಿದೆವಾದರೆ, ಚೀನಾದ ಅಮೂಲ್ಯ ಸಂತಲಾವೋತ್ಸೋರ ವಚನಗಳಾಗಲಿ, ಜಾಪಾನ್‌ದಲ್ಲಿಯ ಝೆನ್ ಧರ್ಮದ ಸಂತರು ಹೇಳಿದ ಒಗಟುಗಳಾಗಲಿ, ಪ್ರಸಂಗಗಳಾಗಲಿ, ನಮ್ಮಲ್ಲಿಯ ಶಿವಶರಣರ ವಚನಗಳಾಗಲಿ, ಸಿದ್ಧಾರೂಢರ ಸಿಹಿಮಾತುಗಳಾಗಲಿ, ಗುರುನಾಥರೂಢರ ಮತ್ತು ರಮಣ ಮಹರ್ಷಿಗಳ ಮೌನವಾಗಲಿ, ಓಶೋರವರ ಧ್ಯಾನವಾಗಲಿ ಜೆ.ಕೃಷ್ಣಮೂರ್ತಿಯವರ ಆಯ್ಕೆ ರಹಿತ ಗಮನವಾಗಲಿ ಬೇರೆ ಬೇರೆಯಾಗಿ ಕಾಣಲಾರವು.

ಮಾತು, ಮೌನವಾಗುವುದು ಅವಶ್ಯಕ. ಏಕೆಂದರೆ ಚಿಂತನೆಗೆ ಅವಕಾಶವಾಗುವುದು. ಆದರೆ ಇಷ್ಟರಲ್ಲೇ ಉಳಿದುಬಿಟ್ಟರೆ ಇದು ಅನಾರೋಗ್ಯ ತರುವುದು. ಅದಕ್ಕಾಗಿ ಇದು ಮುಂದುವರೆದು ಮನ ಮೌನವಾಗಬೇಕು. ಇದುವೆ ಆರೋಗ್ಯಧಾಮ, ಸ್ವಸ್ಥಲ, ಇದನ್ನೇ ಎಲ್ಲ ಮಹಾತ್ಮರು ಬೇರೆ ಬೇರೆ ಭಾಷೆ, ಬೇರೆ ಬೇರೆ ಸಂಕೇತಗಳನ್ನು ಬಳಸಿಕೊಂಡು ತಿಳಿಸುವ ಕೃಪೆ ಮಾಡಿದ್ದಾರೆ.

ಈ ಕವನ ಸಂಕಲನದ ಕವನಗಳು ಮೌನಕ್ಕಾಗಿ ಮಾಡಿದ ಪ್ರಾರ್ಥನೆಗಳಾಗಿವೆ, ಮೌನದ ಕುರಿತಾದುವುಗಳಾಗಿವೆ, ಮೌನಿಗಳ ಕುರಿತಾದವುಗಳಾಗಿವೆ, ಮೌನದತ್ತ ಸಾಗಲು ಆಹ್ವಾನಗಳಾಗಿವೆ. ■



# ಗ್ರಾಮೀಣ ಶಿಕ್ಷಣಕ್ಕೆ ಗೋವಿಂದೇಗೌಡರ ಕೊಡುಗೆ

**ಒಬ್ಬ ಕೆಟ್ಟ ಶಿಕ್ಷಕ ಒಂದು ಹಳ್ಳಿಯ ಭವಿಷ್ಯಕ್ಕೆ ಕೊಡಲಿ ಹಾಕಬಲ್ಲ ಸಾಮರ್ಥ್ಯವನ್ನು ಹೊಂದಿರುತ್ತಾನೆ. ಇದನ್ನು ಮನಗಂಡರೆ ಸಚಿವರು ಉಗ್ರಕ್ರಮ ಜರುಗಿಸುವ ಔಚಿತ್ಯ ಎದ್ದು ಕಾಣುತ್ತದೆ.**

ನಮ್ಮಳ್ಳಿಯಲ್ಲಿ ಶಾಲೆಯೇ ಇಲ್ಲ, ಶಾಲೆ ಇದ್ದರೂ ಶಿಕ್ಷಕರಿಲ್ಲ. ಶಿಕ್ಷಕರಿದ್ದರೂ ಮಕ್ಕಳಿಗೆ ಕೂರಲು ಕಟ್ಟಡ ಇಲ್ಲ ಎಂಬ ಮಾತು ಈಚಿನ ದಿನಗಳಲ್ಲಿ ತೀರಾ ಅಪರೂಪವಾಗಿದೆ. ರಾಜ್ಯದಲ್ಲಿ ಈಗ ಪ್ರಾಥಮಿಕ ಶಿಕ್ಷಣಕ್ಕೆ ಎಲ್ಲಿಲ್ಲದ ಮಹತ್ವ ಬಂದಿದೆ. ಪ್ರತಿವರ್ಷ ಸಹಸ್ರಾರು ಮಂದಿ ಶಿಕ್ಷಣ ಪದವೀಧರರು ಸರಕಾರಿ ಶಾಲೆಯ ಉಪಾಧ್ಯಾಯರಾಗುತ್ತಿದ್ದಾರೆ. ನೂರಾರು ಶಾಲಾ ಕಟ್ಟಡಗಳು ನಿರ್ಮಿಸಲ್ಪಡುತ್ತಿವೆ. ರಾಜ್ಯದ ಕೋಟ್ಯಂತರ ಗ್ರಾಮೀಣ ಮಕ್ಕಳ ಭವಿಷ್ಯದ ನಿರ್ಮಾಣ ಕೆಲಸವನ್ನು ತೀರಾ ವೈಯಕ್ತಿಕವಾಗಿ ತೆಗೆದುಕೊಂಡಿರುವ ರಾಜ್ಯ ಪ್ರಾಥಮಿಕ ಶಿಕ್ಷಣ ಸಚಿವ ಗೋವಿಂದೇಗೌಡರು ಗ್ರಾಮೀಣ ಶಿಕ್ಷಣ ಕ್ಷೇತ್ರಕ್ಕೆ ಹೊಸ ರೂಪವನ್ನು ನೀಡುತ್ತಿದ್ದಾರೆ.

## ರೇಡಿಯೋ ಅಂಗಡಿ ಗೌಡರು !

ರಾಜ್ಯದ ಎಲ್ಲಾ ಪ್ರಮುಖ ನದಿಗಳ ಜನ್ಮ ಸ್ಥಳವಾದ ಮಲೆನಾಡಿನ ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರ ತಾಲೂಕು ಗೋವಿಂದೇಗೌಡರ ಹುಟ್ಟೂರು. ಈ ತಾಲೂಕಿನ ಕಾನೂರು ಗ್ರಾಮದ ಹಿಣಚಿ ಗಿಡ್ಡೇಗೌಡರ ಮಗನಾಗಿ ಮೇ 25, 1925ರಲ್ಲಿ ಜನಿಸಿದ ಗೋವಿಂದೇಗೌಡರು ಬಾಲ್ಯದಲ್ಲೇ ತಾಯಿಯನ್ನು ಕಳೆದುಕೊಂಡರು.



ತಂದೆಯ ವಾತ್ಸಲ್ಯದಲ್ಲಿ ಕಾನೂರು, ಕೊಪ್ಪ, ಚಿಕ್ಕಮಗಳೂರಿನಲ್ಲಿ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಮುಗಿಸಿದ ಗೋವಿಂದೇಗೌಡರು, ಇಂಟರ್ ಮೀಡಿಯಟ್‌ಗಾಗಿ ಶಿವಮೊಗ್ಗದ ಸಹ್ಯಾದ್ರಿ ಕಾಲೇಜಿಗೆ ಸೇರಿದಾಗ ಸ್ವಾತಂತ್ರ್ಯದ ಹೋರಾಟಕ್ಕೆ ಧುಮುಕ ಬೇಕಾದ ಅನಿವಾರ್ಯ ಸ್ಥಿತಿ ಒದಗಿಬಂತು. ವಿದ್ಯಾಭ್ಯಾಸ ನಿಲ್ಲಿಸಿ ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಂಡ ಗೌಡರು, ಮುಂದಿನ ದಿನಗಳಲ್ಲಿ ಕೊಪ್ಪ ಪಟ್ಟಣಕ್ಕೆ ವಾಪಾಸು ಬಂದರು. ಅಲ್ಲಿ ಹೊಟ್ಟೆಪಾಡಿಗಾಗಿ ರೇಡಿಯೋ ರಿಪೇರಿ ಅಂಗಡಿ, ಹಿಟ್ಟಿನ ಗಿರಣಿ ನಡೆಸಿದರು. ಇದರೊಂದಿಗೆ ಜನ ಸಂಪರ್ಕ ಹೊಂದಿ ತತ್ವ ನಿಷ್ಠೆ ಆಧಾರಿತ ರಾಜಕಾರಣ ಮಾಡಲು ಮುಂದಾದರು. 1952ರಿಂದ ಕೊಪ್ಪಳದ ವಿವಿಧ ಸ್ಥಳೀಯ ಸಂಸ್ಥೆಗಳಲ್ಲಿ ಅಧ್ಯಕ್ಷರಾಗಿ ಕೆಲಸ ಮಾಡಿದರು. ತಾಲೂಕು ರೈತ ಸಂಘದ ಅಧ್ಯಕ್ಷರಾದರು. ವಿನೋಬ ಭಾವೆಯವರ ಭೂದಾನ ಚಳವಳಿ, ಜಯಪ್ರಕಾಶ್ ನಾರಾಯಣರ ಸರ್ವೋದಯ ಚಳವಳಿಯಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡು 1983ರಲ್ಲಿ ಜನತಾಪಕ್ಷದ ಅಭ್ಯರ್ಥಿಯಾಗಿ ಶೃಂಗೇರಿ ವಿಧಾನಸಭೆ ಕ್ಷೇತ್ರದಿಂದ ಆಯ್ಕೆ ಆಗಿ ಬಂದ ಗೋವಿಂದೇಗೌಡರು ಮತ್ತೆ ಹಿಂತಿರುಗಿ ನೋಡಲಿಲ್ಲ. ಅಂದಿನ ಜನತಾ ಪಕ್ಷದಿಂದ ಹಿಡಿದು ಇಂದಿನ ಜನತಾದಳದ ಸರಕಾರದ ಅವಧಿಯ ಪೂರ್ತಿ ಶಿಕ್ಷಣ ಸಚಿವರಾಗಿಯೇ ಕಾರ್ಯನಿರ್ವಹಿಸುತ್ತಾ ಬಂದಿರುವ ಗೋವಿಂದೇಗೌಡರು ರಾಜ್ಯ ಕಂಡ ಶಿಕ್ಷಣ ಸುಧಾರಕರಲ್ಲೊಬ್ಬರೆಂದರೆ ಅತಿಶಯೋಕ್ತಿ ಆಗಲಾರದು. ಇದಕ್ಕೆ ಇವರ ದಕ್ಷ, ಪ್ರಾಮಾಣಿಕ ಹಾಗೂ ನಿಷ್ಠುರವಾದಿ ಆಡಳಿತ ಶೈಲಿಯೇ ಕಾರಣ ಎಂಬುದನ್ನು ಇಂದಿನ ಈ ಭ್ರಷ್ಟ ವ್ಯವಸ್ಥೆ ಮನಗಾಣಬೇಕು.

ಪ್ರಾಥಮಿಕ ಶಿಕ್ಷಣದಂತಹ ಅತಿ ಸೂಕ್ಷ್ಮ ವ್ಯವಸ್ಥೆ ಒಮ್ಮೆ ಕೆಟ್ಟುಹೋದರೆ, ಸರಿಮಾಡಲು ಶತಮಾನಗಳೇಬೇಕು ಎಂದು ಹೇಳುವ ಗೋವಿಂದೇಗೌಡರು ವೃತ್ತಿಯಲ್ಲಿ ರಾಜಕಾರಣಿಯಾದರೂ ಬದುಕಿನಲ್ಲಿ ಗಾಂಧೀವಾದಿ.

ಗ್ರಾಮೀಣ ಮಕ್ಕಳನ್ನು ಮುಂದಿನ ಉತ್ತಮ ಪ್ರಜೆಗಳಾಗಿ ರೂಪಗೊಳಿಸಲು ಲಕ್ಷಾಂತರ ಮಂದಿ ಶಿಕ್ಷಕರ ಸೇನೆಯನ್ನು ರೂಪಗೊಳಿಸುವ ಕಾರ್ಯದಲ್ಲಿ ಗೋವಿಂದೇಗೌಡರು ಕಳೆದ ನಾಲ್ಕು ವರ್ಷಗಳಿಂದ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ.

ಬಂಡವಾಳಶಾಹಿಗಳ ಸ್ವತ್ತಾಗಿದ್ದ ಇಂಜೀನಿಯರಿಂಗ್ ಹಾಗೂ ವೈದ್ಯಕೀಯ ಸೀಟುಗಳ ಹಂಚಿಕೆಯಲ್ಲಿದ್ದ ಭ್ರಷ್ಟಾಚಾರವನ್ನು ಹೋಗಲಾಡಿಸುವ ಮೂಲಕ ಸಾಮಾನ್ಯ ಪ್ರವೇಶ ಪರೀಕ್ಷೆ (CET) ಕೇಂದ್ರದಲ್ಲಿ ಸ್ವಚ್ಛ ಹಾಗೂ ಪಾರದರ್ಶಕವಾದ ವಾತಾವರಣ ನಿರ್ಮಿಸುವಲ್ಲಿ ಗೋವಿಂದೇಗೌಡರ ಪಾತ್ರ ಅತ್ಯಮೂಲ್ಯವಾಗಿದೆ.

ಎಸ್.ಎಸ್.ಎಲ್.ಸಿ ಮತ್ತು ಪಿಯುಸಿಯಲ್ಲಿ ಅತ್ಯುತ್ತಮ ಅಂಕಗಳಿಸಿದರೂ ದೊಡ್ಡನಗರಗಳಲ್ಲಿ ಕೇಂದ್ರೀಕೃತವಾಗಿರುವ ಕೆಲವು ತಾಂತ್ರಿಕ ಕಾಲೇಜುಗಳಿಗೆ ಪ್ರವೇಶ ಸಿಗದೆ ಪರದಾಡುವ, ಕಂಪ್ಯೂಟರ್ ಜ್ಞಾನ ಅರಿಯದ, ಅದಕ್ಕಾಗಿ ಪರಿತಪಿಸುವ ಅಪ್ಪಟ ಗ್ರಾಮೀಣ ಪ್ರತಿಭೆಗಳಿಗೆ ಗೋವಿಂದೇಗೌಡರು ಈಗ ಹೊಸ ಆಶಾಕಿರಣವಾಗಿದ್ದಾರೆ. ಗ್ರಾಮೀಣ ಮಟ್ಟದ ಶಿಕ್ಷಣ ವ್ಯವಸ್ಥೆಯನ್ನು ಸರಿಮಾಡುವ ನಿಟ್ಟಿನಲ್ಲಿ ಪ್ರತಿವರ್ಷ ಸಹಸ್ರಾರು ಮಂದಿ ಶಿಕ್ಷಕರನ್ನು ನೇಮಿಸಿಕೊಳ್ಳುತ್ತಿದ್ದಾರೆ. ಇದರಿಂದಾಗಿ ಶಿಕ್ಷಣ ಪದವಿಗೆ ಅದರಲ್ಲೂ ಟಿ.ಸಿ.ಎಚ್. ಕಾಲೇಜುಗಳು ಎಲ್ಲಿಲ್ಲದ ಮಹತ್ವನ್ನು ಪಡೆಯುತ್ತಿವೆ. ಈ ಯೋಜನೆಯನ್ನು ದುರುಪಯೋಗ ಪಡಿಸಿಕೊಳ್ಳುವ ಸಲುವಾಗಿ ಹಲವಾರು ರಾಕ್ಷಸ ಕೈಗಳು ಎಲ್ಲೆಂದರಲ್ಲಿ ಚಾಚಿಕೊಂಡವು. ಟಿ.ಸಿ.ಎಚ್. ಸೀಟುಗಳು ಹರಾಜಿಗಿಳಿದವು. ಈ ಬಗ್ಗೆ ಕೂಡಲೇ ಎಚ್ಚರಿಕೆ ತೆಗೆದುಕೊಂಡ ಗೋವಿಂದೇಗೌಡರು. ಟಿ.ಸಿ.ಎಚ್ ಸೀಟು ಹಂಚಿಕೆಯನ್ನು ಜಿಲ್ಲಾ ಮಟ್ಟಕ್ಕೆ ಕೇಂದ್ರಿಕೃತಗೊಳಿಸಿದರು. ಎಲ್ಲಾ ಟಿ.ಸಿ.ಎಚ್ ಕಾಲೇಜುಗಳ ಪ್ರವೇಶ ನಿರ್ವಹಣೆಯನ್ನು

ಸರಕಾರವೇ ನೇರವಾಗಿ ನಿರ್ವಹಿಸಿತು. ಕಂಪ್ಯೂಟರ್ ಮೂಲಕ ಸೀಟು ಹಂಚಿಕೆ ಕಾರ್ಯ ಸಮರ್ಪಕವಾಗಿ ನಡೆಯಿತು. ಯೋಗ್ಯರಿಗೆಲ್ಲ ಟಿ.ಸಿ.ಎಚ್. ಪ್ರವೇಶಾವಕಾಶ ಸಿಕ್ಕಿತು.

ಟಿ.ಸಿ.ಎಚ್. ಪ್ರವೇಶಾವಕಾಶದ ಬೆನ್ನ ಹಿಂದೆಯೇ ಮತ್ತೊಂದು ಭ್ರಷ್ಟಚಾರದ ಮುಖ ತನ್ನ ದರ್ಶನ ಮಾಡಿತ್ತು. ಪ್ರತಿವರ್ಷ ಸಹಸ್ರಾರು ಮಂದಿ ಶಿಕ್ಷಕರನ್ನು ಆಯ್ಕೆ ಮಾಡಿಕೊಳ್ಳುವ ಪ್ರಕ್ರಿಯೆ ಆರಂಭವಾದಾಗ ಮೇಷ್ಟ್ರು ಕೆಲಸ ಕೊಡಿಸುವ ದಲ್ಲಾಲಿಗಳು ನಾಯಿ ಕೊಡೆಗಳಂತೆ ಹುಟ್ಟಿಕೊಂಡರು. ಗ್ರಾಮೀಣ ಹಿನ್ನೆಲೆಯ ಜನರು ಇವರಿಗೆ ಹಣ ಕೊಟ್ಟು ನೇಮಕಾತಿ ಆದೇಶಕ್ಕೆ ಕಾಯುವ ಪರಿಪಾಠವನ್ನು ಬೆಳೆಸಿಕೊಂಡರು. ಗೋವಿಂದೇಗೌಡರ ದಕ್ಷ ಹಾಗೂ ಪ್ರಾಮಾಣಿಕ ಆಡಳಿತ ಯಂತ್ರ ಇಂತಹ ಕೃತ್ಯವನ್ನು ಇನ್ನಿಲ್ಲದಂತೆ ಮೊಟಕುಗೊಳಿಸಿತು.

ಪ್ರತಿಜಿಲ್ಲೆಯಲ್ಲಿ ಇರುವ ಶಿಕ್ಷಣ ತರಬೇತಿ ಪಡೆದವರ ಅರ್ಹತೆ, ಜಾತಿ, ವಯಸ್ಸಿನ ಆಧಾರದ ಮೇಲೆ ನೇಮಕಾತಿ ಮಾಡುವ ಪ್ರಕ್ರಿಯೆ ಆರಂಭವಾಯಿತು. ಎಲ್ಲವನ್ನೂ ಕಂಪ್ಯೂಟರ್‌ಗೆ ಅಳವಡಿಸಲಾಯಿತು. ಕಂಪ್ಯೂಟರ್ ಸೂಚಿಸಿದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಕೆಲಸ ಆರಂಭವಾಯಿತು. ಜಿಲ್ಲೆಯಲ್ಲಿ ಇರುವ ಶಿಕ್ಷಕರ ಹುದ್ದೆಗಳ ಸಂಖ್ಯೆ, ಜಾತಿವಾರು ವಿಂಗಡಣೆ, ಕೆಲಸ ಪಡೆದಿರುವ ಅಭ್ಯರ್ಥಿಗಳ ಶೇಕಡವಾರು ಅಂಕ, ಮುಂತಾದ ವಿಷಯಗಳನ್ನು ಅಭ್ಯರ್ಥಿಗಳ ಮುಂದೆಯೇ ಪ್ರದರ್ಶಿಸುವ ಪ್ರಕ್ರಿಯೆ ಈಗ ರಾಜ್ಯದ ಪ್ರತಿ ಜಿಲ್ಲೆಯಲ್ಲೂ ನಡೆಯುತ್ತಿದೆ. ಇಂತಹ ಪಾರದರ್ಶಕ ವ್ಯವಸ್ಥೆಯಲ್ಲಿ ಯಾರಿಗಾದರೂ ಅನ್ಯಾಯವಾದರೆ ಅದನ್ನು ಪ್ರಶ್ನಿಸುವ ಅಧಿಕಾರವನ್ನು ಸಹ ನೀಡಲಾಗಿದೆ. ಇದರಿಂದಾಗಿ ನೇಮಕಾತಿಯಲ್ಲಿದ್ದ ಭ್ರಷ್ಟಾಚಾರ ಸಂಪೂರ್ಣವಾಗಿ ಇಲ್ಲವಾಗಿದೆ.

ಶಿಕ್ಷಣ ಕ್ಷೇತ್ರದಂತಹ ದೊಡ್ಡ ಸಾಗರದಲ್ಲಿ ಹೊಸ ರೀತಿಯ ಕಾರ್ಯ ನಿರ್ವಹಣೆಯ ಮೂಲಕ ಭ್ರಷ್ಟಾಚಾರವನ್ನು ಹೋಗಲಾಡಿಸಲು ಮುಂದಾಗಿರುವ ಗೋವಿಂದೇಗೌಡರು ಇಲಾಖೆಯ ಆಡಳಿತದಲ್ಲಿ ದಕ್ಷತೆ ಹೆಚ್ಚಿಸಲು ಜಾಗೃತ ದಳವನ್ನೂ ನೇಮಿಸಿದ್ದಾರೆ. ತಾವೇ ಸ್ವತಃ ಪ್ರತಿ ಜಿಲ್ಲೆಯ ಉಪನಿರ್ದೇಶಕರ ಕಚೇರಿಗೆ ಭೇಟಿ ನೀಡಿ ಆಡಳಿತದಲ್ಲಿರುವ ಕುಂದುಕೊರತೆಗಳನ್ನು ಪರಿಶೀಲಿಸಿದ್ದಾರೆ.

ಶಿಕ್ಷಕರನ್ನು ವರ್ಗಾವಣೆ ಮಾಡುವ ಹೆಸರಲ್ಲಿ ದೊಡ್ಡದಂಧೆ ನಡೆಸುವುದನ್ನೂ ನಿಲ್ಲಿಸುವ ಸಲುವಾಗಿ ಮುಂದಿನ ವರ್ಷದಿಂದ ಕೌನ್ಸಿಲಿಂಗ್ ಮೂಲಕ ಶಿಕ್ಷಕರ ವರ್ಗಾವಣೆ ಕಾರ್ಯವನ್ನು ಮಾಡಲಾಗುವುದು ಎಂದು ಶಿಕ್ಷಣ ಸಚಿವರು ಹೇಳಿದ್ದಾರೆ. ಈ ಒಂದು ವ್ಯವಸ್ಥೆ ಜಾರಿಗೆ ಬಂದರೆ ಶಿಕ್ಷಣ ಇಲಾಖೆಯಲ್ಲಿ ಇರುವ ಭ್ರಷ್ಟಾಚಾರ ಶೇ. 75 ರಷ್ಟು ಕಡಿಮೆ ಆಗುವ ಸಾಧ್ಯತೆ ಇದೆ.

ಗ್ರಾಮೀಣ ಶಿಕ್ಷಣ ಮಟ್ಟವನ್ನು ಸುಧಾರಿಸುವ ಸಲುವಾಗಿ ಏಳನೆಯ ತರಗತಿಯನ್ನು ಪಬ್ಲಿಕ್ ಪರೀಕ್ಷೆಯಾಗಿ ಪರಿವರ್ತಿಸಿದ್ದು, ಪಿಯುಸಿ ವಿಜ್ಞಾನ, ವಿಭಾಗಗಳಲ್ಲಿ ಪ್ರಾಯೋಗಿಕವಾಗಿ ಉತ್ತರ ಪತ್ರಿಕೆಗಳ ಜೆರಾಕ್ಸ್ ಪ್ರತಿ ನೀಡುವುದು ಹಾಗೂ ಮರುಮೌಲ್ಯಮಾಪನ ವ್ಯವಸ್ಥೆ ಜಾರಿಗೆ ತಂದಿದ್ದು ಇಡೀ ರಾಷ್ಟ್ರದಲ್ಲಿಯೇ ಮೆಚ್ಚುಗೆಯನ್ನು ಗಳಿಸಿದೆ.

ಎಸ್.ಎಸ್.ಎಲ್.ಸಿ.ಯ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗಾಗಿ ಇಪ್ಪತ್ತು ಪ್ರತ್ಯೇಕ ರ‍್ಯಾಂಕುಗಳನ್ನು ಕೊಡುವ ವ್ಯವಸ್ಥೆ ಮಾಡಲಾಗಿದೆ.

ನಿಂತ ನೀರಾಗಿದ್ದ ರಾಜ್ಯ ಶಿಕ್ಷಣ ಕ್ಷೇತ್ರದಲ್ಲಿ ಹೊಸ ಹೊಸ ಆವಿಷ್ಕಾರಗಳನ್ನು ಹುಟ್ಟುಹಾಕಿ ಪಾಠಹೇಳುವ ಮೇಷ್ಟ್ರುಗಳನ್ನು ಕ್ರಿಯಾಶೀಲರನ್ನಾಗಿ ಮಾಡಲು ಯತ್ನಿಸುತ್ತಿರುವ ಗೋವಿಂದೇಗೌಡರು ಶಿಕ್ಷಣ ಇಲಾಖೆಯಲ್ಲಿನ ಆಡಳಿತ ಪಾರದರ್ಶಕವಾಗಿರಬೇಕೆಂದು ಯಸುತ್ತಿದ್ದಾರೆ.

ಹೀಗೆ ಹಲವಾರು ಸುಧಾರಣೆಗಳನ್ನು ತರುವ ಮೂಲಕ ಪ್ರತಿ ವರ್ಷ ಸಹಸ್ರಾರು ಶಿಕ್ಷಕರನ್ನು ನೇಮಿಸಿಕೊಳ್ಳುತ್ತಿರುವ ಗೋವಿಂದೇಗೌಡರು ಹಳ್ಳಿಯಲ್ಲಿ ಕಾರ್ಯನಿರ್ವಹಿಸುವ ಉಪೇಕ್ಷೆ ಮನೋಭಾವನೆಯ ಉಪಾಧ್ಯಾಯರ ಬಗ್ಗೆ ನಿಗಾ ಇಡುವುದು ತೀರಾ ಅಗತ್ಯವಾಗಿದೆ. ಶಾಲಾ ತರಗತಿಯಲ್ಲೇ, ಧೂಮಪಾನ, ಮದ್ಯಪಾನ ಮಾಡುವ, ಜೂಜುಕೋರತನಕ್ಕೆ ಒಳಗಾಗಿ ತರಗತಿಗಳಿಗೆ ಅನಧಿಕೃತವಾಗಿ ಗೈರು ಹಾಜರಾಗುವ, ವೃತ್ತಿ ರಾಜಕಾರಣಿಗಳಂತೆ ಸ್ಥಳೀಯ ರಾಜಕೀಯ ವಿಷಯಗಳಲ್ಲಿ ತಲೆತೂರಿಸುವ ಮೇಷ್ಟ್ರು ಎಂಬ ಶತ ಮೂರ್ಖರನ್ನು ತಮ್ಮ ಇಲಾಖೆಯಿಂದ ಕಿತ್ತು ಎಸೆಯುವ ಕಾರ್ಯವನ್ನು ನಿಷ್ಠುರವಾಗಿ ನಿರ್ವಹಿಸಬೇಕು.

ಒಬ್ಬ ಕೆಟ್ಟ ಶಿಕ್ಷಕ ಒಂದು ಹಳ್ಳಿಯ ಭವಿಷ್ಯಕ್ಕೆ ಕೊಡಲಿ ಹಾಕಬಲ್ಲ ಸಾಮರ್ಥ್ಯವನ್ನು ಹೊಂದಿರುತ್ತಾನೆ. ಇದನ್ನು ಮನಗಂಡರೆ ಸಚಿವರು ಉಗ್ರಕ್ರಮ ಜರುಗಿಸುವ ಔಚಿತ್ಯ ಎದ್ದು ಕಾಣುತ್ತದೆ.

■ ಶರ್ಮಾ

## ಹರಪನಹಳ್ಳಿಯ 'ಶಾಸಕ ಪ್ರಭುತ್ವ'

'ಅಧಿಕೃತವಲ್ಲದ' ಕಾರ್ಯಕ್ರಮವನ್ನು 'ಅಧಿಕೃತ' ಗೊಳಿಸಲು ತನ್ನ 'ಪಟಾಲಂ' ನೊಂದಿಗೆ ಆಗಮಿಸಿದ ಹಾಲಿ ಶಾಸಕರು ಮಾಜಿ ಶಾಸಕರಿಂದ 'ಮುಖಭಂಗ' ಕ್ಕೀಡಾದರು. ಉದ್ಘಾಟನೆಗೆ ತಂದ ಫಲಕಗಳು ಪುಡಿಪುಡಿಯಾದವು. ನನ್ನ ಸರ್ಕಾರವೇ ಇರುವಾಗ ಈ ರೀತಿಯಾಯಿತಲ್ಲ ಎಂದುಕೊಂಡು ಸಹಾಯಕ ಜಿಲ್ಲಾಧಿಕಾರಿಗಳನ್ನು ಮತ್ತು ಪೊಲೀಸ್ ಪಡೆಯನ್ನು ಕರೆಸಿದರು. ನಾನು ಪ್ರವಾಸಿ ಮಂದಿರ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಉದ್ಘಾಟಿಸಲೇಬೇಕು ಎಂದು ಗೋಗರೆದರು. ಆಗ ಸಹಾಯಕ ಜಿಲ್ಲಾಧಿಕಾರಿ ಮಾಜಿ ಶಾಸಕರ ಮನವೊಲಿಸಿದರು. ಪ್ರವಾಸಿ ಮಂದಿರವನ್ನು ಮಾತ್ರ ಉದ್ಘಾಟಿಸುವ ತೀರ್ಮಾನಕ್ಕೆ ಒಪ್ಪಿದರು. ಇಬ್ಬರೂ ಒಂದೊಂದು ಟೇಪು ಕತ್ತರಿಸುವ ಸೂತ್ರಕ್ಕೆ ಬದ್ಧರಾಗುವಂತೆ ಹಾಲಿ ಮತ್ತು ಮಾಜಿ ಶಾಸಕರನ್ನು ತಯಾರು ಮಾಡಿ, ಅನಧಿಕೃತ ಕಾರ್ಯಕ್ರಮವನ್ನು ಅಧಿಕೃತಗೊಳಿಸುವಲ್ಲಿ ಸಹಾಯಕ ಜಿಲ್ಲಾಧಿಕಾರಿ ಯಶಸ್ವಿಯಾದರು. ಊರ ಜನತೆ, ಪಂಚಾಯ್ತಿ ಅಧ್ಯಕ್ಷ, ಸ್ಥಳದಾನಿಗಳು ಪಾಲ್ಗೊಳ್ಳದ ಈ ಕಾರ್ಯಕ್ರಮ 'ಪ್ರಜಾಪುಭುತ್ವ'ದಲ್ಲೊಂದು 'ಶಾಸಕ ಪ್ರಭುತ್ವ' ಎಂದು ಸಾರಿತು. ಮಾಜಿ ಶಾಸಕರ ಧೈರ್ಯವನ್ನು ಒಳಗೊಳಗೇ ಮೆಚ್ಚಿತು.

**ವಿವರ**

**ಹಾಲಿ ಶಾಸಕ :**
ಡಿ. ನಾರಾಯಣದಾಸ್, ಹರಪನಹಳ್ಳಿ ಕ್ಷೇತ್ರ

**ಮಾಜಿ ಶಾಸಕ :**
ಬಿ.ಹೆಚ್. ಯಂಕಾನಾಯ್ಕ, ಹರಪನಹಳ್ಳಿ ಕ್ಷೇತ್ರ.

**ಸ್ಥಳ :**
ಪುನಬಗಟ್ಟೆ, ಹರಪನಹಳ್ಳಿ (ತಾ),
ದಾವಣಗೆರೆ (ಜಿ)

**ದಿನಾಂಕ :** 03.07.98

**ಸಮಯ :** 4.30 ರಿಂದ ಸಾ. 7.30ರವರೆಗೆ

**ಅಧಿಕೃತ ಕಾರ್ಯಕ್ರಮ :**
ಆಶ್ರಯ ಮನೆಗಳ ಉದ್ಘಾಟನೆ.

- ಪುನಬಗಟ್ಟೆ ಕೊಟ್ರಯ್ಯ

ಕ್ವಿಜ್-14 ಬಹುಮಾನ ವಿಜೇತರು

**ಪ್ರಥಮ ಬಹುಮಾನ**
**ರೂ. 500-00**

**ಆರ್. ವರಲಕ್ಷ್ಮೀ**
ಇ/ಮ ಆರ್.ವಿ. ಅಯ್ಯಣ್ಣ
ಕೆ45, 13ನೇ ಕ್ರಾಸ್
ರಾಜಾಜಿನಗರ, 1ನೇ ಬ್ಲಾಕ್
ಕೇತುಮಾರನಹಳ್ಳಿ
ಬೆಂಗಳೂರು - 560 010.

**ದ್ವಿತೀಯ ಬಹುಮಾನ**
**ರೂ. 200-00**

**ಎಸ್.ಎಂ. ನಾಗಭೂಷಣ**
ಮಹಾಲಕ್ಷ್ಮೀ ಪ್ರಥಮ ದರ್ಜೆ ಕಾಲೇಜು
ಎಂ.ನಗರ,
ಧಾರವಾಡ - 580 006.

**ಸಮಾಧಾನಕರ ಬಹುಮಾನ**
**ತಲಾ ರೂ. 100/-**

**ನಾಗರಿಕರ ಮಲ್ಲಿಕಾರ್ಜುನ**
ಪ್ರಥಮಪಿ.ಯು.ಸಿ.
(ಶಿಕ್ಷಣ 'ಎ' ವಿಭಾಗ)
ಮುನ್ಸಿಪಲ್ ಕಾಲೇಜು
ಬಳ್ಳಾರಿ - 583101.

**ಎ.ಎಂ.ಆರ್. ವಿದ್ಯಾ**
ಡಿ-160, ಪಿ.ಡಬ್ಲ್ಯು.ಡಿ. ಕ್ವಾರ್ಟರ್ಸ್
ಜೀವನ ಭೀಮಾನಗರ
ಬೆಂಗಳೂರು - 560 075.

**ಅಶೋಕ ಗಾಣಿಗೇರ**
ಇ/ಮ ಗುಂಡಪ್ಪ ಗಾಣಿಗೇರ
ಪೋತ್ನಾಳ - 584 123
ತಾ: ಮಾನ್ವಿ, ಜಿ: ರಾಯಚೂರು

**ಕ್ವಿಜ್ - 14ರ ಬಹುಮಾನಗಳನ್ನು ಬೆಂಗಳೂರಿನ ನವಕರ್ನಾಟಕ ಪ್ರಕಾಶನದವರು ಪ್ರಾಯೋಜಿಸಿದ್ದು ವಿಜೇತರಿಗೆ, ಬಹುಮಾನ ಮೊತ್ತದ ಪುಸ್ತಕ ಕೂಪನ್ ಕಳಿಸಲಾಗುವುದು.**

## ಕ್ವಿಜ್ - 14ರ ಸರಿಯುತ್ತರ

1. 'ಸಂಸ'
2. ಕನ್ನಡಿಗರನ್ನು, ಶ್ರೀವಿಜಯ, ಕವಿರಾಜ ಮಾರ್ಗ
3. ಶೈಲಜ
4. ಮೂಡಬಿದಿರೆ
5. ಇಪ್ಪತ್ತೈದು, ಶ್ರೀನಿರಂಜನ

**ಸೂಚನೆಗಳು**

- ಕೆಳಗೆ ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಆಯಾ ಪ್ರಶ್ನೆಯ ಕೆಳಗೆ ನೀಡಲಾದ ಸ್ಥಳದಲ್ಲಿ ಬರೆಯಿರಿ.
- ಒಬ್ಬರು ಎಷ್ಟು ಪ್ರವೇಶ ಪತ್ರಗಳನ್ನಾದರೂ ಕಳಿಸಬಹುದು. ಮುದ್ರಿತ ಕೂಪನ್ನೇ ಬಳಸಬೇಕು. ಜೆರಾಕ್ಸ್ ಪ್ರತಿ ಪರಿಗಣಿಸುವುದಿಲ್ಲ.
- ಪ್ರಥಮ-ದ್ವಿತೀಯ ಬಹುಮಾನ ಪಡೆದವರ ಭಾವಚಿತ್ರ ಪ್ರಕಟಿಸಲಾಗುವುದು. ಕೂಪನ್ ಜೊತೆಗೆ ಭಾವಚಿತ್ರ ಕಳಿಸಬೇಡಿ. ಬಹುಮಾನಿತರನ್ನು ಸಂಪರ್ಕಿಸಿ ಭಾವಚಿತ್ರ ತರಿಸಿ ಕೊಳ್ಳಲಾಗುವುದು.
- ಸರಿಯುತ್ತರಗಳ ಪ್ರವೇಶ ಪತ್ರಗಳನ್ನೆಲ್ಲಾ ಸೇರಿಸಿ ಲಾಟರಿ ಮೂಲಕ ಬಹುಮಾನಗಳನ್ನು ನಿರ್ಧರಿಸಲಾಗುವುದು.
- ಪ್ರವೇಶ ಪತ್ರ ತಲುಪಲು ಅಂತಿಮ ದಿನಾಂಕ **15-9-1998**

# ಕ್ವಿಜ್ - 15

1. ಗುಲಬರ್ಗಾ ಭಾಗದ ಸುಪಾರಿ ಕೊಲೆ ಪ್ರಕರಣದಲ್ಲಿ ಹೆಸರು ಸಿಲುಕಿಸಿಕೊಂಡಿರುವ ಕರ್ನಾಟಕದ ಮಂತ್ರಿ ಯಾರು ?
   ............................................................
2. ಬೆಂಗಳೂರು ನಗರದ ಪೊಲೀಸ್ ಪಹರೆ ವಾಹನಗಳಿಗೆ ಇಟ್ಟಿರುವ ಐತಿಹಾಸಿಕ ಸಾಮ್ರಾಜ್ಯದ ಹೆಸರು ಯಾವುದು ?
   ............................................................
3. ಕಿತ್ತಳೆನಾಡು ಎಂದು ಕರೆಸಿಕೊಳ್ಳುವ ಜಿಲ್ಲೆ ಯಾವುದು ?
   ............................................................
4. ಉದಯ ಟಿ.ವಿ.ಯಲ್ಲಿ 'ಆದರ್ಶ ದಂಪತಿಗಳು' ಕಾರ್ಯಕ್ರಮ ನಿರ್ವಹಿಸುವ ನಟನ ಹೆಸರೇನು ?
   ............................................................
5. ಕ್ರಿಕೆಟ್ ಆಟಗಾರ ಅಜರುದ್ದೀನ್ ಯಾವ ರಾಜ್ಯದವರು ?
   ............................................................

ಹೆಸರು............................................................
ವಿಳಾಸ............................................................
............................................................
............................................................
ಪಿನ್ ಕೋಡ್.............................. ದೂರವಾಣಿ..............................
ಪ್ರವೇಶ ಪತ್ರಗಳನ್ನು ಕಳುಹಿಸಬೇಕಾದ ವಿಳಾಸ :
ಸಂಪಾದಕರು, **ಬಿಸಿಲ ಬದುಕು**, ಅಂಚೆ ಪೆಟ್ಟಿಗೆ ೭೯೫೧, ಬಸವೇಶ್ವರ ನಗರ, ಬೆಂಗಳೂರು-೭೯.

# ವಯಸ್ಕರಿಗಾಗಿ

■ ಡಾ. ವಸುಂಧರಾ ಭೂಪತಿ

### ಮದುವೆಯಾಗಬಹುದೇ?

*ನನಗೀಗ 25 ವರ್ಷ. ಇನ್ನೂ ಮದುವೆ ಯಾಗಿಲ್ಲ. 11-12ನೇ ವರ್ಷದವನಿದ್ದಾಗ ನನ್ನ ಚಿಕ್ಕಪ್ಪನ ಮಗಳನ್ನು 2-3 ವರ್ಷ ಪ್ರೀತಿಸಿದೆ. ಅವಳು ಋತುಮತಿ ಆದನಂತರ ದೂರವಾದೆ. ಇದಾದ ನಂತರ ಸ್ವಲ್ಪ ದಿನಗಳಲ್ಲೇ ಸ್ನೇಹಿತರ ಜೊತೆ ಸೇರಿ ವಾರದಲ್ಲಿ ಮೂರ್‍ನಾಲ್ಕು ಬಾರಿ ಶಿಶ್ನದಿಂದ 'ಧಾತು' ಹೊರತೆಗೆಯತೊಡಗಿದೆನು. ಕೆಲವೊಮ್ಮೆ ಹಾಸಿಗೆಯಲ್ಲಿ ಡಬ್ಬು ಮಲಗಿ ಧಾತುವನ್ನು ಹೊರಹಾಕುತ್ತಿದ್ದೆ. ಹೀಗೆ 3-4 ವರ್ಷ ಕಳೆದಿದೆ. ಈಗ ನಾನು ನಪುಂಸಕನಾಗಿದ್ದೇನೆ. ನನ್ನ ಶಿಶ್ನವು ಬಹಳ ಸಪ್ಪೆಯಾಗಿದೆ. ಮನೆಯಲ್ಲಿ ಮದುವೆ ಮಾಡಲು ತಯಾರಿ ನಡೆಸಿದ್ದಾರೆ. ನನಗೆ ಮುಂದೆ ಸಂಭೋಗ ಮಾಡಲು ಆಗುವುದೋ, ಇಲ್ಲವೋ ಎಂದು ಭಯವಾಗಿದೆ. ದಯವಿಟ್ಟು ಸಲಹೆ ನೀಡಿ.*

**- ಬಡಿಗೇರ, ಊರುಬೇಡ.**

**ಸಲಹೆ**

**ಹಸ್ತ ಮೈಥುನ ಮಾಡಿಕೊಳ್ಳುವುದರಿಂದ ಯಾರೂ ನಪುಂಸಕರಾಗುವುದಿಲ್ಲ. ವಿನಾಕಾರಣ ಚಿಂತಿಸಬೇಡಿ. ಮಾನಸಿಕ ಉದ್ವೇಗವನ್ನು ಕಡಿಮೆ ಮಾಡಿಕೊಳ್ಳಿ. ಮನಃ ಶ್ಯಾಸ್ತ್ರಜ್ಞರನ್ನು ಭೇಟಿಯಾಗಿ ಸಲಹೆ ಪಡೆಯಿರಿ. ನಪುಂಸಕತೆಗೆ ಹಲವಾರು ಶಾರೀರಿಕ ಹಾಗೂ ಮಾನಸಿಕ ಜನ್ಯ ಕಾರಣಗಳಿರುತ್ತವೆ. ವೈದ್ಯರ ಸಲಹೆ ಪಡೆದು ನಂತರ ಮದುವೆಯಾಗಿ.**

### ಸಂಶಯ ನಿವಾರಿಸಿ

*ನಾನೊಬ್ಬ ಅವಿವಾಹಿತ ತರುಣ. ಎರಡು ಬಾರಿ ವೇಶ್ಯೆಯ ಸಂಗ ಮಾಡಿದ್ದೇನೆ. ಆದರೆ ಸುರಕ್ಷಿತವಾಗಿದ್ದೇನೆ. ನನ್ನ ಮನಸ್ಸು ಕೊರೆಯುತ್ತಿರುವ ಈ ಕೆಳಗಿನ ಸಂಶಯಗಳನ್ನು ದಯವಿಟ್ಟು ಪರಿಹರಿಸಿರಿ.*

* *ಹೆಣ್ಣು ಉದ್ರೇಕವಾಗಿರುವುದನ್ನು ಹೇಗೆ ತಿಳಿಯುವುದು?*
* *ಸಂಭೋಗ ಸಮಯದಲ್ಲಿ ಮೊದಲು ಸ್ಖಲನವಾಗುವುದು ಹೆಣ್ಣಿಗೋ? ಗಂಡಿಗೋ?*
* *ನನ್ನ ಶಿಶ್ನದ ಬುಡದಲ್ಲಿ ಮರದ ಕೊಂಬೆಯನ್ನು ಮುರಿದರೆ ಹೇಗೆ ಕಾಣುವುದೋ ಹಾಗೆ ಗುಳ್ಳೆಗಳಾಗಿವೆ. ಆ ಜಾಗ ನೋಯುವುದಿಲ್ಲ. 5 ವರ್ಷದಿಂದ ಹಾಗೇ ಇದೆ. ಮದುವೆ ಯಾದ ನಂತರ ತೊಂದರೆಯಾಗಬಹುದೇ?*

**- ಹೆಸರು ಬೇಡ, ದಾವಣಗೆರೆ.**

**ಸಲಹೆ**

**ವೇಶ್ಯೆಯ ಸಂಗ ಮಾಡಿ ರೋಗಗಳಿಗೆ ಬಲಿಯಾಗುವುದಕ್ಕಿಂತ ಮದುವೆಯಾಗಿ ಆರೋಗ್ಯಕರ ದಾಂಪತ್ಯ ಜೀವನ ನಡೆಸಿ.**

* **ಮೊಲೆ ತೊಟ್ಟು ನಿಮಿರುವುದರಿಂದ ಹಾಗೂ ಯೋನಿಯಲ್ಲಿ ರಸೋತ್ಪತ್ತಿಯಾಗುವುದರಿಂದ ಸ್ತ್ರೀ ಉದ್ರೇಕವಾಗಿರುವುದನ್ನು ತಿಳಿಯಬಹುದು.**
* **ಸಾಮಾನ್ಯವಾಗಿ ಪುರುಷನಿಗಿಂತ ಸ್ತ್ರೀಗೆ ಸ್ವಲ್ಪ ತಡವಾಗಿ ಸುಖಾನುಭವವಾಗುತ್ತದೆ. ಇದು ಕೂಡ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ.**
* **5 ವರ್ಷದಿಂದ ಗುಳ್ಳೆಗಳಿವೆಯೆಂದು ಬರೆದಿರುವಿರಿ. ಅಗತ್ಯವಾಗಿ ಚರ್ಮ ಹಾಗೂ ಲೈಂಗಿಕ ರೋಗಗಳ ತಜ್ಞ ವೈದ್ಯರ ಬಳಿ ತೋರಿಸಿ ಚಿಕಿತ್ಸೆ ಪಡೆಯಿರಿ.**




### ಮುಟ್ಟಾದಾಗ ಸೇರಬಹುದೇ ?

*ನಾನು 30 ವರ್ಷದ ಯುವಕ. ಮದುವೆಯಾಗಿದೆ. ನನ್ನ ಹೆಂಡತಿ ಹೊರಗೆ ಆದಾಗ ಸೇರುವುದಕ್ಕೆ ಒಪ್ಪುವುದಿಲ್ಲ. ಇಂಥ ಸಮಯದಲ್ಲಿ ಲೈಂಗಿಕ ಕೇಳಿ ನಡೆಸಿದರೆ ಏನಾಗುವುದು?*

**- ಹೆಸರು ಬೇಡ, ಯಾದಗಿರಿ.**

**ಸಲಹೆ**

**ಮುಟ್ಟಾದಾಗ ಲೈಂಗಿಕ ಸಂಪರ್ಕ ಮಾಡುವುದರಿಂದ ಯಾವುದೇ ವಿಧದ ತೊಂದರೆಯಿಲ್ಲ. ಆದರೆ ನಿಮ್ಮ ಪತ್ನಿಗೆ ಇಷ್ಟವಿಲ್ಲದಿದ್ದಲ್ಲಿ ಬಲವಂತ ಮಾಡಬೇಡಿ.**

### ಲೈಂಗಿಕ ಕ್ರಿಯೆ ಎಂದರೇನು?

*ನಾನು ಪಿ.ಯು.ಸಿ. ವಿದ್ಯಾರ್ಥಿನಿ. ನನ್ನ ಪ್ರಶ್ನೆಗಳು ಹೀಗಿವೆ: ಲೈಂಗಿಕ ಕ್ರಿಯೆ ಎಂದರೇನು? ಅದನ್ನು ಎಲ್ಲರೂ ಮಾಡಲೇ ಬೇಕೆ? ಪತಿ-ಪತ್ನಿಯರು ಒಬ್ಬರ ತೊಡೆಯ ಮೇಲೆ ಒಬ್ಬರು ಕುಳಿತುಕೊಳ್ಳುವುದು ಲೈಂಗಿಕ ಕ್ರಿಯೆಯೇ? ಇದರಿಂದ ಏಡ್ಸ್ ಬರುತ್ತದೆಯೇ?*

**- ಮಧುಮಾಲಿನಿ, ಊರುಬೇಡ**

**ಸಲಹೆ**

**ಸೃಷ್ಟಿಯಲ್ಲಿ ಸಹಜವಾಗಿ ಎಲ್ಲ ಪ್ರಾಣಿಗಳೂ ಸಂತಾನೋತ್ಪತ್ತಿಗಾಗಿ ನಡೆಸುವ ಕ್ರಿಯೆಯೇ ಲೈಂಗಿಕ ಕ್ರಿಯೆ. ಮನುಷ್ಯರಲ್ಲಿ ಈ ಕ್ರಿಯೆಯು ಪತಿ, ಪತ್ನಿಯರಲ್ಲಿ ದೈಹಿಕ ತೃಪ್ತಿಯನ್ನು ನೀಡಿ ಪರಸ್ಪರ ಪ್ರೀತಿ, ವಿಶ್ವಾಸಗಳನ್ನು ಹೆಚ್ಚಿಸಿ ಕುಟುಂಬದ ಬಾಂಧವ್ಯವನ್ನು ಬಲಗೊಳಿಸುವಂತಹದು. ನಿಮಗೆ ಲೈಂಗಿಕತೆಯ ಬಗ್ಗೆ ಹೆಚ್ಚು ತಿಳಿದುಕೊಳ್ಳಬೇಕೆಂದು ಅನ್ನಿಸಿದರೆ ಡಾ.ಸಿ.ಆರ್. ಚಂದ್ರಶೇಖರ್‌ರವರು ಬರೆದಿರುವ ''ಲೈಂಗಿಕ ಅರಿವು 106 ಪ್ರಶ್ನೆಗಳು'' ಎನ್ನುವ ಪುಸ್ತಕ ಓದಿ. ಸಂಗಾತಿಗಳಲ್ಲಿ ಯಾರಾದರೊಬ್ಬರಿಗೆ ಹೆಚ್.ಐ.ವಿ. ವೈರಸ್ ಇದ್ದಲ್ಲಿ ಲೈಂಗಿಕ ಕ್ರಿಯೆಯಿಂದ ಅದು ಇನ್ನೊಬ್ಬರಿಗೂ ಹರಡುತ್ತದೆ. ಇಬ್ಬರೂ ಆರೋಗ್ಯಕರವಾಗಿದ್ದರೆ ಏಡ್ಸ್ ಬರುವುದಿಲ್ಲ.**

### ಶೀಘ್ರ ಸ್ಖಲನದ ಸಮಸ್ಯೆ

*ನನಗೀಗ ವಯಸ್ಸು 33 ವರ್ಷಗಳು ತುಂಬಿ 34ಕ್ಕೆ ಹತ್ತಿರವಾಗುತ್ತಿದೆ, ಅವಿವಾಹಿತ (ಮನೆತನದ ಹಿರಿಯ ಮಗನಾಗಿ ಜವಾಬ್ದಾರಿಯಿದ್ದ ಕಾರಣ). ಈಗ ನಾನು ಮದುವೆಯಾಗಲು ಸೂಕ್ತ ವಧುವಿನ ಅನ್ವೇಷಣೆಯಲ್ಲಿದ್ದೇನೆ.*

*ಸುಮಾರು ನನ್ನ ಪ್ರೌಢಶಾಲಾವಸ್ಥೆಯಿಂದ ಹಿಡಿದು ನನ್ನ ಓದು ಮುಗಿಯುವವರೆಗೂ ಹಸ್ತ ಮೈಥುನವನ್ನು ಕಾಮೋದ್ರೇಕವಾದಾಗ ಮತ್ತು ಒಬ್ಬಂಟಿಯಿದ್ದಾಗ ಮಾಡಿಕೊಂಡು ಬಂದಿರುತ್ತೇನೆ. ಕಾಮದಾಹದಂತಹ ಹಿಂಸೆ ಬೇರೊಂದಿಲ್ಲ*

ಎನಿಸುತ್ತದೆ. ನನ್ನ ಸಮಸ್ಯೆಯೆಂದರೆ, ನನ್ನ ಶಿಶ್ನವು ಮುಂಭಾಗದಲ್ಲಿ ದಪ್ಪವಾಗಿರುತ್ತದೆ, ಉದ್ರೇಕಾವಸ್ಥೆಯಲ್ಲಿ ಉದ್ದನಾಗಿ ಮುಂಭಾಗದಲ್ಲಿ ದಪ್ಪವಾಗಿ ಚಪ್ಪಟೆಯಾಗಿರುತ್ತದೆ. ಆಗಾಗ್ಗೆ ಸ್ವಪ್ನ ಸ್ಖಲನವಾಗುತ್ತದೆ. ಒಬ್ಬ ಸ್ತ್ರೀಯೊಂದಿಗೆ ಕಾಮುಕ ಭಾವನೆಯಿಂದ ಸ್ಪರ್ಶ ಸುಖ ಅನುಭವಿಸಿದರೆ ಸಾಕು ಸ್ಖಲನವಾಗುತ್ತದೆ. ಶೀಘ್ರ ಸ್ಖಲನ ದೊಡ್ಡ ಸಮಸ್ಯೆಯಾಗಿದೆ. ದಯವಿಟ್ಟು ದಾಂಪತ್ಯ ಜೀವನಕ್ಕೆ ಕಾಲಿಡಬೇಕೆಂದಿರುವ, ಈ ಅವಧಿಯಲ್ಲಿ ನನಗೆ ಸಮಂಜಸವಾದ ಪರಿಹಾರವನ್ನು ಸೂಚಿಸಬೇಕೆಂದು ಕೇಳಿಕೊಳ್ಳುತ್ತೇನೆ. ಅಲ್ಲದೆ ಉತ್ತಮವಾದ ಲೈಂಗಿಕ ಮತ್ತು ಮಾನಸಿಕ ತಜ್ಞರ ವಿಳಾಸವನ್ನು ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

**- ಕಾರ್ತಿಕ್, ಊರುಬೇಡ.**

ಸಲಹೆ

**ಶೀಘ್ರ ಸ್ಖಲನಕ್ಕೆ ಸಾಮಾನ್ಯವಾದ ಕಾರಣವೆಂದರೆ ಮಾನಸಿಕ ಒತ್ತಡ ಹಾಗೂ ಉದ್ವೇಗ. ಬೆಂಗಳೂರಿನ ನಿಮ್ಹಾನ್ಸ್ ಆಸ್ಪತ್ರೆಯಲ್ಲಿರುವ ಡಾ.ಸಿ.ಆರ್. ಚಂದ್ರಶೇಖರ್‌ರವರನ್ನು ಭೇಟಿಯಾಗಿ ಚಿಕಿತ್ಸೆ ಹಾಗೂ ಸಲಹೆ ಪಡೆಯಿರಿ. ಅಲ್ಲದೆ ಅವರೇ ಬರೆದಿರುವ "ದಾಂಪತ್ಯ ಸಮಸ್ಯೆ" ಪುಸ್ತಕ ಓದಿ. ಅದರಲ್ಲಿ ಶೀಘ್ರ ಸ್ಖಲನವನ್ನು ತಡೆಗಟ್ಟಲು ಕೆಲವು ವಿವರ ತಿಳಿಸಿದ್ದಾರೆ. ಅದರಿಂದ ನಿಮಗೆ ಖಂಡಿತ ಸಹಾಯವಾಗುತ್ತದೆ.**

## ವಕ್ರ ಜನನೇಂದ್ರಿಯ

ನಾನು 28 ವರ್ಷದ ಅವಿವಾಹಿತ ಹುಡುಗ. ಇದುವರೆಗೂ ಯಾವ ಹೆಣ್ಣಿನೊಂದಿಗೂ ಸಂಭೋಗ ಕ್ರಿಯೆ ಮಾಡಿಲ್ಲ. ನನ್ನ ಶಿಶ್ನ ಹುಟ್ಟಿನಿಂದಲೂ ಸ್ವಲ್ಪ ಬೆಂಡಾಗೇ ಇದೆ. ಉದ್ರೇಕಗೊಂಡಾಗ ಶಿಶ್ನ ನೇರವಾಗಿ ಇರುವುದಿಲ್ಲ. ಸ್ವಲ್ಪ ಬೆಂಡಾಗಿ (ಮೇಲೆ) ಇರುತ್ತದೆ. ಮುಂದೆ ಮದುವೆಯಾಗಿ ಸಂಭೋಗ ಕ್ರಿಯೆಯಲ್ಲಿ ತೊಡಗಿದಾಗ ಏನಾದರೂ ತೊಂದರೆಯಾಗಬಹುದೇ ? ತಿಳಿಸಿ. ಮನೆಯಲ್ಲಿ ಆರ್ಥಿಕ ತೊಂದರೆ ಇದೆ. ಆದ ಕಾರಣ ಮದುವೆ ಆಗದೇ ಲೈಂಗಿಕ ಕ್ರಿಯೆಯಲ್ಲಿ ತೊಡಗದೇ ಹಾಗೆಯೇ ಇದ್ದರೆ, ಆರೋಗ್ಯಕ್ಕೆ ಏನಾದರೂ ತೊಂದರೆ ಇದೆಯೇ ? ದಯವಿಟ್ಟು ತಿಳಿಸಿ.

**- ಅವಿವಾಹಿತ, ಹೆಸರು ಊರುಬೇಡ.**

ಸಲಹೆ

**ನಿಮ್ಮ ಶಿಶ್ನ ವಾಲುತ್ತದೆಯೆಂದು ಚಿಂತೆ ಮಾಡಬೇಡಿ. ಅದರಿಂದ ಮದುವೆಯಾಗಿ ಲೈಂಗಿಕ ಕ್ರಿಯೆ ನಡೆಸಲು ಯಾವುದೇ ತೊಂದರೆಯಿಲ್ಲ. ಆರ್ಥಿಕ ತೊಂದರೆ ಎಲ್ಲರಿಗೂ ಇದ್ದದ್ದೇ ಹಾಗೆಂದು ಮದುವೆ ಮಾಡಿಕೊಳ್ಳದಿರುವುದು ಯಾವ ನ್ಯಾಯ? ಮದುವೆಯಾಗದೇ ಇದ್ದರೂ, ಲೈಂಗಿಕ ಕ್ರಿಯೆಯಲ್ಲಿ ತೊಡಗದೇ ಇದ್ದರೂ ಅದರಿಂದ ಆರೋಗ್ಯಕ್ಕೆ ಯಾವುದೇ ವಿಧವಾದ ತೊಂದರೆ ಕಂಡುಬರುವುದಿಲ್ಲ.**

## ವಿಷ ಕುಡಿಯುವೆ

ನಾನು ಪ್ರೌಢಶಾಲೆಯಲ್ಲಿ ಅಟೆಂಡರ್ ಕೆಲಸ ನಿರ್ವಹಿಸುತ್ತಾ ಜೀವನ ಸಾಗಿಸುತ್ತಿದ್ದೇನೆ. ನನಗೆ ಇಬ್ಬರು ಹೆಣ್ಣು ಮಕ್ಕಳು. ಒಬ್ಬಳಿಗೆ 16 ವರ್ಷ, ಇನ್ನೊಬ್ಬಳಿಗೆ 19 ವರ್ಷ. 16 ವರ್ಷದವಳು 10ನೇ ತರಗತಿ ಓದುತ್ತಿದ್ದು ಅವಳು ಒಬ್ಬ ಹುಡುಗನ ಸಹವಾಸ ಮಾಡಿ 2 ರಿಂದ ಮೂರು ತಿಂಗಳ ಗರ್ಭಿಣಿಯಾಗಿದ್ದಾಳೆ. ಆದಕ್ಕೆ ನನಗೆ ದಾರಿ ಕಾಣದಾಗಿದೆ. ಇದಕ್ಕೆ ನೀವೇ ದೇವರೆಂದು ನಂಬಿ ಈ ಪತ್ರ ಬರೆದಿರುತ್ತೇನೆ. ನೀವು ದೇವರಾಗದಿದ್ದರೆ ನನಗೆ ವಿಷ(Poison) ದೇವರಾಗುತ್ತದೆ. ನಾನು ಅವಳನ್ನು ಒಬ್ಬ ಡಾಕ್ಟರ್ ಹತ್ತಿರ ತೋರಿಸಿದೆ. ಆದಕ್ಕೆ ಬಾಯಿಗೆ ಬಂದಷ್ಟು ದುಡ್ಡು ಕೇಳುತ್ತಾರೆ. ಒಂದು ಇಂಜೆಕ್ಷನ್ ಮಾಡಿ ಅವಳನ್ನು ಮನಸಾರೆ ಹಿಚುಕಾಡಿ ಏನೇನೊ ಮಾಡುತ್ತಾರಂತೆ. ಆದಕ್ಕೆ ಅವಳು ಸಾಯುತ್ತೇನೆ ಎನ್ನುತ್ತಾಳೆ. ಆಸ್ಪತ್ರೆಗೆ ಹೋಗಲು ಹಿಂಜರಿಯುತ್ತಾಳೆ. ಇದಕ್ಕೆ ತಕ್ಕ ಇಂಜಕ್ಷನ್ ಟ್ಯೂಬಿನ ಹೆಸರು ತಿಳಿಸುತ್ತೀರೆಂದು ನಂಬಿರುತ್ತೇನೆ. ನೀವು ಅದರ ಹೆಸರು ನಿಮ್ಮ ಸಂಚಿಕೆಯಲ್ಲಿ ತಿಳಿಸಿದರೆ ನಮ್ಮ ಹಳ್ಳಿಯ ಡಾಕ್ಟರ್ ಹತ್ತಿರ ಇಂಜಕ್ಷನ್ ಮಾಡಿಸುತ್ತೇನೆ. ಮುಂದಿನ ಸಂಚಿಕೆಗಾಗಿ ಕಾಯುತ್ತೀರುತ್ತೇನೆ. ದಯಮಾಡಿ ನನ್ನ ಮರ್ಯಾದೆ ಕಾಪಾಡುವುದು ಬಿಡುವುದು ನಿಮ್ಮ ಕೈಯಲಿದೆ.

**- ಜಿ.ಎಮ್.ಹೆಚ್., ಊರುಬೇಡ.**

ಸಲಹೆ

**'ವಿಷ'ವನ್ನು ತೆಗೆದುಕೊಳ್ಳುವ ವಿಷಯ ಬಿಟ್ಟುಬಿಡಿ. ಒಬ್ಬ ತಂದೆಯಾಗಿ ಮಗಳ ಜೀವನ ಸರಿಪಡಿಸಲು ಪ್ರಯತ್ನಿಸುತ್ತಿರುವಿರಿ. ಇಂತಹ ಮಾನವೀಯ ಗುಣವುಳ್ಳ ತಂದೆಯನ್ನು ಪಡೆದಿರುವ ನಿಮ್ಮ ಮಗಳು ಧನ್ಯೆ. ನಿಮ್ಮ ಮಗಳಿಗೆ ಇನ್ನೂ 16 ವರ್ಷವಿದ್ದು, ಯಾವುದೋ ಹುಡುಗನ ಸಹವಾಸದಿಂದ ಗರ್ಭಿಣಿಯಾಗಿರುವ ವಿಚಾರ ತಿಳಿಸಿರುವಿರಿ. ಓದಬೇಕಾದ ಈ ವಯಸ್ಸಿನಲ್ಲಿ ಅನರ್ಥ ಮಾಡಿಕೊಂಡಿದ್ದು ನಿಜಕ್ಕೂ ವಿಷಾದನೀಯ. ಈಗ 2 ರಿಂದ ಮೂರು ತಿಂಗಳ ಗರ್ಭಿಣಿ ಎಂದು ಬರೆದಿರುವಿರಿ. ಯಾವುದೇ ಇಂಜಕ್ಷನ್‌ನಿಂದ ಗರ್ಭಪಾತ ಮಾಡಿಸಲು ಸಾಧ್ಯವಿಲ್ಲ. ನಿಮಗೆ ಎರಡು ವಿಧದ ಪರಿಹಾರಗಳಿವೆ. ಮೊದಲನೆಯದೆಂದರೆ ನಿಮ್ಮ ಊರಿನಲ್ಲಿರುವ ಪ್ರಸೂತಿ ಹಾಗೂ ಸ್ತ್ರೀರೋಗ ತಜ್ಞ ಮಹಿಳಾ ವೈದ್ಯರಲ್ಲಿಗೆ ಮಗಳನ್ನು ಕರೆದುಕೊಂಡುಹೋಗಿ ವಿಷಯವನ್ನೆಲ್ಲ ಅರಿಕೆ ಮಾಡಿಕೊಂಡರೆ ಅವರು ಅವಳನ್ನು ಪರೀಕ್ಷಿಸಿ ಸುರಕ್ಷಿತ ಗರ್ಭಪಾತ (MTP - Medical Termination of Pregnency) ಮಾಡುತ್ತಾರೆ. ಎಂ.ಟಿ.ಪಿ. ಯನ್ನು ಸುಸಜ್ಜಿತ ಆಸ್ಪತ್ರೆಯಲ್ಲಿ ತಜ್ಞ ವೈದ್ಯರಿಂದ ಮಾಡಿಸುವುದರಿಂದ ಮುಂದೆ ನಿಮ್ಮ ಮಗಳ ಆರೋಗ್ಯಕ್ಕೆ ಯಾವುದೇ ವಿಧವಾದ ತೊಂದರೆಯಿರುವುದಿಲ್ಲ. ಈಗ ವೈದ್ಯರಿಂದ ಗರ್ಭಪಾತ ಕಾನೂನುಬದ್ಧವಾದುದು. ನಗರಗಳಲ್ಲಿ ಕುಟುಂಬ ಯೋಜನಾ ಕೇಂದ್ರಗಳಲ್ಲಿ ಹಾಗೂ ಸರಕಾರಿ ಆಸ್ಪತ್ರೆಗಳಲ್ಲಿ ಉಚಿತವಾಗಿ ವೈದ್ಯಕೀಯ ಗರ್ಭಪಾತ ಮಾಡುತ್ತಾರೆ. ಎರಡನೆಯ ಪರಿಹಾರವೆಂದರೆ ಆ ಹುಡುಗನ ಮನೆಯವರಿಗೆ ವಿಷಯ ತಿಳಿಸಿ ಆದಷ್ಟು ಬೇಗ ಅವರಿಬ್ಬರ ಮದುವೆ ಮಾಡುವುದು. ಹೆಣ್ಣಿನ ಬದುಕು ಬಹು ಸೂಕ್ಷ್ಮವಾದುದು. ತುಂಬ ಎಚ್ಚರಿಕೆಯಿಂದಿರಬೇಕಾಗುತ್ತದೆ ಎಂದು ಅವಳಿಗೆ ತಿಳಿಹೇಳಿ.**

ಕೌಟುಂಬಿಕ ಸಮಸ್ಯೆಗಳಿಗೆ ಪರಿಹಾರ ಸೂಚಿಸುವ **'ಆಪ್ತ ಸಮಾಲೋಚನೆ'** ಹಾಗೂ ವೈದ್ಯಕೀಯ ಸಮಸ್ಯೆಗಳನ್ನು ಪರಿಹರಿಸುವ **"ವಯಸ್ಕರ ಸಂದೇಹ ಸಲಹೆ"** ಅಂಕಣಗಳನ್ನು ಪ್ರತಿ ತಿಂಗಳು ನಿಗದಿತ ಮಧ್ಯ ಪುಟಗಳಲ್ಲೇ ಪ್ರಕಟಿಸಲಾಗುವುದು. ಓದುಗರು ಈ ಪುಟಗಳಲ್ಲಿನ ಮಾಹಿತಿಯನ್ನು ಸಮಯಾನುಸಾರ ಬಳಸಿಕೊಳ್ಳಲು ಅನುವಾಗುವಂತೆ ಬಿಡಿಸಿಟ್ಟುಕೊಳ್ಳಬಹುದು.

**ನಿಮ್ಮ ಸಮಸ್ಯೆಗಳನ್ನು ಈ ವಿಳಾಸಕ್ಕೆ ಕಳಿಸಿ :**

ಸಂಪಾದಕರು, ಬಿಸಿಲ ಬದುಕು,

ಅಂಕುರ ಪ್ರಕಾಶನ ಅಂಚೆ ಪೆಟ್ಟಿಗೆ : 7951 ಬಸವೇಶ್ವರನಗರ, ಬೆಂಗಳೂರು - 560 079.

## ದ್ವಂದ್ವ ಪರಿಸ್ಥಿತಿ

*ನಾನು 26 ವರ್ಷದ ಯುವಕ. ಎಂ.ಕಾಂ. ಪದವೀಧರ. ಸುಮಾರು ಮೂರು ವರ್ಷಗಳಿಂದ ಪಕ್ಕದ ಮನೆಯ ಹುಡುಗಿಯೊಬ್ಬಳನ್ನು ಮನಸಾರೆ ಪ್ರೀತಿಸುತ್ತಿದ್ದೆ. ಅವಳೂ ಕೂಡ ನನ್ನನ್ನು ತುಂಬಾ ಹಚ್ಚಿಕೊಂಡಿದ್ದಳು. ನಮ್ಮಿಬ್ಬರ ಜಾತಿ ಬೇರೆ ಬೇರೆ ಆದರೂ ಇಬ್ಬರೂ ದೂರ ಹೋಗಿ ಮದುವೆಯಾಗಲು ನಿರ್ಧರಿಸಿದ್ದೆವು. ಆದರೆ ಇದ್ದಕ್ಕಿದ್ದಂತೆ ಅವಳ ಮದುವೆ ಫಿಕ್ಸ್ ಆಗಿ ಕಳೆದ ತಿಂಗಳು ಅವಳ ಮದುವೆಯೂ ನಡೆದುಹೋಯಿತು. ನಾನು ಆ ಸಮಯದಲ್ಲಿ ಊರಲ್ಲಿ ಇರಲಿಲ್ಲ. ಈ ಮದುವೆಗೆ ಅವಳ ಸಮ್ಮತಿ ಇತ್ತೆಂದು ನನಗೆ ನಂತರ ತಿಳಿಯಿತು.*

*ನಾನು ಅವಳ ಕಪಟ ಪ್ರೀತಿಯನ್ನು ನಂಬಿ ಮೋಸ ಹೋದೆ. ಮನೆಯಲ್ಲಿ ಮದುವೆಗೆ ಒತ್ತಾಯಿಸುತ್ತಿದ್ದಾರೆ. ಒಬ್ಬಳಿಗೆ ಮನಸ್ಸು ಕೊಟ್ಟು ಬೇರೊಬ್ಬಳಿಗೆ ಮೈ ಕೊಡಲು ಇಷ್ಟವಾಗುತ್ತಿಲ್ಲ. ಈಗ ನಾನೇನು ಮಾಡಲಿ?*

***-ಅಭಿಮಾನಿ, ಗಂಗಾವತಿ***

**ಸಲಹೆ**

**ನಿಮ್ಮನ್ನು ಪ್ರೀತಿಸಿದ್ದ ಹುಡುಗಿಯದು ಕಪಟ ಪ್ರೀತಿಯೆಂದು ನೀವೇ ಬರೆದಿರುವಿರಿ. ಅವಳ ಮದುವೆ ಆಗಿದೆಯೆಂದು ತಿಳಿಸಿರುವಿರಿ. ಹಾಗಿರುವಾಗ ನೀವೇಕೆ ಅವಳ ಬಗ್ಗೆ ವೃಥಾ ಚಿಂತಿಸುವಿರಿ ? ಮನೆಯಲ್ಲಿ ಎಲ್ಲರೂ ಒಪ್ಪಿದ ಹುಡುಗಿಯನ್ನು ಮದುವೆಯಾಗಿ ಕಾಯಾ, ವಾಚಾ, ಮನಸಾ ಅವಳನ್ನೇ ಪ್ರೀತಿಸಿ ಸಂತೋಷದಿಂದಿರಿ.**

## ನನ್ನದು ವಿಚಿತ್ರ ವರ್ತನೆಯೇ?

*ಹದಿನೇಳು ವರ್ಷದ ನಾನು ಪಿ.ಯು.ಸಿ ಪ್ರಥಮ ವರ್ಷದಲ್ಲಿ ಓದುತ್ತಿರುವೆ. ಶಾಲೆಯಿಂದ ಕಾಲೇಜಿನವರೆಗೆ ನನ್ನ ಗೆಳತಿಯರು ನನ್ನನ್ನು ತಮ್ಮವಳಾಗಿ ತಿಳಿದುಕೊಂಡದ್ದೇ ಇಲ್ಲ.*

*ಶಾಲೆಯಲ್ಲಿ ನಾನು ನನ್ನ ಗುಂಪಿನ ಹುಡುಗಿಯರ ಜೊತೆಯಲ್ಲೇ ಇರುತ್ತಿದ್ದೆ. ನಾವೆಲ್ಲರೂ ಕೂಡಿ ಒಟ್ಟು ಐದು ಮಂದಿ ಇದ್ದೆವು. ಅವರಲ್ಲಿ ಮೂವರು ನನ್ನನ್ನು ಯಾವಾಗಲೂ ಚುಡಾಯಿಸುತ್ತಿದ್ದು. ನನ್ನನ್ನು ದೂರ ಮಾಡುತ್ತಿದ್ದರು. ಅವರ ಮಾತನ್ನು ಹಚ್ಚಿಕೊಳ್ಳದೇ ನಾನು ಅವರ ಜೊತೆಯಲ್ಲೇ ನಗುನಗುತ್ತಾ ಇದ್ದೆ. ನನಗೆ ನನ್ನ ಗುಂಪಿನಲ್ಲಿ ಒಬ್ಬಳು ಮಾತ್ರ ಬಹಳ ಇಷ್ಟವಾಗುತ್ತಿದ್ದಳು. ಆದರೆ ಈಗ ಅವಳು ಬೇರೆ ಕಾಲೇಜಿನಲ್ಲಿ ಓದುತ್ತಿದ್ದಾಳೆ. ಇನ್ನು ಉಳಿದ ಮೂರು ಜನರು ನಮ್ಮ ಕಾಲೇಜಿನಲ್ಲೇ ಇದ್ದಾರೆ. ಆದರೆ ಬೇರೆ ಬೇರೆ ಕ್ಲಾಸಿನಲ್ಲಿ ಓದುತ್ತಿದ್ದಾರೆ. ಯಾವಾಗಲೋ ಒಂದು ಸಲ ಭೇಟಿಯಾದರೆ ನನ್ನ ಜೊತೆ ಸರಿಯಾಗಿ ಮಾತನಾಡುವುದಿಲ್ಲ. ಎಲ್ಲರೂ ತಮ್ಮ ತಮ್ಮ ಕ್ಲಾಸಿನ ಹುಡುಗಿಯರೊಂದಿಗೆ ಮಾತಿನಲ್ಲಿ ಮುಳುಗಿ ಹೋಗಿದ್ದವರ ಹಾಗೆ ನಟಿಸುವುದು, ನೋಡಿದರೂ, ನೋಡದ ಹಾಗೆ ನಟಿಸುವುದು, ಬೇರೆಯವರ ಜೊತೆ ನನ್ನ ಬಗ್ಗೆ ಏನೇನೋ ಹೇಳುವುದು ಮಾಡುತ್ತಾರೆ. ನನ್ನ ಗುಂಪಿನ ಹುಡುಗಿಯರಲ್ಲದೆ ಬೇರೆ ಹುಡುಗಿಯರು ಕೂಡ ನನ್ನ ಜೊತೆ ಹೀಗೇ ನಡೆದುಕೊಳ್ಳುವರು. ಈ ಲೋಕದಲ್ಲಿ ನನಗೆ ಕರುಣೆ, ಪ್ರೀತಿ ತೋರುವ ಸ್ನೇಹಿತರ ಭಾಗ್ಯವಿದೆಯೋ ಇಲ್ಲವೊ? ಬೇರೆ ಕಾಲೇಜಿನಲ್ಲಿ ನನ್ನ ಗೆಳತಿಯು ಇದ್ದಾಳೆ. ಅವಳ ಹಿತೈಷಿ ನಾನು. ಅವಳೂ ಕೂಡ ಎಲ್ಲರ ಹಾಗೆ ನನ್ನನ್ನು ತಿಳಿದುಕೊಂಡರೆ ಹೇಗೆ? ಎಲ್ಲ ಹುಡುಗಿಯರ ಜೊತೆಗೆ ಹೇಗೆ ನಡೆದು ಕೊಳ್ಳಬೇಕು. ಇಂಥ ಪರಿಸ್ಥಿತಿಯಲ್ಲಿ ಏನು ಮಾಡಬೇಕೆಂದು ದಯವಿಟ್ಟು ಸಲಹೆ ನೀಡಿ.*

***-ನೊಂದ ವಿದ್ಯಾರ್ಥಿನಿ, ನಮ್ಮೂರು***

**ಸಲಹೆ**

**ನೀವು ಅನ್ಯಥಾ ಚಿಂತಿಸುತ್ತಿರುವಿರಿ. ನಿಮ್ಮೊಡನೆ ಯಾರು ಸ್ನೇಹ, ಸೌಹಾರ್ದದಿಂದ ನಡೆದುಕೊಳ್ಳುವರೋ ಅಂತಹವರ ಸ್ನೇಹ ಬೆಳೆಸಿ. ನಿಮ್ಮಲ್ಲಿ ಆತ್ಮವಿಶ್ವಾಸದ ಕೊರತೆ ಎದ್ದು ಕಾಣುತ್ತಿದೆ. ಎಲ್ಲಕ್ಕಿಂತ ಮೊದಲು ಆತ್ಮ ವಿಶ್ವಾಸವನ್ನು ಬೆಳೆಸಿಕೊಳ್ಳಿ. ಚುಡಾಯಿಸುವ ಗೆಳತಿಯರ ಬಗ್ಗೆ ಗಮನ ಕೊಡಬೇಡಿ. ಬೇರೆ ಕಾಲೇಜಿನಲ್ಲಿ ಓದುತ್ತಿರುವ ನಿಮ್ಮ ಆತ್ಮೀಯ ಗೆಳತಿಗೆ ನಿಮ್ಮ ಸ್ವಭಾವ ಚೆನ್ನಾಗಿ ತಿಳಿದಿದ್ದರೆ, ಅವಳು ನಿಮ್ಮ ಬಗೆಗಿನ ಯಾವುದೇ ಕೆಟ್ಟ ಅಭಿಪ್ರಾಯಕ್ಕೆ ಖಂಡಿತ ಕಿವಿಗೊಡುವುದಿಲ್ಲ. ಅನವಶ್ಯಕವಾಗಿ ಇಂತಹವನ್ನೆಲ್ಲ ಮನಸ್ಸಿಗೆ ಹಚ್ಚಿಕೊಳ್ಳದೇ ಓದಿನ ಬಗ್ಗೆ ಗಮನಕೊಡಿ. ಸಾಹಿತ್ಯ, ಸಂಗೀತದಂತಹ ಯಾವುದಾದರೊಂದು ಹವ್ಯಾಸ ಬೆಳೆಸಿಕೊಳ್ಳಿ.**

## ತೆಳ್ಳಗಾಗುವ ಆಹಾರ

*ನಾನು 10 ನೇ ತರಗತಿಯಲ್ಲಿ ಓದುತ್ತಿರುವ 15 ವರ್ಷದ ವಿದ್ಯಾರ್ಥಿನಿ. ನನ್ನ ತೂಕ 45 ಕೆ.ಜಿ. ಇದೆ. ಎತ್ತರ ಸ್ವಲ್ಪ ಕಡಿಮೆ. ಈ ತೂಕಕ್ಕೆ ಎಷ್ಟು ಎತ್ತರ ಇರಬೇಕು? ನಾನು ದಿನಂಪ್ರತಿ 15-30 ನಿಮಿಷ ಸ್ಕಿಪ್ಪಿಂಗ್ ಮಾಡುತ್ತೇನೆ. ಇಷ್ಟೇ ಸಾಕೋ ಹೆಚ್ಚು ಮಾಡಬೇಕೇ ? ಹಾಗೆಯೇ ತೆಳ್ಳಗಾಗಲು ಎಂಥ ಆಹಾರ ಸೇವಿಸಬೇಕೆಂದು ತಿಳಿಸಿ.*

***-ಸುಗುಣಾ, ಊರುಬೇಡ.***

**ಸಲಹೆ**

**ನಿಮ್ಮ ಎತ್ತರ ಎಷ್ಟಿದೆಯೆಂದು ತಿಳಿಸಿದ್ದರೆ ದೇಹದ ತೂಕವು ಎತ್ತರ, ವಯಸ್ಸನ್ನು ಅವಲಂಬಿಸಿ ಎಷ್ಟಿರಬೇಕೆಂದು ಹೇಳಬಹುದಿತ್ತು. ಸ್ಕಿಪ್ಪಿಂಗ್ ಮುಂದುವರೆಸಿ. ಇದರ ಜೊತೆಗೆ ಪ್ರತಿದಿನ 2 ರಿಂದ 4 ಕಿ.ಮಿ. ನಷ್ಟು ಬಿರುಸು ನಡಿಗೆ ನಡೆಯಿರಿ. ಕರಿದ ಪದಾರ್ಥ, ಸಿಹಿ ತಿನಿಸುಗಳು, ಕಾಫಿ, ಐಸ್‌ಕ್ರೀಂ, ಚಾಕಲೇಟ್ ಮುಂತಾದುವುಗಳನ್ನು ಸೇವಿಸಬೇಡಿ. ಆಹಾರದಲ್ಲಿ ಹೆಚ್ಚು ತರಕಾರಿ, ಸೊಪ್ಪುಗಳನ್ನು ಸೇವಿಸಿ. ನೀರು ಹೆಚ್ಚು ಕುಡಿಯಿರಿ.**

## ಮದುವೆಯಾಗಲೇ ?

*ನಾನು ಎಸ್.ಎಸ್.ಎಲ್.ಸಿ ಪಾಸ್ ಆಗಿದ್ದೇನೆ. ನಮ್ಮ ತಾಯಿಗೆ ಬಿ.ಪಿ. ಹಾಗೂ ಶುಗರ್ ಇರುವುದರಿಂದ ಮನೆಯಲ್ಲಿ ಹೆಣ್ಣು ಮಕ್ಕಳು ಮಾಡುವ ಎಲ್ಲಾ ಕೆಲಸ ಮಾಡುತ್ತಿದ್ದೇನೆ. ನನಗೆ ತಂದೆ ಇಲ್ಲ, ಸರಕಾರಿ ನೌಕರಿ ಸಿಗದೆ ಖಾಸಗಿ ಅಂಗಡಿಯಲ್ಲಿ ನೌಕರಿಗಿದ್ದೇನೆ. ಬರುವುದು ಬರೀ 800 ರೂ. ಸಂಬಳ. ಹಾಗಾಗಿ ಮದುವೆ ಮಾಡಿಕೊಳ್ಳಲು ಧೈರ್ಯ ಬರುತ್ತಿಲ್ಲ. ಏನು ಮಾಡಲಿ ?*

***-ಒಬ್ಬ ಹುಡುಗ, ಶಿರಸಿ***

**ಸಲಹೆ**

**ಖಂಡಿತ ಮದುವೆ ಮಾಡಿಕೊಳ್ಳಿ, ಸಾಧ್ಯವಾದರೆ ಈಗಿರುವ ಕೆಲಸಕ್ಕಿಂತ ಹೆಚ್ಚು ಸಂಬಳ ಬರುವ ಕೆಲಸಕ್ಕೆ ಪ್ರಯತ್ನಿಸಿ. ಅಲ್ಲದೇ ಮದುವೆಯಾಗುವ ಹುಡುಗಿಗೆ ನಿಮ್ಮ ಆರ್ಥಿಕ ತೊಂದರೆಯನ್ನು ಮೊದಲೇ ತಿಳಿಸಿದರೆ, ಆಕೆಯೂ ಮನೆಯಲ್ಲೇ ಟೈಲರಿಂಗ್ ಇಲ್ಲವೇ ಹಪ್ಪಳ ತಯಾರಿಕೆಯಂತಹ ಯಾವುದಾದರೊಂದು ಕೆಲಸದಲ್ಲಿ, ತನ್ನನ್ನು ತೊಡಗಿಸಿಕೊಂಡು ನಿಮ್ಮೊಂದಿಗೆ ಕೈಜೋಡಿಸಿದರೆ ಜೀವನ ಸುಗಮವಾಗಿ ಸಾಗುತ್ತದೆ.**

## ಹಿಂಬಾಲಿಸುವ ಹುಡುಗ

*ನಮ್ಮ ಸಂಬಂಧಿಕರೊಬ್ಬರ ಹುಡುಗಿ ದಿನಾಲೂ ಕಾಲೇಜಿಗೆ ಹೋಗುತ್ತಾಳೆ. ಒಂದು ಹುಡುಗ ಅವಳನ್ನು ದಿನಾಲೂ ಫಾಲೋ ಮಾಡ್ತಾನೆ.*

*ದಿನಕ್ಕೆ 4-5 ಸರ್ತಿ ಅವಳ ಮನೆ ಹತ್ತಿರ ಸುಳಿದಾಡ್ತಾನೆ. ಹುಡುಗನ ಕುಟುಂಬದ ಹಿನ್ನೆಲೆ ಚೆನ್ನಾಗಿ ಇಲ್ಲ. ಅದ್ರಲ್ಲೂ ಹುಡುಗನ ಗುಣ ನಡವಳಿಕೆಗಳು ಸರಿ ಇಲ್ಲ. ಹುಡುಗ ಅವಳಿಗೆ ಪತ್ರ ಬರೆದು (ಹುಡುಗಿ ಬೇರೆ ಊರಲ್ಲಿ ಇದ್ದಾಗ) ಅದರಲ್ಲಿ ಪ್ರೀತಿ ವ್ಯಕ್ತಪಡಿಸಿದ್ದಾನೆ. ಈ ವಿಷಯ ತಿಳಿದ ಹುಡುಗಿಯ ಮನೆಯವರು ಅವಳಿಗೆ ಬುದ್ಧಿವಾದ ಹೇಳೋಕೆ ಹೋದ್ರೆ, ಅವಳು ಅವನು ನನ್ನ ಹಿಂದೆ ಹಿಂದೆ ಬಂದ್ರೆ ನಾನ್ ಏನ್ ಮಾಡ್ಲಿ ನಾನು ಅವನ್ನ ಪ್ರೀತಿಸ್ತಾ ಇಲ್ಲ ಅಂತ ಹೇಳ್ತಿದ್ದಾಳೆ. ಅವಳು ಮೊದಲು ಈ ರೀತಿ ಇರಲಿಲ್ಲ. ಅವಳ ಈ ರೀತಿಯ ಮನಃ ಪರಿವರ್ತನೆ ಮನೆಯಲ್ಲಿನ ಎಲ್ಲರಿಗೂ ಆಶ್ಚರ್ಯ ಉಂಟುಮಾಡಿದೆ. ಹುಡುಗನಿಗೆ ಸರಿಯಾಗಿ ಬುದ್ಧಿ ಹೇಳಬೇಕಾದ ಹುಡುಗಿ ಅವನನ್ನ ನೋಡ್ತಾಳೆ. ಅವಳ ಸಹಜ ವರ್ತನೆಗೆ ನಾನು ಏನು ಮಾಡಲಿ ತಿಳಿಸಿ.*

**-ಪವಿತ್ರ, ಊರುಬೇಡ.**

**ಸಲಹೆ**

**ಅವಳು ತಾನು ಅವನನ್ನು ಪ್ರೀತಿಸುತ್ತಿಲ್ಲ ಎಂದು ಹೇಳಿರುವಾಗ ಮತ್ತೇಕೆ ನಿಮಗೆ ಯೋಚನೆ ? ಹುಡುಗಿ ತನ್ನ ಕಡೆಗೆ ಗಮನ ಹರಿಸುತ್ತಿಲ್ಲ ಎಂದು ತಿಳಿದರೆ, ಆ ಹುಡುಗ ಖಂಡಿತ ಹಿಂಬಾಲಿಸುವುದಿಲ್ಲ. ನೀವೇ ಹುಡುಗನಿಗೆ ಹುಡುಗಿ ಪ್ರೀತಿಸುತ್ತಿಲ್ಲ ಎನ್ನುವ ವಿಷಯ ತಿಳಿಸಿಬಿಡಿ.**

## ಕಣ್ಣ ಪ್ರೇಮ

*ನಾನು 8 ನೇ ತರಗತಿಯಿಂದಲೇ ಒಂದು ಹುಡುಗಿಯನ್ನು ಪ್ರೀತಿಸುತ್ತಾ ಬಂದೆ. ಆ ಹುಡುಗಿಗೂ ನಾನೆಂದರೆ ತುಂಬಾ ಇಷ್ಟ. ಆದರೆ ನಾವಿಬ್ಬರೂ ಇನ್ನು ಮಾತನಾಡಿಸಿಯೇ ಇಲ್ಲ. ನಾವಿಬ್ಬರೂ ಮಾತನಾಡಿಸೋಣವೆಂದು ಕಾಯ್ದುಕೊಂಡಿರುವಾಗ ರಾಮ- ಸೀತೆಯರ ಬಾಳ್ದೋಣಿಯನ್ನು ಮುಳುಗಿಸಲು ಬಂದ ರಾವಣನಂತೆ ಅಡ್ಡವಾಗಿ ಬಂದು ಬಿಡುತ್ತಾರೆ ಹಲವರು. ಆದರೆ ಕಣ್ಣಿನಿಂದಲೇ ನಾವಿಬ್ಬರೂ ಪ್ರೀತಿಸುತ್ತಿದ್ದೇವೆ. ನೋಡಿ ನಗುವುದು, ನಾಚಿಕೆಗೊಳ್ಳುವುದೂ ಆಗಿದೆ. ಈ ಎರಡು ಮಿಡಿದ ಹೃದಯಗಳು ಘಾಸಿಗೊಂಡಿವೆ. ದಯವಿಟ್ಟು ಸಾಂತ್ವನ ನೀಡಿ.*

**-ಹೆಸರು, ಊರುಬೇಡ.**

**ಸಲಹೆ**

**8ನೇ ತರಗತಿಯಿಂದ ಪ್ರೀತಿಸುತ್ತಿದ್ದೀರಿ ಎಂದು ಬರೆದಿರುವಿರಿ. ಆ ವಯಸ್ಸಿನಲ್ಲಿ ಪ್ರೀತಿಯ ಬಗ್ಗೆ ಸರಿಯಾದ ತಿಳುವಳಿಕೆ ಇರಲು ಸಾಧ್ಯವಿಲ್ಲ. ಈಗ ನಿಮಗೆ ಎಷ್ಟು ವರ್ಷ ಎಂದು ತಿಳಿಸಿಲ್ಲ. ಧೈರ್ಯಮಾಡಿ ನಿಮ್ಮ ಪ್ರೀತಿಯನ್ನು ಅವಳ ಮುಂದೆ ವ್ಯಕ್ತಪಡಿಸಿ. ಅವಳಿಗೂ ಪ್ರೀತಿ ಇರುವುದಾದರೆ ಮನೆಯವರಿಗೆ ತಿಳಿಸಿ ಮದುವೆಯಾಗಿ.**

## ಉದುರುವ ತಲೆ ಗೂದಲು

*ನನ್ನ ಮುಖದ ಮೇಲೆ ಗುಳ್ಳೆಗಳು ಏಳುತ್ತಿವೆ. ತಲೆಯಲ್ಲಿ ಹೊಟ್ಟು ಇದೆ. ಕೂದಲು ಉದುರುತ್ತಿವೆ. ಶಾಂಪು ಹಚ್ಚಿದರೆ ಅಥವಾ ಹೆಚ್ಚಾಗಿ ಚಿಂತೆ ಮಾಡುತ್ತ ಕುಳಿತರೆ ಕೂದಲು ಉದುರುತ್ತವೆ ಎನ್ನುತ್ತಾರೆ. ಆದರೆ ನನಗೆ ಹಾಗೆ ಅನ್ನಿಸುತ್ತಿಲ್ಲ. ನಿಮ್ಮ ಉತ್ತರವೇನು?*

**-ಹೆಸರು ಬೇಡ, ಮೈಸೂರು**

*ನಾನು 26 ವರ್ಷದ ಅವಿವಾಹಿತೆ. ನನ್ನ ತಲೆಯ ಕೂದಲು ಸಂಪೂರ್ಣವಾಗಿ ಉದುರಿಹೋಗುತ್ತಿದೆ. ಕೂದಲು ಸಂಪೂರ್ಣ ನಾಶವಾದರೆ ನನ್ನನ್ನು ಯಾರು ಮದುವೆಯಾಗುತ್ತಾರೆ ಎಂದು ತುಂಬಾ ಮಾನಸಿಕ ಕೊರಗಾಗಿದೆ. ನಾನು ಆರೋಗ್ಯವಾಗಿರುವೆ. ಆದರೆ ನನ್ನ ದೇಹದಲ್ಲಿ ತುಂಬಾ ಉಷ್ಣತೆ ಇರುವುದು ಮತ್ತು ಕೂದಲನ್ನು ತೊಳೆಯಲು ಪದೇ ಪದೇ ಶಾಂಪು ಅಥವಾ ಸಾಬೂನನ್ನು ನಾನು ಬದಲಾಯಿಸುವುದಿಲ್ಲ. ನನ್ನದು ಹಳ್ಳಿಯಾಗಿರುವುದರಿಂದ ಒಳ್ಳೆಯ ವೈದ್ಯರ ಸಲಹೆ ಪಡೆಯಲು ಆಗುತ್ತಿಲ್ಲ.*

**- ನಿಮ್ಮ ಮಗಳ ಸಮಾನಳು, ಊರುಬೇಡ.**

**ಸಲಹೆ**

**ಕೂದಲು ಉದುರುವುದಕ್ಕೆ ಹಲವಾರು ಕಾರಣಗಳಿವೆ. ನಿಮಗೆ ಹೊಟ್ಟು ಇರುವುದರಿಂದ ಕೂದಲು ಉದುರುತ್ತಿದೆ. ತಲೆಗೆ ಎಣ್ಣೆ ಹಚ್ಚಿಕೊಂಡು ನಿಯ್ತುಮಿತವಾಗಿ ತಲೆಸ್ನಾನ ಮಾಡಿ. ವಾರಕ್ಕೆರಡು ಬಾರಿ ತಲೆಗೆ ನಿಂಬೆರಸವನ್ನಾಗಲೀ ಇಲ್ಲವೇ ನೆನೆಸಿದ ಮೆಂತ್ಯವನ್ನು ರುಬ್ಬಿ ತಲೆಗೆ ಹಚ್ಚಿಕೊಂಡು ಅರ್ಧ ಗಂಟೆ ಬಿಟ್ಟು ಸ್ನಾನ ಮಾಡಿ.**

**ಮುಖದ ಗುಳ್ಳೆಗೆ ದಿನಕ್ಕೆ ಮೂರು - ನಾಲ್ಕು ಬಾರಿ ಬಿಸಿನೀರಿನಿಂದ ಮುಖ ತೊಳೆಯಿರಿ. ಮುಖ ತೊಳೆಯಲು ಕಡಲೆಹಿಟ್ಟು ಉಪಯೋಗಿಸಿ.**

## ಅತಿಯಾದ ಕೂದಲು

*ನಾನು ಹದಿನೆಂಟರ ಹರೆಯದ ಹುಡುಗಿ. ನನ್ನ ಮುಖದ ಮೇಲೆ ಸಣ್ಣಗೆ ಮೀಸೆ ಬರುತ್ತಿದೆ. ಅಲ್ಲದೆ ಕೈ ಕಾಲುಗಳ ಮೇಲೆ ಮತ್ತು ಜನನಾಂಗದ ಮೇಲೆ ಅತಿಯಾಗಿ ಕೂದಲು ಬೆಳೆಯುತ್ತಿವೆ. ಅವು ನನ್ನ ಪ್ರಿಯಕರನಿಗೆ ಎಳ್ಳಷ್ಟೂ ಇಷ್ಟವಿಲ್ಲ. ಅಲ್ಲದೆ ಈ ಸಮಸ್ಯೆಯಿಂದ ನಮ್ಮ ಪ್ರೇಮ ಮುರಿದು ಹೋಗುವುದೆಂದು ಭಯವಾಗಿದೆ. ಆದ್ದರಿಂದ ತಾವು ದಯವಿಟ್ಟು ಕೂದಲು ನಿವಾರಣೆಗೆ ಅಂದರೆ ಮತ್ತೆ ಆ ಸ್ಥಳದಲ್ಲಿ ಕೂದಲು ಹುಟ್ಟಲೇ ಬಾರದು ಅಂಥ 'ಕ್ರೀಮ್' ಅಥವಾ 'ಎಣ್ಣೆ' ಇದ್ದರೆ ತಿಳಿಸಿರಿ. ಮತ್ತು ಅದು ಎಲ್ಲಿ ಸಿಗುತ್ತದೆ ತಿಳಿಸಿರಿ.*

**- ಅನಿತಾ, ಊರು ಬೇಡ**

**ಸಲಹೆ**

**ಅನುವಂಶೀಯ ಕಾರಣಗಳಿಂದ ಹಾಗೂ ಹಾರ್ಮೋನಿನ ವೈಪರೀತ್ಯದಿಂದಾಗಿ ಕೆಲವರಲ್ಲಿ ಅತಿಯಾಗಿ ಕೂದಲು ಬೆಳೆಯುತ್ತವೆ. ಕೈಕಾಲುಗಳಲ್ಲಿನ ರೋಮ ನಿವಾರಣೆಗೆ ವ್ಯಾಕ್ಸಿಂಗ್ ಹಾಗೂ ಮುಖದ ಮೇಲಿನ ಕೂದಲಿನ ನಿವಾರಣೆಗೆ ಥ್ರೆಡ್ಡಿಂಗ್ ವಿಧಾನ ಉಪಯುಕ್ತ. ಇವುಗಳನ್ನು ಬ್ಯೂಟಿ ಪಾರ್ಲರುಗಳಲ್ಲಿ ಮಾಡುತ್ತಾರೆ. ಆದರೆ ಇವುಗಳೆಲ್ಲ ತಾತ್ಕಾಲಿಕ ರೊಮ ನಿವಾರಣೆಯ ವಿಧಾನಗಳು. ನಿಯಮಿತವಾಗಿ ಮಾಡಿಕೊಳ್ಳುತ್ತಲೇ ಇರಬೇಕು. ಶಾಶ್ವತವಾದ ವಿಧಾನವೆಂದರೆ ಎಲೆಕ್ಟ್ರಾಲಿಸಿಸ್. ಇದು ಬಹಳ ದುಬಾರಿಯಾದುದು. ಪ್ರಮುಖ ನಗರಗಳಲ್ಲಿ ಕೆಲವೇ ಕೆಲವು ಬ್ಯೂಟಿ ಪಾರ್ಲರ್‌ಗಳಲ್ಲಿ ಈ ಸೌಲಭ್ಯವಿದೆ. ಮುಖದ ಮೇಲಿನ ಕೂದಲಿನ ನಿವಾರಣೆಗೆ ಈ ವಿಧಾನ ಸೂಕ್ತವಾದುದು. ಜನನಾಂಗದ ರೋಮ ನಿವಾರಣೆಗೆ ಹೇರ್ ರಿಮೂವರ್ ಕ್ರೀಂ ಬಳಸಿ. ಇಲ್ಲವೇ ಸಣ್ಣಗೆ ಕತ್ತರಿಸಿ ಟ್ರಿಂ ಮಾಡಿಕೊಳ್ಳಿ, ಇದೆಲ್ಲಕ್ಕಿಂತ ಒಂದು ಸರಳವಾದ ಚಿಕಿತ್ಸೆ ತಿಳಿಸುವೆ. ಪ್ರತಿದಿನ ಅರಿಶಿನ ಬೇರು ಇಲ್ಲವೆ ಬನ್ನಿ ಮರದ ಕಾಯಿಯನ್ನು ನೀರಲ್ಲಿ ತೇಯ್ದು ಮುಖಕ್ಕೆ ಹಚ್ಚಿಕೊಂಡು ಒಂದು ಗಂಟೆ ಸಮಯ ಬಿಟ್ಟು ಮುಖ ತೊಳೆಯಿರಿ. ಇದನ್ನು ತಾಳ್ಮೆಯಿಂದ ತಿಂಗಳುಗಟ್ಟಲೇ ಮಾಡಬೇಕಾಗುತ್ತದೆ. ಇದರಿಂದ ಕೂದಲಿನ ಬೆಳವಣಿಗೆ ಕುಂಠಿತಗೊಂಡು ನಿಧಾನವಾಗಿ ಕೂದಲು ಉದುರುತ್ತವೆ. ಅಲ್ಲದೇ ಮುಖದ ಕಾಂತಿಯೂ ಹೆಚ್ಚುವುದು. ಎಲ್ಲಕ್ಕಿಂತ ಹೆಚ್ಚಾಗಿ ನಿಮ್ಮ ಪ್ರಿಯಕರನ ಪ್ರೇಮ ಬರೀ ಕೇವಲ ರೋಮದ ಕಾರಣದಿಂದ ಮುರಿದುಬೀಳುವುದಾದರೆ ಅಂತಹ ಪ್ರೇಮ ನಿಮಗೆ ಖಂಡಿತ ಬೇಡ. ನಿಜವಾದ ಪ್ರೀತಿಗೆ ಇದ್ಯಾವುದೂ ಅಡ್ಡಿಯಾಗುವುದಿಲ್ಲ. ನೀವಿನ್ನೂ ಹದಿನೆಂಟು ವರ್ಷದವರೆಂದು ತಿಳಿಸಿದ್ದೀರಿ. ಬಹುಶಃ ವಿದ್ಯಾರ್ಥಿನಿ ಇರಬೇಕು. ನೀವು ಪ್ರೀತಿ, ಪ್ರೇಮವೆಂದು ಮನಸ್ಸು ಕೆಡಿಸಿಕೊಳ್ಳದೇ ಚೆನ್ನಾಗಿ ಓದಿ ವಿದ್ಯಾವಂತರಾಗಿ.**

# ಮಾರ್ಗದರ್ಶಿ

■ ಡಾ. ಎಸ್.ಸಿ. ಶರ್ಮಾ

ಪ್ರಾಧ್ಯಾಪಕರು,
ಆರ್.ವಿ. ಇಂಜಿನಿಯರಿಂಗ್ ಕಾಲೇಜು,
ಮೈಸೂರು ರಸ್ತೆ, ಬೆಂಗಳೂರು - 59.

**ಹೆಸರಿಲ್ಲ, ಗುಲ್ಬರ್ಗಾ**

ನಾನು ದ್ವಿತೀಯ ಪಿ.ಯು.ಸಿ. ಅನುತ್ತೀರ್ಣನಾಗಿದ್ದು ಮುಂದೆ ಅಂಚೆ ಶಿಕ್ಷಣದ ಮೂಲಕ ಮುಕ್ತ ವಿಶ್ವವಿದ್ಯಾಲಯದಿಂದ ಎಂ.ಎ. ಮುಗಿಸಿ NET, SET ಅಥವಾ ಯಾವುದಾದರೂ ಸ್ಪರ್ಧಾತ್ಮಕ ಪರೀಕ್ಷೆ ಬರೆಯಬಹುದೇ? ದಯವಿಟ್ಟು ಇದರ ಬಗ್ಗೆ ವಿವರವಾಗಿ ತಿಳಿಸಿಕೊಡಿ.

**ನೀವು ಮುಕ್ತ ವಿಶ್ವವಿದ್ಯಾಲಯದಿಂದ ಎಂ.ಎ. ಪಡೆದರೆ ಅದು ಇತರ ಎಂ.ಎ.ಗೆ ಸಮನಾಗಿ ಅದರಷ್ಟೆ ಮಾನ್ಯತೆ ಪಡೆಯುತ್ತದೆ. ಇದರಿಂದ ನೀವು ಎಂ.ಎ. ನಂತರ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ತೆಗೆದುಕೊಳ್ಳಬಹುದು.**

**ಅಂಬಿಕ ಹೆಚ್.ಇ., ಹುಳಿಯಾರು**

ನಾನು ಅಂತಿಮ ಬಿ.ಎ. ಓದುತ್ತಿರುವ ವಿದ್ಯಾರ್ಥಿನಿ. ಟಿ.ಸಿ.ಹೆಚ್ ಮಾಡಬೇಕೆಂಬ ಆಸೆ ಇಟ್ಟುಕೊಂಡಿದ್ದೆ. ಆದರೆ ಪಿ.ಯು.ಸಿ.ಯಲ್ಲಿ ದ್ವಿತೀಯ ಶ್ರೇಣಿಯಲ್ಲಿ ಪಾಸಾಗಿದ್ದರಿಂದ ಟಿ.ಸಿ. ಹೆಚ್‌ಗೆ ಅವಕಾಶ ಸಿಗಲಿಲ್ಲ. ಈಗ ನರ್ಸ್ ಟ್ರೈನಿಂಗ್ ಮಾಡಬೇಕೆಂದುಕೊಂಡಿದ್ದೇನೆ. ಇದರ ಬಗ್ಗೆ ಅರ್ಜಿಯನ್ನು ಎಲ್ಲಿ ತೆಗೆದುಕೊಳ್ಳಬೇಕು, ಯಾರಿಗೆ ಕಳಿಸಬೇಕು ಎಂಬುದರ ಬಗ್ಗೆ ಮಾಹಿತಿಯನ್ನು ನೀಡಿ.

**ಜಿಲ್ಲಾ ಕೇಂದ್ರಗಳಲ್ಲಿರುವ ನರ್ಸಿಂಗ್ ಟ್ರೈನಿಂಗ್ ಸೆಂಟರ್ (ನರ್ಸ್ ತರಬೇತಿ ಕೇಂದ್ರ) ಗಳಿಂದ ಅರ್ಜಿಗಳನ್ನು ಪಡೆಯಬಹುದು. ಸಾರ್ವಜನಿಕ ಆಸ್ಪತ್ರೆಗಳಲ್ಲಿಯೂ ಈ ತರಬೇತಿ ಲಭ್ಯವಿರುತ್ತದೆ. ಹೆಚ್ಚಿನ ವಿವರಗಳಿಗೆ ಈ ಕೆಳಗಿನ ವಿಳಾಸವನ್ನು ಸಂಪರ್ಕಿಸಿ.**

**ಕರ್ನಾಟಕ ಸ್ಟೇಟ್ ಹೆಲ್ತ್ ಕೌನ್ಸಿಲ್ ಮತ್ತು ಡೈರೆಕ್ಟರ್, ಹೆಲ್ತ್ ಅಂಡ್ ಫ್ಯಾಮಿಲಿ ವೆಲ್‌ಫೇರ್ ಸರ್ವಿಸಸ್, ಆನಂದರಾವ್ ಸರ್ಕಲ್, ಬೆಂಗಳೂರು -560 009.**

**ಪಿ. ಎಚ್.ದಯಾನಂದ, ಹೊನ್ನಾವರ**

ನಾನು ಎಂ.ಕಾಂ ಮಾಡಿ ಕಾಲೇಜಿನಲ್ಲಿ ಉಪನ್ಯಾಸಕನಾಗಬೇಕೆಂದುಕೊಂಡಿದ್ದೇನೆ. ಇದಕ್ಕೆ ಬೇಕಾದ ಅರ್ಹತೆ ಏನು? ಉಪನ್ಯಾಸಕರಾಗಲು MEd ಮಾಡಬೇಕೇ ದಯವಿಟ್ಟು ತಿಳಿಸಿ.

**ಕಾಲೇಜಿನಲ್ಲಿ ಉಪನ್ಯಾಸಕನಾಗಲು ಎಂ.ಕಾಂ. ಮಾಡಿದರೆ ಸಾಕು. ಎಂ.ಎಡ್‌ಸಹ ಮಾಡಬಹುದು. ಇದರಿಂದ ಬಿ.ಎಡ್ ಕಾಲೇಜಿನಲ್ಲಿ ಉಪನ್ಯಾಸಕರಾಗಬಹುದು. ಎಂ.ಎಡ್‌ಗೆ ಬಿ.ಎಡ್ ಅರ್ಹತೆಯಾಗಿರುತ್ತದೆ.**

**ಪಿ. ರಮೇಶ, ಹೊನ್ನಾವರ**

ನಾನು ಎಸ್ ಎಸ್ ಎಲ್‌ಸಿವರೆಗೆ ಓದಿದ್ದು, ಮುಂದೆ ಅನಿವಾರ್ಯ ಕಾರಣಗಳಿಂದ ಓದಲಾಗಲಿಲ್ಲ. ನನಗೆ ಕೆ.ಎಸ್.ಆರ್.ಟಿ.ಸಿ.ಯಲ್ಲಿ ಕಂಡಕ್ಟರ್ ಆಗಬೇಕೆಂಬ ಆಸೆ. ಇದಕ್ಕೆ ಬೇಕಾದ ಅರ್ಹತೆ ಏನು? ದಯವಿಟ್ಟು ತಿಳಿಸಿ.

**ಕೆ.ಎಸ್.ಆರ್.ಟಿ.ಸಿ.ಯಲ್ಲಿ ಕಂಡಕ್ಟರ್ ಆಗಲು ಮೊದಲು ಪ್ರಥಮ ಚಿಕಿತ್ಸೆ (First Aid) ಪರೀಕ್ಷೆ ಪಾಸ್ ಮಾಡಿಕೊಳ್ಳಬೇಕು. ಇದರ ಸಂಬಂಧ ವೈದ್ಯರನ್ನು ಸಂಪರ್ಕಿಸಿ. ನಂತರ ಕಂಡಕ್ಟರ್ ಲೈಸೆನ್ಸ್ ಮಾಡಿಸಬೇಕು. ಕಂಡಕ್ಟರ್ ಲೈಸೆನ್ಸ್ ಮಾಡಿಸಲು, ಕಂಡಕ್ಟರ್ ಕೆಲಸದ ಅನುಭವ ಅಗತ್ಯ.**

**ಎ.ಕೆ. ಪರಸಪ್ಪ, ಕೂಲಹಳ್ಳಿ**

ನಾನು ದ್ವಿತೀಯ ಪಿ.ಯು.ಸಿ.ಯಲ್ಲಿ ಓದುತ್ತಿದ್ದೇನೆ. ಮುಂದೆ ಹೆಚ್ಚಿನ ವಿದ್ಯಾಭ್ಯಾಸ ಮಾಡಬೇಕೆಂಬ ಬಯಕೆ ಇದೆ. ಆದರೆ ಆರ್ಥಿಕ ಪರಿಸ್ಥಿತಿ ಕಷ್ಟದಾಯಕವಾಗಿದೆ. ನಾನು ಪರಿಶಿಷ್ಟ ಜಾತಿಗೆ ಸೇರಿದ್ದು, ಸರ್ಕಾರದಿಂದ ನನಗೆ ಯಾವ ರೀತಿಯ ಸಹಾಯಧನ ದೊರಕುತ್ತದೆ ತಿಳಿಸಿ.

**ಸರ್ಕಾರದಿಂದ ಪರಿಶಿಷ್ಟಜಾತಿಯವರಿಗೆ ಅನೇಕ ಸೌಲಭ್ಯಗಳು ಲಭ್ಯವಿರುತ್ತವೆ. ಉದಾ : ರೋಜಗಾರ್ ಯೋಜನೆ, IRDP ಯೋಜನೆ, ಮುಂತಾದ ಯೋಜನೆಗಳಲ್ಲಿ ಸಾಲದ ಸಹಾಯದಿಂದ ಸ್ವಂತ ಉದ್ಯೋಗ ಹೊಂದಬಹುದು. ಅನೇಕ ಸಂಘ ಸಂಸ್ಥೆಗಳು ಸಹ ಅನೇಕ ವೃತ್ತಿಗಳಲ್ಲಿ ತರಬೇತಿಯನ್ನು ನೀಡಿ ಸ್ವಂತ ಉದ್ಯೋಗ ಹೊಂದಲು ಸಹಕಾರಿಯಾಗುತ್ತವೆ. ಆರ್. ವಿ. ಕಾಲೇಜ್‌ನ ತಾಂತ್ರಿಕ ವಿಭಾಗ, ಮೈಸೂರು ರಸ್ತೆ, ಬೆಂಗಳೂರು- ಇಲ್ಲಿ ನೀಡುವ ವಿವಿಧ ಕೋರ್ಸುಗಳಲ್ಲಿ ತರಬೇತಿಯನ್ನು ಪಡೆಯಬಹುದು. ನಂತರ ಸ್ವಂತ ಉದ್ಯೋಗ ಹೊಂದಬಹುದು ಅಥವಾ ಫ್ಯಾಕ್ಟರಿಗಳಲ್ಲಿ ಕೆಲಸ ಮಾಡಬಹುದು.**

**ಬಿ. ಮುರಳಿ ಮೋಹನ, ಬಳ್ಳಾರಿ**

ನಾನು ಪಿ.ಯು.ಸಿ.ಯಲ್ಲಿ 40% ರಷ್ಟು ಅಂಕ ಪಡೆದು ಪಾಸಾಗಿದ್ದೇನೆ. ನನಗೆ ಈಗ 23 ವರ್ಷ. ಮುಂದೆ ಸಿ.ಎ. ಮಾಡಬೇಕೆಂಬ ಆಸೆ ಇದೆ. ಕರ್ನಾಟಕದಲ್ಲಿ ಯಾವ ಕಾಲೇಜಿನಲ್ಲಿ ಪಿ.ಯು.ಸಿ. ನಂತರ ಫೌಂಡೇಶನ್, ಇಂಟರ್, ಫೈನಲ್ ಮಾಡಬಹುದು. ಇದರ ಬಗ್ಗೆ ಮಾಹಿತಿ ಹಾಗೂ ಎಷ್ಟು ಹಣ ಖರ್ಚಾಗಬಹುದು ತಿಳಿಸಿ.

**ನೀವು ಸಿ.ಎ. ಮಾಡಬೇಕಾದರೆ ನೀವು ಈಗಾಗಲೇ ಸಿ.ಎ. ಮಾಡಿ ಉದ್ಯೋಗದಲ್ಲಿರುವವರ ಬಳಿ ಹೆಸರು ನೋಂದಾಯಿಸಿ ಅವರ ಬಳಿ ಕೆಲಸ ಮಾಡಬೇಕು. ವಿವರಗಳಿಗೆ ಜಾಯಿಂಟ್ ಡೈರೆಕ್ಟರ್ ಆಫ್ ಸ್ಟಡೀಸ್, ದಿ ಇನ್ಸ್‌ಟಿಟ್ಯೂಟ್ ಆಫ್ ಚಾರ್ಟೆಡ್ ಅಕೌಂಟೆಂಟ್ಸ್ ಆಫ್ ಇಂಡಿಯಾ, ನಂ. 122, ವಂಗಂಬಾಕ್ಕಂ ಹೈ ರೋಡ್, ಪಿ.ಬಿ.ನಂ.3314, ಚೆನ್ನೈ-600034. ಸಂಪರ್ಕಿಸಿ.**

**ಎಸ್. ಎಂ. ಮಂಜುನಾಥ, ಬೆಳವಡಿ**

ನಾನು ಹತ್ತನೆ ತರಗತಿಯಲ್ಲಿ ಓದುತ್ತಿರುವ ಒಬ್ಬ ಅಂಗವಿಕಲ (ಅಂಧ) ವಿದ್ಯಾರ್ಥಿ. ಅಂಗ ವಿಕಲರಿಗೆ ದೊರಕುವ ಸಹಾಯ ಸವಲತ್ತುಗಳ ಬಗ್ಗೆ ಹಾಗೂ ಇದಕ್ಕಾಗಿ ಯಾರನ್ನು ಸಂಪರ್ಕಿಸಬೇಕು ತಿಳಿಸಿ.

**ನೀವು ಅಂಧರಾಗಿರುವ ಕಾರಣ ನಿಮಗೆ ಅನೇಕ ಕಡೆ ಸಹಾಯ ಧನ ದೊರೆಯುತ್ತದೆ. ಅವುಗಳೆಂದರೆ : ಮಿಸ್ಟರ್ ನವಜ್ಜೈ ಪಿ.ಸೇಠ್ ಸ್ಕಾಲರ್‌ಶಿಪ್ ಫಾರ್ ಬ್ಲೈಂಡ್ ಸ್ಟೂಡೆಂಟ್.**

ಇವರ ವಿಳಾಸ :

ದಿ ನ್ಯಾಶನಲ್ ಅಸೋಸಿಯೇಶನ್ ಫಾರ್ ದಿ **ಬ್ಲೈಂಡ್ (ಕರ್ನಾಟಕ ವಿಭಾಗ), 99, ಹೆಚ್.ಎ.**

**ಎಲ್ 2ನೇ ಸ್ಟೇಜ್, ಇಂದಿರಾನಗರ, ಬೆಂಗಳೂರು - 560 038.**

## ವಿಜಯ ಪ್ರಸಾದಮಠ, ಚಳ್ಳಕೆರೆ

ನಾನು 96-97ನೇ ಸಾಲಿನಲ್ಲಿ ರೆಗ್ಯುಲರ್ ಆಗಿ CPED ಮಾಡಿದ್ದೇನೆ. CPED ಆಧಾರದ ಮೇಲೆ, ಅಂಚೆ ತೆರಪಿನ ಮೂಲಕ BPED ಪರೀಕ್ಷೆಯನ್ನು ತೆಗೆದುಕೊಳ್ಳಬಹುದೆ? ಇದಕ್ಕಾಗಿ ಯಾವ ವಿಶ್ವವಿದ್ಯಾಲಯವನ್ನು ಸಂಪರ್ಕಿಸಬೇಕು? ಹಾಗೆಯೇ ರಾ.ಭಾ. ವಿದ್ವಾನ (ಹಿಂದಿ) ಕೂಡಾ ಪಾಸಾಗಿರುವೆ. ಅಂಚೆ ಮೂಲಕ ಹಿಂದಿ ಬಿ ಇಡಿ ಮಾಡಬಹುದೇ ತಿಳಿಸಿ.

**ನೀವು CPED ಆಧಾರದ ಮೇಲೆ BPED ಮಾಡಲು ಸಾಧ್ಯವಿಲ್ಲ. CPED ಮಾಡಲು ಕನಿಷ್ಟ ಪದವಿಯಾಗಿರಬೇಕು. ನೀವು ಹಿಂದಿ ಬಿ.ಎಡ್‌ನ್ನು ಖಾಸಗಿಯಾಗಿ ಮಾಡಬಹುದು.**

## ಪ್ರಕಾಶ ಎಸ್. ಪಾಟೀಲ, ಸವದತ್ತಿ

ನಾನು 1995-96ನೇ ಸಾಲಿನಲ್ಲಿ ಎಸ್.ಎಸ್.ಎಲ್.ಸಿ.ಯಲ್ಲಿ 358 ಅಂಕಗಳನ್ನು ಪಡೆದು ಉತೀರ್ಣನಾಗಿದ್ದೇನೆ. ಆದರೆ ಗಣತ ವಿಷಯದಲ್ಲಿ 30 ಅಂಕಗಳು ಬಂದ ಕಾರಣ ನನಗೆ Science ಮತ್ತು Diploma ಗೆ ಸೀಟು ಸಿಗಲಿಲ್ಲ. ಆದ ಕಾರಣ ನಾನು Commerce ಮಾಡಬೇಕಾಯಿತು. ನನಗೆ Diplomaಗೆ ಸೇರಲು ಗಣಿತದಲ್ಲಿ 50 ಅಂಕಗಳು ಬೇಕು. ಆದ್ದರಿಂದ ಈಗ ನಾನು Reject ಮಾಡಿ ಮತ್ತೊಮ್ಮೆ ಪರೀಕ್ಷೆ ಬರೆಯಲು ಸಾಧ್ಯವೇ?

**ನೀವು ಡಿಪ್ಲೊಮೊ ಸೇರಲು ಗಣಿತದಲ್ಲಿ ಹೆಚ್ಚು ಅಂಕಬೇಕಾದರೆ, ನೀವು ಎಲ್ಲ ವಿಷಯಗಳನ್ನು ವಿತ್ರಾ ಮಾಡಿಕೊಂಡು ಮತ್ತೊಮ್ಮೆ ಪರೀಕ್ಷೆ ಬರೆಯಬೇಕು. ಗಣಿತವೊಂದನ್ನೆ ಬರೆಯಲು ಸಾಧ್ಯವಿಲ್ಲ.**

## ಬಸವರಾಜ, ಮಂಡ್ಯ

ನಾನು 1996-97ನೇ ಸಾಲಿನಲ್ಲಿ ಎಸ್.ಎಸ್.ಎಲ್.ಸಿ. ಹಾಗೂ ಬಿ.ಎ ತತ್ಸಮಾನ ಹಿಂದೀ ಪರೀಕ್ಷೆ ರಾಜ ಭಾಷಾ ವಿದ್ವಾನ್ (ಕರ್ನಾಟಕ ಹಿಂದೀ ಪ್ರಚಾರ ಸಮಿತಿ ಬೆಂಗಳೂರು) ಈ ಸರ್ಟಿಫಿಕೇಟ್‌ಗಳ ಆಧಾರದ ಮೇಲೆ ಶಿಷಾ ಸ್ನಾತಕ (ಹಿಂದಿ ಬಿ.ಎಡ್ ಗೆ ತತ್ಸಮ) ಎಂಬ ಕೋರ್ಸನ್ನು ಮಾಡಿರುತ್ತೇನೆ. ಇದರ ಆಧಾರದ ಮೇಲೆ ಖಾಸಗಿ ಅಥವಾ ಸರ್ಕಾರಿ ಪ್ರೌಢಶಾಲೆಗಳಲ್ಲಿ ಉದ್ಯೋಗ ದೊರಕುವುದೇ? ಆಕಸ್ಮಾತ್ ದೊರಕದಿದ್ದರೆ ನಾನು ಮುಕ್ತ ವಿಶ್ವವಿದ್ಯಾಲಯ ಮೈಸೂರಿನಿಂದ ಪದವಿ ಪಡೆಯಲಿಚ್ಛಿಸಿದ್ದೇನೆ. ಈಗ ನನಗೆ 21 ವರ್ಷ. ಬಿ.ಎ.ಪದವಿ ಮಾಡಲೋ ಅಥವಾ ಎಂ.ಎ. ಹಿಂದಿ ಸ್ನಾತಕ್ಕೋತ್ತರ ಪದವಿ ಮಾಡಲೋ ತಿಳಿಸಿ.

**ನಿಮಗೆ 21 ವರ್ಷವಾಗಿರುವುದರಿಂದ ಬಿ.ಎ. ಮಾಡಬಹುದು. ನೀವು ಇದನ್ನು ಮೈಸೂರು ವಿಶ್ವವಿದ್ಯಾಲಯದಿಂದ ಪಡೆಯಬಹುದು.**

## ಶ್ರೀಕಾಂತ ಬನ್ನಿಕೊಪ್ಪ, ತಾವರೆಗೆರೆ

ನಾನು ಬಿ.ಕಾಂ. ಪದವಿಯನ್ನು ಮುಗಿಸಿದ್ದೇನೆ. ಮುಂದೆ I.C.W.A. ಮಾಡಬೇಕೆಂದಿದ್ದೇನೆ. ಇದಕ್ಕೆ ಪ್ರವೇಶ ಪ್ರಾರಂಭವಾಗುವುದು ಯಾವಾಗ? ಅರ್ಜಿಗಳನ್ನು ಯಾವಾಗ ಕೊಡುತ್ತಾರೆ ಎಂಬುದನ್ನು ದಯವಿಟ್ಟು ತಿಳಿಸಿ.

**ಐ.ಸಿ.ಡಬ್ಲು.ಎ. ಪರೀಕ್ಷೆ ವರ್ಷದಲ್ಲಿ 2 ಬಾರಿ ನಡೆಯುತ್ತದೆ. ಹೆಚ್ಚಿನ ವಿವರಗಳಿಗೆ ಈ ವಿಳಾಸ ಸಂಪರ್ಕಿಸಿ:**

**ಐ.ಸಿ.ಡಬ್ಲು.ಎ ಇನ್‌ಸ್ಟಿಟ್ಯೂಟ್, ನಂ. 12, ಸುಡ್ಡರ್ ಸ್ಟ್ರೀಟ್, ಕಲ್ಕತ್ತಾ -700 016. ಹಾಗು ನಿಮ್ಮ ಹೆಸರನ್ನು ಐ.ಸಿ.ಡಬ್ಲು.ಎ. ಇನ್‌ಸ್ಟಿಟ್ಯೂಟ್‌ನಲ್ಲಿ ನೋಂದಾಯಿಸಬೇಕು.**

## ವಿನಾಯಕ ಬಸಾಪಟ್ಟಣ

ನಾನು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ 83% ಅಂಕಗಳಿಂದ ಉತ್ತೀರ್ಣನಾಗಿರುತ್ತೇನೆ. ನನಗೆ ಡಿಪ್ಲೋಮೊ ಕೋರ್ಸ್ ಮಾಡಬೇಕೆಂಬ ಆಸೆ ಇದೆ. ಯಾವ ವಿಷಯಗಳನ್ನು ಆಯ್ದುಕೊಂಡರೆ ಉತ್ತಮ ಉದ್ಯೋಗಾವಕಾಶಗಳು ದೊರಕುತ್ತವೆ ಎಂಬುದನ್ನು ತಿಳಿಸಿ (ಮೆಕ್ಯಾನಿಕಲ್ ಡಿಪ್ಲೊಮೊ, ಕಂಪ್ಯೂಟರ್, ಎಲೆಕ್ಟ್ರಾನಿಕ್ಸ್ ಅಂಡ್ ಕಮ್ಯುನಿಕೇಷನ್).

**ನಿಮಗೆ ಮೆಕ್ಯಾನಿಕಲ್, ಕಂಪ್ಯೂಟರ್, ಎಲೆಕ್ಟ್ರಾನಿಕ್ಸ್ ಅಂಡ್ ಕಮ್ಯುನಿಕೇಷನ್ ಇವುಗಳಲ್ಲಿ ಯಾವುದನ್ನು ಮಾಡಿದರೂ ಉದ್ಯೋಗಾವಕಾಶಗಳಿವೆ. ಯಾವುದಕ್ಕೂ ನಿಮ್ಮ ಇಚ್ಛೆಯಂತೆ ನಡೆಯಿರಿ. ನಿಮಗೆ ಇವುಗಳಲ್ಲಿ ಯಾವುದು ಆಸಕ್ತಿಕರವೋ ಅದನ್ನು ಆಯ್ದುಕೊಳ್ಳಿ.**

## ಪ್ರಕಾಶ, ಊರಿಲ್ಲ

ನಾನು ಮೆಕ್ಯಾನಿಕಲ್ ಡಿಪ್ಲೊಮೊ (ಪಾಲಿಟೆಕ್ನಿಕ್) ಕೋರ್ಸ್‌ನ್ನು ಮಾಡುತ್ತಿದ್ದೇನೆ. ನನಗೆ ಖಾಸಗಿ ಸಂಸ್ಥೆಗಳಿಂದ ಕಂಪ್ಯೂಟರ್ ಕೋರ್ಸನ್ನು ಮಾಡುವ ಬಯಕೆ. ನಾನು ಯಾವ ಕೋರ್ಸನ್ನು ಮಾಡಲಿ, ಯಾವ ಸಂಸ್ಥೆಯಿಂದ ಮಾಡಿದರೆ ಒಳ್ಳೆಯದು ತಿಳಿಸಿರಿ. ನನ್ನ ಸಹೋದರ ಡಿಪ್ಲೋಮಾ ಎಲೆಕ್ಟ್ರಾನಿಕ್ಸ್ ಮತ್ತು ಕಮ್ಯುನಿಕೇಷನ್ ಕೋರ್ಸ್‌ನ್ನು ಮಾಡುತ್ತಿದ್ದಾನೆ. ಅವನು ಯಾವ ಖಾಸಗಿ ಸಂಸ್ಥೆಯಿಂದ ಕಂಪ್ಯೂಟರ್ ಕೋರ್ಸ್ ಮಾಡಿದರೆ ಒಳ್ಳೆಯದು ತಿಳಿಸಿರಿ.

**ನೀವು ಖಾಸಗಿ ಸಂಸ್ಥೆಗಳಿಂದ ಕಂಪ್ಯೂಟರ್ ಕೋರ್ಸ್ ಮಾಡಬೇಕಾದಲ್ಲಿ ನಿಮಗೆ ಹತ್ತಿರವಿರುವ ಕಂಪ್ಯೂಟರ್ ಶಿಕ್ಷಣ ನೀಡುವ ಸಂಸ್ಥೆಗಳನ್ನು ಸಂಪರ್ಕಿಸಿ ಅವರ ಸಹಾಯ ಪಡೆಯಿರಿ.**

## ಡಿ.ಬಿ. ರಂಗನಾಥ, ಧಾರವಾಡ

ನನಗೆ 22 ವರ್ಷ ನಾನು ದ್ವಿತೀಯ ಪಿ.ಯು.ಸಿ. ವಾಣಿಜ್ಯ ಪರೀಕ್ಷೆ ಬರೆದಿದ್ದೇನೆ. ಮುಂದೆ ನಾನು ಯಾವುದಾದರೂ ಪದವಿ ಮುಗಿಸಿ ಕನ್ನಡ ಮಾಧ್ಯಮದಲ್ಲಿ I.A.S., I.P.S. ಮಾಡಬೇಕೆಂದಿದ್ದೇನೆ. ನನ್ನ ಸಮಸ್ಯೆ ಎಂದರೆ S.S.L.C. ದ್ವಿತೀಯ ದರ್ಜೆಯಲ್ಲಿ ಉತ್ತೀರ್ಣನಾಗಿದ್ದೇನೆ ಹಾಗೂ ಗಣಿತ ಕಷ್ಟದ ವಿಷಯ. ಆದ್ದರಿಂದ ವಾಣಿಜ್ಯಶಾಸ್ತ್ರ, ಸಾರ್ವಜನಿಕ ಆಡಳಿತ, ಇತಿಹಾಸ, ಕನ್ನಡ ಸಾಹಿತ್ಯ ಇವುಗಳಲ್ಲಿ ಯಾವುದು ತೆಗೆದುಕೊಂಡರೆ ಸುಲಭ ತಿಳಿಸಿ.

**ನೀವು ಐ.ಪಿ.ಎಸ್., ಐ.ಎ.ಎಸ್. ಮಾಡುವುದಕ್ಕೂ ಎಸ್.ಎಸ್.ಎಲ್.ಸಿ. ಯಲ್ಲಿ ದ್ವಿತೀಯ ದರ್ಜೆ ಬಂದಿರುವುದಕ್ಕೂ ಸಂಬಂಧವಿಲ್ಲ. ನೀವು ಪಿ.ಯು.ಸಿ.ಯಲ್ಲಿ ವಾಣಿಜ್ಯ ವಿಭಾಗ ತೆಗೆದುಕೊಂಡಿರುವುದರಿಂದ ನೀವು ಪದವಿಯನ್ನು ಇದರಲ್ಲೇ ಮಾಡಬಹುದು. ಇಲ್ಲವೆ ಸಾರ್ವಜನಿಕ ಆಡಳಿತವನ್ನು ತೆಗೆದುಕೊಳ್ಳಬಹುದು. ನಿಮ್ಮ ಆಸಕ್ತಿಯಂತೆ ಮುಂದುವರೆಯಿರಿ.**

## ಗುರು, ಬೇಲೂರು

ಸಿ.ಪಿ.ಇಡಿ ನಂತರ ಬಿ.ಪಿ.ಇಡಿ ಮಾಡಬಹುದೇ ಅಥವಾ ಬಿ.ಪಿ.ಇಡಿಗೆ ಪದವಿ ಅವಶ್ಯಕವಿದೆಯೇ?

**ನೀವು ಬಿ.ಪಿ.ಎಡ್ ಮಾಡಲು ಪದವಿ ಅವಶ್ಯಕವಾಗಿರುತ್ತದೆ.**

ಮಾರ್ಗದರ್ಶಿ ವಿಭಾಗದ ನಿಮ್ಮ ಪತ್ರಗಳನ್ನು ಈ ವಿಳಾಸಕ್ಕೆ ಕಳುಹಿಸಿರಿ :

ವಿಳಾಸ:

**ಬಿಸಿಲ ಬದುಕು** ಮಾಸಪತ್ರಿಕೆ
**ಮಾರ್ಗದರ್ಶಿ** ವಿಭಾಗ, ಅಂಚೆ ಪೆಟ್ಟಿಗೆ 7951
ಬಸವೇಶ್ವರನಗರ, ಬೆಂಗಳೂರು - 560 079




# ಮಹಿಳಾ ಉದ್ಯಮಿಗಳ ಆಶಾಕಿರಣ

'ಪದವಿ ಪರೀಕ್ಷೆಗೆ ಮೂರು ವರ್ಷ ಓದಿ ಬೇರೆಯವರ ಲೆಕ್ಕ ಬರೆಯುವುದಕ್ಕಿಂತ, ನಮ್ಮ ಲೆಕ್ಕ ನಾವೇ ಬರೆಯುವುದು ಒಳ್ಳೆಯದು' ಎಂದು ಧರ್ಮಸ್ಥಳದ ಧರ್ಮಾಧಿಕಾರಿಗಳಾದ ವೀರೇಂದ್ರ ಹೆಗ್ಗಡೆಯವರು ಸ್ವಉದ್ಯೋಗದ ಬಗ್ಗೆ ಹೇಳಿದ್ದಾರೆ.

ಮೊದಲ ಬಾರಿಗೆ 1988ರಲ್ಲಿ ಕೆನರಾ ಬ್ಯಾಂಕ್ ತನ್ನ ಪ್ರಧಾನ ಕಚೇರಿಯಲ್ಲಿ ಮಹಿಳಾ ಉದ್ಯಮ ಕೇಂದ್ರವನ್ನು ಸ್ಥಾಪಿಸಿತು. ಇದರ ಉತ್ತಮ ಕಾರ್ಯಾಚರಣೆಯ ಸ್ಫೂರ್ತಿಯಿಂದ, ದೇಶದ 7 ಭಾಗಗಳಲ್ಲಿ ಅಂದರೆ ಬೆಂಗಳೂರು, ಮಂಗಳೂರು, ತಿರುವನಂತಪುರ, ಹೈದರಾಬಾದ್, ಮಧುರೈ, ಚೆನ್ನೈ, ಚಂಡಿಘಡ ಮೊದಲಾದ ಕಡೆ ಬ್ಯಾಂಕು ಮಹಿಳಾ ಉದ್ಯಮ ಕೇಂದ್ರಗಳನ್ನು ಸ್ಥಾಪಿಸಿತು. ಕೇಂದ್ರವು ಈ ಕೆಳಕಂಡ ಹಲವಾರು ಮುಖ್ಯ ಉದ್ದೇಶಗಳನ್ನು ಹೊಂದಿದೆ.

1. ಮಹಿಳಾ ಉದ್ಯಮಿಗಳಿಗೆ ತರಬೇತಿ ನೀಡುವುದು ಹಾಗು ಸ್ವಂತ ಉದ್ಯೋಗ ಕೈಗೊಳ್ಳಲು ಪ್ರೋತ್ಸಾಹ ನೀಡುವುದು.
2. ವ್ಯಾಪಾರ ಚಟುವಟಿಕೆಗಳ ಬಗ್ಗೆ ಮಾಹಿತಿ ಒದಗಿಸುವುದು.
3. ಮಹಿಳೆಯರು ಉತ್ಪಾದಿಸಿದ ವಸ್ತುಗಳಿಗೆ ಇರುವ ಮಾರುಕಟ್ಟೆ ಸೌಲಭ್ಯಗಳ ಬಗ್ಗೆ ಮಾಹಿತಿ ನೀಡುವುದು.
4. ಮಹಿಳೆಯರು ಕೈಗೊಳ್ಳುವ ಯೋಜನೆಗಳಿಗೆ ಇರುವ ಆರ್ಥಿಕ ನೆರವು ಇತ್ಯಾದಿಗಳ ಬಗ್ಗೆ ತಿಳುವಳಿಕೆ ನೀಡುವುದು.
5. ಕಾಲೇಜು ಹುಡುಗಿಯರಿಗೆ ವ್ಯಾಸಂಗದ ನಂತರ ಉದ್ಯೋಗ ಕೈಗೊಳ್ಳುವ ಬಗ್ಗೆ ತರಬೇತಿ ನೀಡುವುದು.

ಈ ಮೇಲಿನ ಹಲವಾರು ಉದ್ದೇಶಗಳನ್ನು ಹೊಂದಿರುವ ಬ್ಯಾಂಕ್ 1997-98ರ ಸಾಲಿನಲ್ಲಿ ಹಲವಾರು ಸಾಧನೆಗಳನ್ನು ಮಾಡಿದೆ.

1. ಸರಕಾರಿ ಹಾಗೂ ಬ್ಯಾಂಕ್ ಯೋಜನೆಗಳ ಮೂಲಕ 5,00,000 ಕ್ಕೂ ಹೆಚ್ಚು ಫಲಾನುಭವಿಗಳಿಗೆ 796 ಕೋಟಿ ರೂ.ಗಳ ಸಾಲ ವಿತರಣೆ.
2. 2131ಕ್ಕೂ ಹೆಚ್ಚು ಮಹಿಳೆಯರಿಂದಲೇ ನಡೆಸಲ್ಪಡುವ ಸ್ವ-ಸಹಾಯ ಸಂಘಗಳಿಗೆ 208 ಲಕ್ಷಕ್ಕೂ ಹೆಚ್ಚಿನ ಸಾಲ ವಿತರಣೆ.
3. ವ್ಯಾಪಾರ ಚಟುವಟಿಕೆಗಳ ಬಗ್ಗೆ 7500ಕ್ಕೂ ಹೆಚ್ಚು ಮಹಿಳೆಯರಿಗೆ ಮಾಹಿತಿ ಹಾಗೂ ಸಲಹೆ ನೀಡಲಾಗಿದೆ.
4. ಸ್ವಂತ ಉದ್ದಿಮೆ ನಡೆಸಲು ಮುಂದೆ ಬಂದಿರುವ 5000ಕ್ಕೂ ಹೆಚ್ಚಿನ ಮಹಿಳೆಯರಿಗೆ 2 ಕೋಟಿಗೂ ಅಧಿಕ ಸಾಲ ನೀಡಲಾಗಿದೆ.
5. 300ಕ್ಕೂ ಹೆಚ್ಚು ತರಬೇತಿ ಶಿಬಿರಗಳನ್ನು ನಡೆಸಿದ್ದು, ಸುಮಾರು 600ಕ್ಕೂ ಅಧಿಕ ಮಹಿಳೆಯರು ತರಬೇತಿಯನ್ನು ಪಡೆದುಕೊಂಡಿದ್ದಾರೆ.
6. ಮಹಿಳೆಯರು ಉತ್ಪಾದಿಸಿದ ವಸ್ತುಗಳ ಮಾರಾಟಕ್ಕಾಗಿ ಬ್ಯಾಂಕು 'ಕೇನ್ ಬಜಾರ್', 'ಕೇನ್ ಮೇಳ' ಮೊದಲಾದವುಗಳನ್ನು ಆಯೋಜಿಸಿದೆ.

ಅಲ್ಲದೇ ಮಹಿಳೆಯರು ಉತ್ಪಾದಿಸಿದ ವಸ್ತುಗಳಿಗೆ ಮಾರುಕಟ್ಟೆ ಸೌಲಭ್ಯ ಒದಗಿಸಲು ಏನಾದರೂ ಒಂದು ಹೊಸ ಹೆಜ್ಜೆ ಇಡಬೇಕೆಂಬ ಉದ್ದೇಶದಿಂದ ಬ್ಯಾಂಕು 'ಕೆನ್ -ಉತ್ಸವ' ಆಚರಿಸಲು ನಿರ್ಧರಿಸಿತು. ಬೆಂಗಳೂರಿನ ಪ್ರಧಾನ ಕಚೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಗೀತಾ ನಾಯಕ್‌ರವರು ಒಂದು ವಸ್ತು ಪ್ರದರ್ಶನಕ್ಕೆ ಭೇಟಿ ನೀಡಿದ್ದರು. ನಾವು ಮಹಿಳಾ ಉದ್ಯಮಿಗಳಿಗಾಗಿ ಏನಾದರೊಂದು ಸಹಾಯ ಮಾಡಬೇಕೆಂಬ ಯೋಚನೆ ಅವರಲ್ಲಿ ಹೊಳೆಯಿತು. ಬೆಂಗಳೂರಿನ ಪ್ರಧಾನ ಕಚೇರಿಯಲ್ಲಿ ಅಸಿಸ್ಟೆಂಟ್ ಜನರಲ್ ಮ್ಯಾನೆಜರ್ ಆಗಿರುವ ಎಂ.ಡಿ. ಪ್ರಭುರವರು ಸಹ ಇವರನ್ನು ಪ್ರೋತ್ಸಾಹಿಸಿದರು. ಇವರು ನೀಡಿದ ಪ್ರೋತ್ಸಾಹದಿಂದ ಬ್ಯಾಂಕು ಬೆಂಗಳೂರಿನ 'ಸಿರೋಪಾ' ಸಂಸ್ಥೆಯೊಂದಿಗೆ ಸೇರಿ ಕಾರ್ಯ ಯೋಜನೆಯನ್ನು ರೂಪಿಸಿದರು.

31-7-98ರಿಂದ 3.8.98ರವರೆಗೆ ನಡೆದ ಈ

### ಕೆನರಾ ಬ್ಯಾಂಕಿನ ಮಹಿಳಾ ಉದ್ಯಮ ಕೇಂದ್ರಗಳು ಕೈಗೊಂಡ ಕಾರ್ಯಕ್ರಮಗಳು

1. ಬಿಡುಗಡೆಯಾಗುವ ಮಹಿಳಾ ಖೈದಿಗಳ ನೆರವಿಗಾಗಿ ಬ್ಯಾಂಕು ಪ್ರಥಮ ಬಾರಿಗೆ ಕಾರ್ಯ ಯೋಜನೆಯನ್ನು ರೂಪಿಸಿರುವುದು.
2. ಇಕಬೇನಾ ಹಾಗೂ ಇತರ ಹೂವುಗಳ ಅಲಂಕಾರಿಕ ಉಪಯೋಗದ ಬಗ್ಗೆ ಕಾರ್ಯ ಯೋಜನೆ.
3. ಕಡಿಮೆ ವೆಚ್ಚದಲ್ಲಿ ಹೆಚ್ಚು ಕ್ಯಾಲೋರಿ ಇರುವ ಆಹಾರ ವಸ್ತುಗಳ ಸೇವನೆ ಹಾಗೂ ಉಪಯೋಗ ಕುರಿತು ಮಾಹಿತಿ ನೀಡುವುದು.
4. ಮಹಿಳೆಯರಿಗೆ ಸ್ವಂತ ಉದ್ದಿಮೆ ನಡೆಸಲು ಸ್ಫೂರ್ತಿ ತುಂಬಿ ಅವರಿಗೆ ಬೇಕಾದ ಎಲ್ಲಾ ರೀತಿಯ ಪ್ರೋತ್ಸಾಹಗಳನ್ನು ಒದಗಿಸುವುದು ಇತ್ಯಾದಿ.

ಉತ್ಸವವನ್ನು ಕನ್ನಡ ಮತ್ತು ಸಂಸ್ಕೃತಿ ಹಾಗೂ ಪ್ರವಾಸೋದ್ಯಮ ಸಚಿವೆಯಾದ ಲೀಲಾದೇವಿ ಆರ್. ಪ್ರಸಾದ್‌ರವರು ಉದ್ಘಾಟಿಸಿದರು. ಈ ಉತ್ಸವದಲ್ಲಿ ಕರಕುಶಲ ವಸ್ತುಗಳಿಂದ ಹಿಡಿದು ಆಧುನಿಕ, ನವೀಕೃತ ವಿದ್ಯುತ್ ಉಪಕರಣ ಗಳವರೆಗಿನ ಪ್ರದರ್ಶನದಲ್ಲಿ ಮಹಿಳೆಯರೇ ಹೆಚ್ಚಾಗಿ ಪಾಲ್ಗೊಂಡಿದ್ದರು. ಸುಮಾರು 41 ಸ್ಟಾಲ್‌ಗಳನ್ನು ಮಹಿಳೆಯರೇ ನಡೆಸಿದರು. ಉತ್ಸವವನ್ನು ಉದ್ಘಾಟಿಸಿ ಮಾತನಾಡಿದ ಸಚಿವರು ಕೆನರಾಬ್ಯಾಂಕ್ ಹಾಗೂ ನನ್ನ ಸಂಬಂಧ ಬಹಳ ಹಳೆಯದು ಎಂದರು. ಬ್ಯಾಂಕ್ ಸಾಲ ನೀಡುವಾಗ ಮಹಿಳೆಯರಿಗೆ ಆದಷ್ಟು ಜಾಸ್ತಿ ಆದ್ಯತೆ ನೀಡಬೇಕು ಎಂದು ಮನವಿ ಮಾಡಿದರು.

### ತರಬೇತಿ

ಬೆಂಗಳೂರಿನಿಂದ 35 ಕಿ.ಮೀ. ದೂರ ದಲ್ಲಿರುವ ಹಾರೋಹಳ್ಳಿಯಲ್ಲಿ ಕೆನರಾ ಬ್ಯಾಂಕ್ ಮಹಿಳೆಯರಿಗಾಗಿ ತರಬೇತಿ ಕೇಂದ್ರ ವನ್ನು ನಡೆಸುತ್ತಿದೆ. ತರಬೇತಿಯಲ್ಲಿ ಭಾಗವಹಿ ಸುವ ಎಲ್ಲರಿಗೂ ಉಚಿತ ಊಟ ಹಾಗೂ ವಸತಿಯನ್ನು ನೀಡಲಾಗುವುದು. ಆಸಕ್ತಿ ಯುಳ್ಳ 18-34 ವರ್ಷ ವಯಸ್ಸಿನ ಮಹಿಳೆ ಯರು ಇದರ ಪ್ರಯೋಜನವನ್ನು ಪಡೆದು ಕೊಳ್ಳಬಹುದು.

### ಕೆನರಾಬ್ಯಾಂಕ್ ಕರ್ನಾಟಕದ ಈ ಕೆಳಕಂಡ ಸ್ಥಳಗಳಲ್ಲಿ ಮಹಿಳಾ ಉದ್ಯಮ ತರಬೇತಿ ಕೇಂದ್ರಗಳನ್ನು ಸ್ಥಾಪಿಸಿದೆ.

| | | |
|---|---|---|
| 1. Bangalore | : | LB & PSM Section, Circle Office Spencer's Towers, 86, M.G. Road, Bangalore-560 001. Phone:5585494, 5587281, 5588641, 5589481 |
| 2. Mangalore | : | LB& PSM Section, Circle Office, Light House Hill, Balmatta Road, Mangalore - 575 001. Phone : 32471-76 |

ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಿದ ಪ್ರೇಮಾಶ್ರೀಧರನ್‌ರವರು ಮಾತ ನಾಡಿ 'ಮಹಿಳೆ ತನ್ನನ್ನು ಉದ್ಯಮಿ ಎಂದು ಗುರುತಿ ಸುವಲ್ಲಿ ಹೆಮ್ಮೆ ಪಡಲಿ' ಎನ್ನುವ ಸಲಹೆಯನ್ನು ನೀಡಿದರು. ಕಾರ್ಯಕ್ರಮದಲ್ಲಿ 'ಮಹಿಳೆಯರು ಈ ಶತಮಾನದಲ್ಲಿ ಎದುರಿಸಬೇಕಾದ ಸವಾಲು ಗಳು' ಎಂಬ ವಿಷಯದ ಬಗ್ಗೆ ಚರ್ಚೆ ನಡೆಯಿತು. ಇದರ ಅಧ್ಯಕ್ಷತೆಯನ್ನು ಬ್ಯಾಂಕಿನ ಅಧ್ಯಕ್ಷರಾದ ಟಿ.ಆರ್. ಶ್ರೀಧರನ್‌ರವರು ವಹಿಸಿದ್ದರು. ಈ ಸಂದರ್ಭದಲ್ಲಿ ಮಾತನಾಡಿದ ಇವರು 'ಇಂದಿನ ಮಹಿಳೆ ಎಲ್ಲಾ ರೀತಿಯ ಸವಾಲನ್ನು ಎದುರಿಸಲು ಸಮರ್ಥಳು' ಎಂದರು. ಚರ್ಚೆಯಲ್ಲಿ ಕರಕುಶಲ ನಿಗಮದ ಅಧ್ಯಕ್ಷರಾದ ಶೋಭಾನಂಬಿಶನ್ ಸಹ ಮಾತನಾಡಿದರು. ಸ್ವತಹ ಉದ್ಯಮಿದಾರರಾದ ವತ್ಸಲಾ ಪ್ರಭು ಅವರು ಮಹಿಳೆಯರೊಂದಿಗೆ ತಮ್ಮ ಅನುಭವಗಳನ್ನು ಹಂಚಿಕೊಂಡರು.

ಗೋಷ್ಠಿಯಲ್ಲಿ 'ಮಹಿಳೆ ಹಾಗೂ ಉದ್ದಿಮೆ', 'ಮಹಿಳೆ ಮತ್ತು ಬ್ಯಾಂಕಿಂಗ್' 'ಮಹಿಳೆ ಮತ್ತು ಸವಲತ್ತುಗಳು' ಎಂಬ ಮೂರು ವರದಿಗಳನ್ನು ಮಂಡಿಸಿದರು. 4 ದಿನಗಳು ನಡೆದ ಕೆನ್ ಉತ್ಸವದಲ್ಲಿ ಸುಮಾರು 12 ಸಾವಿರಕ್ಕೂ ಅಧಿಕ ಜನರು ಭಾಗವಹಿಸಿದರು.

ಉತ್ಸವದಲ್ಲಿ ಭಾಗವಹಿಸಿದ ಮಹಿಳೆಯರು ತಮ್ಮ ಅನುಭವಗಳನ್ನು ಕುರಿತು ಹೀಗೆ ಹೇಳಿದ್ದಾರೆ. 'ಸೀರೆ ತೆಗೆದುಕೊಳ್ಳುವುದೇ ನನ್ನ ಹವ್ಯಾಸ'. ಈ ಹವ್ಯಾಸವೇ ನನ್ನನ್ನು ಉದ್ಯಮಿಯಾಗಲು ಪ್ರೇರೇಪಿಸಿತು ಎಂದು ಸಿಂಡಿಕೇಟ್ ಬ್ಯಾಂಕಿನಲ್ಲಿ ಅಧಿಕಾರಿ ಯಾಗಿ ಈಗ ಉದ್ಯಮಿಯಾಗಿರುವ ಯಶೋದಾ ರಂಗನಾಥ್ ಹೇಳುತ್ತಾರೆ. ಜೀವನದಲ್ಲಿ ಮುಂದು ವರೆಯಲು ಸಹಾಯಕ ಹಾಗೂ ಇದರಿಂದ ನನಗೆ ಹೆಚ್ಚಿನ ಅನುಭವ ದೊರೆತಿದೆ ಎನ್ನುವುದು ಅವರ ಅಭಿಪ್ರಾಯ. ಸುಂದರ ಆಕರ್ಷಕ ಚಿತ್ತಾರ ಗಳನ್ನು ಬಿಡಿಸುವ ರತ್ನಾವಾಗೇಳೆಯ ವರು ದೆಹಲಿಯಲ್ಲಿದ್ದು, ಇತ್ತೀಚಿಗೆ ಕರ್ನಾಟಕದಲ್ಲಿ ನೆಲೆಸಲು ಬಂದಿದ್ದಾರೆ. ಗಂಡನನ್ನು ಕಳೆದುಕೊಂಡು ಒಂಟಿ ಬಾಳು ನಡೆಸುತ್ತಿರುವ ಇವರು ಬಿಸಾಡುವ ಮಾರ್ಬಲ್ ತುಂಡು ಗಳಿಗೆಲ್ಲಾ ಜೀವ ತುಂಬಿದ್ದಾರೆ. ಕಸದಿಂದ ರಸ ಎನ್ನುವುದಕ್ಕೆ ಇವರು ಒಂದು ಜೀವಂತ ಉದಾಹರಣೆ.

ಮಣ್ಣಿನಿಂದ ಸುಂದರ ಮನ ಸೆಳೆಯುವ ಆಭರಣಗಳನ್ನು ಮಾಡುವ ಬಿಂದು ತನ್ನ ಕಲೆಗೆ ಉತ್ತಮ ಪ್ರೋತ್ಸಾಹ ಸಿಕ್ಕಿದೆ ಎನ್ನುತ್ತಾರೆ. 'ನಿಮ್ಮ ಕೂದಲು ಕಪ್ಪಾಗಿ ಹೊಳೆಯಲು ಮನೆಯಲ್ಲೇ ತಯಾರಿಸಿದ ಶೀಗೆಕಾಯಿ ಪೌಡರನ್ನು ಬಳಸಿ ಎನ್ನುವ ಸರಸ್ವತಿಯವರು ಈ ಉತ್ಸವಕ್ಕೆ ಅರೆಮನಸ್ಸಿನಿಂದಲೇ ಭಾಗವಹಿಸಿದವರು. ಆದರೆ ತಮ್ಮ ಬಳಿ ಇರುವ ಸ್ಟಾಕ್ ಖಾಲಿಯಾಗಿ ಇದಕ್ಕೆ ಬೇಡಿಕೆ ಬಂದಾಗ ಸಂತೋಷಗೊಂಡರು. ಮೊದಲ ಬಾರಿಗೆ ಇಂತಹ ವಸ್ತು ಪ್ರದರ್ಶನದಲ್ಲಿ ಭಾಗವಹಿಸುತ್ತಿದ್ದೇನೆ ಎಂದು ಹೇಳಿದರು.

ವಸ್ತು ಪ್ರದರ್ಶನದಿಂದ ನನ್ನ ವ್ಯಾಪಾರಕ್ಕೆ ಅನುಕೂಲವಾಯಿತು ಎನ್ನುವ ಭೇಲಾಪಟೇಲ್, ಕೆನರಾ ಬ್ಯಾಂಕಿನ ಟೌನ್‌ಹಾಲ್ ಶಾಖೆಯಿಂದ ಸಾಲ ಪಡೆದು ದೊಡ್ಡ ಹೋಟೆಲ್‌ಗಳಿಗೆ ಲ್ಯಾಂಪ್‌ಶೇಡ್ ಹಾಗೂ ಹಳೆಯ ಅಪರೂಪದ ವಸ್ತುಗಳನ್ನು ಸಂಗ್ರಹಿಸಿ ಮಾರಾಟ ಮಾಡುತ್ತಾರೆ.

ಕೆನರಾ ಬ್ಯಾಂಕು ನಡೆಸಿದ ವಸ್ತು ಪ್ರದರ್ಶನ ದಿಂದ ನನಗೆ ಸ್ಫೂರ್ತಿ ಸಿಕ್ಕಿತು ಎಂಬುದು ಪ್ರಿನ್ಸಿಪಾಲರಾಗಿ ನಿವೃತ್ತಿ ಹೊಂದಿರುವ ಪಾರ್ವತಿ ಯವರ ಅಭಿಪ್ರಾಯ. ಈಗ ನಾನು ಏನಾದರೂ ಸ್ವಂತ ಉದ್ದಿಮೆ ಮಾಡಲು ಯೋಚಿಸುತ್ತಿದ್ದೇನೆ ಎಂದು ಹೇಳುತ್ತಾರೆ.

ಕೆನರಾ ಬ್ಯಾಂಕಿನ ಮಹಿಳಾ ಉದ್ಯಮ ಕೇಂದ್ರದ ಅಧಿಕಾರಿ ಗೀತಾನಾಯಕ್ ಹಾಗೂ 'ಸಿಕೋಪಾ'ದ ಅಧಿಕಾರಿ ಛಾಯಾ ಪಾಟೀಲ್ ಇವರ ನೆರವಿನಿಂದ ವಸ್ತು ಪ್ರದರ್ಶನ ಯಶಸ್ವಿ ಯಾಗಿ ನಡೆಯಿತು. ಕೆನರಾ ಬ್ಯಾಂಕಿನ ಅಸಿಸ್ಟೆಂಟ್ ಜನರಲ್ ಮ್ಯಾನೇಜರ್ ಎಂ.ಡಿ. ಪ್ರಭು, ಡೆಪ್ಯೂಟಿ ಜನರಲ್ ಮ್ಯಾನೇಜರ್ ಮಾರ್ತಾಂಡ ಮೂರ್ತಿ, ಜನರಲ್ ಮ್ಯಾನೇಜರ್ ಅಘೋರಮ್, ಕಾರ್ಯ ನಿರ್ವಾಹಕ ನಿರ್ದೇಶಕರಾದ ಜೆ. ಕಾಮತ್ ಹಾಗೂ ಡಿವಿಜನಲ್ ಮ್ಯಾನೇಜರ್‌ಗಳಾದ ಎಂ.ಜೆ.ಎ. ಮಲ್ಯಾ ಮತ್ತು ನರಸಾರೆಡ್ಡಿ ಇವರುಗಳ ನಿರ್ದೇಶನ ಹಾಗೂ ಮಾಗದರ್ಶನದಿಂದ ಕಾರ್ಯಕ್ರಮ ಯಶಸ್ವಿಯಾಗಿ ನಡೆಯಿತು.

■ **ಗೀತಾ ವಿ.ನಾಯಕ್**
ಅಧಿಕಾರಿ, ಕೆನರಾ ಬ್ಯಾಂಕ್
ಎನ್.ಆರ್.ರೋಡ್, ಬೆಂಗಳೂರು.

### ಕನ್ನಡ ತರಗತಿ

ಕೆಎಎಸ್ ಹಾಗೂ ಐಎಎಸ್ ಪರೀಕ್ಷೆ ತೆಗೆದುಕೊಳ್ಳಲು ಉದ್ದೇಶಿಸಿರುವ ಕನ್ನಡ ಎಂ.ಎ. ವಿದ್ಯಾರ್ಥಿಗಳಿಗೆ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ಮಾಧ್ಯಮ ತರಗತಿಗಳನ್ನು ನಡೆಸಲು ಉದ್ದೇಶಿಸಿದೆ.

ಆಸಕ್ತರು ತರಗತಿಗಳಿಗೆ ಸೇರಲು ಕೊನೆಯ ದಿನಾಂಕ ಸೆಪ್ಟಂಬರ್ 15. ಹೆಚ್ಚಿನ ಮಾಹಿತಿಗೆ ಗೌರವ ಕಾರ್ಯದರ್ಶಿಗಳು. ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು- 18 ಈ ವಿಳಾಸದಲ್ಲಿ ಸಂಪರ್ಕಿಸಲು ಕೋರಲಾಗಿದೆ.

# ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

## ಬಾಹ್ಯ ಪರೀಕ್ಷೆಗಳಿಗೆ ಅರ್ಜಿ

ಏಪ್ರಿಲ್ : ಮೇ 1999ರಲ್ಲಿ ನಡೆಯಲಿರುವ ಈ ಕೆಳಗೆ ನಮೂದಿಸಿದ ಬಾಹ್ಯ ಪರೀಕ್ಷೆಗಳಿಗೆ ಅಭ್ಯರ್ಥಿಗಳು ನೋಂದಣಿ ಮಾಡಿಸಲಿಕ್ಕೆ ವಿಶ್ವವಿದ್ಯಾಲಯವು ಅವಕಾಶ ಕಲ್ಪಿಸಿದೆ.

**1) ಬಿ.ಎ.: ಬಿ..ಕಾಂ.: ಭಾಗ - 1,2 ಮತ್ತು 3. 2) ಎಂ.ಎ. (ಪ್ರಥಮ) ಸಮಾಜ ವಿಜ್ಞಾನ. 3) ಎಂ.ಎ. (ಅಂತಿಮ) ಸಮಾಜ ವಿಜ್ಞಾನ. 4) ಎಂ.ಎ. (ಪ್ರಥಮ) ಭಾಷೆಗಳು. 5) ಎಂ.ಎ. (ಅಂತಿಮ) ಭಾಷೆಗಳು. 6) ಎಂ.ಕಾಂ. (ಪ್ರಥಮ) 7) ಎಂ.ಕಾಂ. (ಅಂತಿಮ) 8) ಎಂ.ಎ.: ಎಂ.ಎಸ್.ಸಿ. (ಪ್ರಥಮ) ಗಣಿತ ಶಾಸ್ತ್ರ 9) ಎಂ.ಎ.: ಎಂ.ಎಸ್.ಸಿ. (ಅಂತಿಮ) ಗಣಿತ ಶಾಸ್ತ್ರ, 10) ಫ್ರೆಂಚ್, ರಶಿಯನ್, ಜರ್ಮನ್, ಭಾಷೆಗಳಲ್ಲಿ ಡಿಪ್ಲೋಮಾ, ಅಡ್ವಾನ್ಸ್ ಡಿಪ್ಲೋಮಾ.**

ಈ ವಿಶ್ವವಿದ್ಯಾಲಯದ ಪರೀಕ್ಷೆಗಳಿಗೆ ಬಾಹ್ಯ ಪರೀಕ್ಷಾರ್ಥಿಗಳಾಗಿ ತಮ್ಮ ಹೆಸರನ್ನು ನೋಂದಾಯಿಸ ಬಯಸುವ ಅಭ್ಯರ್ಥಿಗಳು ಸಂಬಂಧಿಸಿದ ಪರೀಕ್ಷೆಗಳ ''ಪರಿಚಯ ಪುಸ್ತಕ'' (ಪ್ರಾಸಪೆಕ್ಟಸ್) ಗಳನ್ನು ನೇರವಾಗಿ ಕರ್ನಾಟಕ ರಾಜ್ಯದ ಕೆಳಗೆ ನಮೂದಿಸಿದ ಊರುಗಳ ಸಿಂಡಿಕೇಟ್ ಬ್ಯಾಂಕ್ ಶಾಖೆಗಳಲ್ಲಿ ನಿಗದಿ ಪಡಿಸಿದ ಕೊನೆಯ ದಿನಾಂಕದೊಳಗಾಗಿ ಪಡೆಯಬಹುದು.

**1. ಧಾರವಾಡ - ಕರ್ನಾಟಕ ವಿಶ್ವವಿದ್ಯಾಲಯದ ಶಾಖೆ. 2. ಬೆಳಗಾಂವ - ಮಾರುತಿಗಲ್ಲಿ ಶಾಖೆ. 3. ಬೆಂಗಳೂರು - ಗಾಂಧಿನಗರ ಶಾಖೆ. 4. ಗುಲ್ಬರ್ಗಾ - ಸುಪರ್ ಮಾರ್ಕೆಟ್ ಶಾಖೆ. 5. ಮಂಗಳೂರು - ಹಂಪನಕಟ್ಟೆ ಶಾಖೆ. 6. ಬಳ್ಳಾರಿ - ಅಗಡಿ ಕಟ್ಟಡ, ಬೆಂಗಳೂರು ರಸ್ತೆ ಶಾಖೆ. 7. ಬಿಜಾಪೂರ - ಬಸವೇಶ್ವರ ರೋಡ್ ಮೇನ್ ಶಾಖೆ. 8. ಉಡುಪಿ - ಕೆಥೋಲಿಕ್ ಸೆಂಟರ್, ಸ್ಥಳೀಯ ಕಾರ್ಯಾಲಯ. 9. ಶಿವಮೊಗ್ಗ - ಗಾಂಧಿಬಜಾರ ರಸ್ತೆ ಶಾಖೆ. 10. ಚಿತ್ರದುರ್ಗ - ಮೇನ್ ಬ್ರಾಂಚ್. 11. ಗದಗ - ಸಿಂಡಿಕೇಟ್ ಬ್ಯಾಂಕ್. 12. ಕಾರವಾರ - ಮೇನ್ ಬ್ರಾಂಚ್. 13. ರಾಣೇಬೆನ್ನೂರು - ಸಿಂಡಿಕೇಟ್ ಬ್ಯಾಂಕ್. 14. ಬಾಗಲಕೋಟೆ - ಸಿಂಡಿಕೇಟ್ ಬ್ಯಾಂಕ್.**

ಮೇಲೆ ನಮೂದಿಸಿದ ವಿವಿಧ ಪರೀಕ್ಷೆಯ ಪರಿಚಯ ಪುಸ್ತಕ (Prospectus)ಗಳು ಮೇಲೆ ನಮೂದಿಸಿದ ಸಿಂಡಿಕೇಟ್ ಬ್ಯಾಂಕುಗಳಲ್ಲಿ ರೂ. 75-00ಕ್ಕೆ ಹಾಗೂ ಅಂಚೆ ಮೂಲಕ ಪಡೆಯುವವರಿಗೆ ರೂ. 95-00ಕ್ಕೆ ಕೊಡಲಾಗುವುದು.

ಅಂಚೆಯ ಮೂಲಕ ಪರಿಚಯ ಪುಸ್ತಕಗಳನ್ನು ಪಡೆಯಲಿಚ್ಛಿಸುವ ಅಭ್ಯರ್ಥಿಗಳು, ಅರ್ಜಿಯಲ್ಲಿ ಯಾವ ಪದವಿಯ ಪರಿಚಯ ಪುಸ್ತಕ ಬೇಕಾಗಿದೆ ಎಂಬುದನ್ನು ನಮೂದಿಸಿ 95-00 ರೂ.ಗಳ ಬ್ಯಾಂಕ್ ಹುಂಡಿಯನ್ನು (ಡಿ.ಡಿ.) ವಿತ್ತಾಧಿಕಾರಿಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಇವರ ಹೆಸರಿನಲ್ಲಿ ತೆಗೆಯಿಸಿ, ನಿಗದಿತ ಕೊನೆಯ ದಿನಾಂಕದೊಳಗಾಗಿ, ಉಪಕುಲಸಚಿವರು, ಬಾಹ್ಯ ಪರೀಕ್ಷಾ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - 3 ಇವರ ವಿಳಾಸಕ್ಕೆ ಕಳುಹಿಸತಕ್ಕದ್ದು. ಸ್ನಾತಕೋತ್ತರ ಪರಿಚಯ ಪುಸ್ತಕ ಬೇಕಾದಲ್ಲಿ ಮೊದಲನೇ ವರ್ಷಕ್ಕೋ ಅಥವಾ ಎರಡನೇ ವರ್ಷಕ್ಕೋ ಅನ್ನುವ ಬಗ್ಗೆ, ಜೊತೆಗೆ ವಿಷಯ ನಮೂದಿಸಿ ಪರಿಚಯ ಪುಸ್ತಕಕ್ಕಾಗಿ ಅರ್ಜಿ ಬರೆದುಕೊಳ್ಳಬೇಕು. ಹುಂಡಿಗಳು ಸ್ಟೇಟ್ ಬ್ಯಾಂಕ್, ಸಿಂಡಿಕೇಟ್ ಬ್ಯಾಂಕ್, ಕೆನರಾ ಬ್ಯಾಂಕ್ ಹಾಗೂ ಕರ್ನಾಟಕ ಬ್ಯಾಂಕ್‌ಗಳಿಂದ ಮಾತ್ರ ಖರೀದಿಸಿರಬೇಕು. ಅವುಗಳ ಹೊರತಾಗಿ ಬೇರೆ ಬ್ಯಾಂಕುಗಳಿಂದ ಖರೀದಿಸಿದ್ದರೆ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಸಂಬಂಧಪಟ್ಟ ಪರೀಕ್ಷೆಗಳಿಗೆ ಸರಿಯಾಗಿ ಭರ್ತಿ ಮಾಡಿದ ಅರ್ಜಿಗಳನ್ನು ನಿಗದಿಪಡಿಸಿದ ಕೊನೆಯ ದಿನಾಂಕದೊಳಗಾಗಿ ಉಪಕುಲಸಚಿವರು, ಬಾಹ್ಯ ಪರೀಕ್ಷಾ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಇವರಿಗೆ ತಲುಪುವಂತೆ ಕಳುಹಿಸಬೇಕು.

**ಕೊನೆಯ ದಿನಾಂಕ :**

**1. ದಂಡ ರಹಿತ : 17-9-1998 ರವರೆಗೆ.**

**2. ದಂಡ ಸಹಿತ ನೋಂದಣಿ ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕಗಳು, ಈ ಕೆಳಗಿನಂತಿವೆ:**

**★ 50-00 ರೂ. ದಂಡದೊಂದಿಗೆ 18-9-98 ರಿಂದ 7-10-98ರವರೆಗೆ.**

**★ 100-00 ರೂ. ದಂಡದೊಂದಿಗೆ 8-10-98 ರಿಂದ 2-11-98ರ ವರೆಗೆ.**

**ವಿಶೇಷ ಸೂಚನೆ :**

1. ಖಾಸಗಿ ಏಜೆಂಟರುಗಳ : ಟ್ಯುಟೋರಿಯಲ್‌ಗಳ ಮುಖಾಂತರ ಕಳಿಸಿದ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.
2. ನಗದು ಹಣವನ್ನು ಕವರಿನಲ್ಲಿ ಕಳಿಸಿದಲ್ಲಿ ವಿಶ್ವವಿದ್ಯಾಲಯವು ಜವಾಬ್ದಾರಿಯಲ್ಲ.
3. ಅಕ್ಟೋಬರ್ 1998 ರ ಪುರವಣಿಗೆಯ ಪರೀಕ್ಷೆಯಲ್ಲಿ ಪಾಸಾದ ವಿದ್ಯಾರ್ಥಿಗಳು ಎಪ್ರಿಲ್ 1999ಕ್ಕೆ ನೋಂದಣಿ ಮಾಡಲು ಅರ್ಹರಲ್ಲ. ■

## ವಿದ್ಯಾರ್ಥಿ ವೇತನ

ಉನ್ನತ ಶಿಕ್ಷಣದಲ್ಲಿ ವ್ಯಾಸಂಗ ಮಾಡುತ್ತಿರುವ ಆರ್ಥಿಕವಾಗಿ ಹಿಂದುಳಿದ ಪ್ರತಿಭಾವಂತರಿಗೆ ಅಮೆರಿಕ ಮೂಲದ ಸಂಸ್ಥೆಯೊಂದು ವಿದ್ಯಾರ್ಥಿ ವೇತನ ನೀಡಲಿದ್ದು ಅರ್ಜಿ ಆಹ್ವಾನಿಸಿದೆ.

ಆಸಕ್ತರು ಸ್ವವಿಳಾಸವುಳ್ಳ ಅಂಚೆ ಚೀಟಿ ಅಂಟಿಸಿದ ಲಕೋಟೆಯನ್ನು ಪ್ರೊ. ಜಿ.ಕೆ. ನಾರಾಯಣರೆಡ್ಡಿ, ಅಧ್ಯಕ್ಷರು, ಜನತಾ ಶಿಕ್ಷಣ ಸಂಸ್ಥೆ, ವಿವೇಕಾನಂದ ಕಾಲೇಜು ಆವರಣ, ರಾಜಾಜಿನಗರ, ೨ನೇ ಹಂತ, ಬೆಂಗಳೂರು. ಇವರಿಗೆ ಕಳುಹಿಸಲು ಕೋರಲಾಗಿದೆ.

# ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ

9 ಮತ್ತು 10ನೇ ಮಹಡಿ, ವಿಶ್ವೇಶ್ವರಯ್ಯ ಚಿಕ್ಕ ಗೋಪುರ, ಡಾ. ಅಂಬೇಡ್ಕರ್ ವೀಧಿ, ಬೆಂಗಳೂರು - 560 001.

## ಎನ್.ಎಸ್.ಎಫ್.ಡಿ.ಸಿ. ನೇರಸಾಲ ಯೋಜನೆಯಡಿ ಗ್ರೀವ್ಸ್ ಗರುಡ ಡೀಸಲ್ ತ್ರಿಚಕ್ರ ವಾಹನಗಳ ಸೌಲಭ್ಯ ಪಡೆಯಲು ಅರ್ಜಿ ಆಹ್ವಾನ.

**ಕ**ರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮವು ಅನುಷ್ಠಾನ ಗೊಳಿಸುತ್ತಿರುವ ಎನ್.ಎಸ್.ಎಫ್.ಡಿ.ಸಿ. ನೇರ ಸಾಲ ಯೋಜನೆಯಡಿ 1998-99ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ವಿದ್ಯಾವಂತ ನಿರುದ್ಯೋಗಿಗಳಿಗೆ ಕರ್ನಾಟಕ ರಾಜ್ಯಾದ್ಯಾಂತ 100 ಗ್ರೀವ್ಸ್ ಗರುಡ ಡೀಸಲ್ ತ್ರಿಚಕ್ರ ವಾಹನ ಬಳಸಲು ಸಾಲ ಸೌಲಭ್ಯ ಒದಗಿಸಲು ಉದ್ದೇಶಿಸಲಾಗಿದೆ. ಪರಿಶಿಷ್ಟ ಜಾತಿ ಮತ್ತು ವರ್ಗಕ್ಕೆ ಸೇರಿದ ವಿದ್ಯಾವಂತ ನಿರುದ್ಯೋಗಿ ಅರ್ಹ ಯುವಕರು ಈ ಯೋಜನೆಯ ಸೌಲಭ್ಯ ಪಡೆದು ತಮ್ಮ ಕುಟುಂಬದ ಆರ್ಥಿಕ ಮಟ್ಟ ಸುಧಾರಿಸಿಕೊಳ್ಳುವುದರ ಜೊತೆಗೆ ನಿರುದ್ಯೋಗ ಸಮಸ್ಯೆ ನಿವಾರಣೆ ಮಾಡಿಕೊಳ್ಳಬಹುದು.

**ಸೌಲಭ್ಯ ಪಡೆಯಲಿಚ್ಛಿಸುವ ಅರ್ಜಿದಾರರು :**

1. ಪರಿಶಿಷ್ಟ ಜಾತಿ ಮತ್ತು ವರ್ಗಕ್ಕೆ ಸೇರಿದವರಾಗಿರಬೇಕು. 2. ವಾರ್ಷಿಕ ವರಮಾನ ರೂ. 22,000/-ಗಳನ್ನು ಮೀರಿರಬಾರದು. 3. ಈ ಹಿಂದೆ ನಿಗಮದಿಂದ ಯಾವುದೇ ಸಾಲ ಸೌಲಭ್ಯ ಪಡೆದಿರಬಾರದು. 4. ಕರ್ನಾಟಕ ರಾಜ್ಯದಲ್ಲಿ ಕನಿಷ್ಠ 15 ವರ್ಷ ವಾಸವಾಗಿರಬೇಕು. 5. ಸಾರಿಗೆ ವಾಹನ ಓಡಿಸಲು ಅಗತ್ಯ ಪರವಾನಿಗಿ ಹೊಂದಿರಬೇಕು. 6. ನಿಗಮದಿಂದ ವಾಹನ ಚಾಲನಾ ತರಬೇತಿ ಪಡೆದಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ನಿರುದ್ಯೋಗಿಗಳಿಗೆ ಆದ್ಯತೆ ನೀಡಲಾಗುತ್ತದೆ. 7. ಬೆಂಗಳೂರು (ನಗರ) ವ್ಯಾಪ್ತಿಯನ್ನು ಹೊರತು ಪಡಿಸಿ ಅರ್ಜಿ ಸಲ್ಲಿಸಬೇಕು. 8. ಆಟೋರಿಕ್ಷಾ ಚಾಲನೆ ಪರವಾನಗಿ ಮತ್ತು ಬ್ಯಾಡ್ಜ್ ನಂ. ಹೊಂದಿರಬೇಕು.

ಮೇಲೆ ತಿಳಿಸಿರುವ ಯೋಜನೆಯಡಿ ಸೌಲಭ್ಯ ಪಡೆಯಲು ಇಚ್ಛಿಸುವ ಅರ್ಹ ಅಭ್ಯರ್ಥಿಗಳು ಅರ್ಜಿಯ ಜೊತೆ ಈ ಕೆಳಗೆ ಕಾಣಿಸಿರುವ ದಾಖಲಾತಿಗಳನ್ನು ಸೇರಿಸಿ ಮನವಿ ಸಲ್ಲಿಸಬೇಕು.

**ಅ. ಫೋಟೋ - 3**

**ಆ. ಜಾತಿ ಪ್ರಮಾಣ ಪತ್ರ**

**ಇ. ವಾರ್ಷಿಕ ವರಮಾನ ಪತ್ರ**

**ಈ. ರೇಷನ್ ಕಾರ್ಡ್ ಪ್ರತಿ.**

ಈ ಯೋಜನೆಯಡಿ ಜಿಲ್ಲಾವಾರು ನಿಗಧಿ ಮಾಡಿರುವ ಗುರಿ ಈ ರೀತಿ ಇದೆ.

ಬೆಂಗಳೂರು (ಗ್ರಾ)-(05), ಚಿತ್ರದುರ್ಗ - (05), ತುಮಕೂರು - (05), ದಾವಣಗೆರೆ - (04), ಬಳ್ಳಾರಿ - (05), ರಾಯಚೂರು - (05), ಕೊಪ್ಪಳ (03), ಬಾಗಲಕೋಟೆ - (03), ಬಿಜಾಪುರ - (05), ಬೆಳಗಾಂ - (05), ಉತ್ತರ ಕನ್ನಡ ( 02), ಧಾರವಾಡ - (04), ಗದಗ್ - (03), ಹಾವೇರಿ - (03), ಶಿವಮೊಗ್ಗ - (05), ಹಾಸನ - (03), ಮಂಡ್ಯ - (03), ದಕ್ಷಿಣ ಕನ್ನಡ - (04), ಉಡುಪಿ - (02), ಚಿಕ್ಕಮಗಳೂರು - (03), ಕೊಡಗು - (02), ಮೈಸೂರು - (05), ಚಾಮರಾಜನಗರ - (03), ಬೀದರ್ - (03), ಕೋಲಾರ - (05), ಗುಲ್ಬರ್ಗಾ - (05).

**ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 5.9.98.**

ಹೆಚ್ಚಿನ ಮಾಹಿತಿಗಾಗಿ ನಿಗಮದ ಜಿಲ್ಲಾ ಕಛೇರಿಗಳನ್ನು ಸಂಪರ್ಕಿಸಬಹುದು. ಅರ್ಜಿ ಪಡೆಯಬೇಕಾಗಿರುವ ಮತ್ತು ಸಲ್ಲಿಸಬೇಕಾಗಿರುವ ವಿಳಾಸ:

**ಸಂಬಂಧಪಟ್ಟ ಜಿಲ್ಲಾ ವ್ಯವಸ್ಥಾಪಕರು, ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ವರ್ಗಗಳ ಅಭಿವೃದ್ಧಿ ನಿಗಮ.**

## ಪತ್ರಿಕೋದ್ಯಮದಲ್ಲಿ ಅಪ್ರೆಂಟಿಸ್‌ಶಿಪ್

**ರಾ**ಜ್ಯ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆಯ ವತಿಯಿಂದ ಪರಿಶಿಷ್ಟ ಜಾತಿಯ ಅಭ್ಯರ್ಥಿಗಳಿಗಾಗಿ ಪತ್ರಿಕೋದ್ಯಮದಲ್ಲಿ ತರಬೇತಿ ನೀಡುವ ಯೋಜನೆಯೊಂದಿದೆ.

ಇದು ಸುಮಾರಾಗಿ ಪ್ರತಿ ವರ್ಷ ದೊರಕುವ ತರಬೇತಿ ಅವಕಾಶ ಎನ್ನಬಹುದು. ಪುರುಷ ಹಾಗೂ ಮಹಿಳಾ ಅಭ್ಯರ್ಥಿಗಳಿಗೂ ಈ ಅವಕಾಶ ದೊರೆಯುತ್ತದೆ. ವಿಶೇಷವಾಗಿ ಪರಿಶಿಷ್ಟ ಜಾತಿಗೆ ಸೇರಿದ ಅಭ್ಯರ್ಥಿಗಳಿಗೆ ಪ್ರೋತ್ಸಾಹ ನೀಡಲಾಗುತ್ತದೆ. ಪತ್ರಿಕೋದ್ಯಮದ ಈ ತರಬೇತಿ ಒದಗಿಸಲು ಸರ್ಕಾರವು ಸ್ಟೈಪೆಂಡ್ ಕೂಡ ನೀಡುತ್ತದೆ.

ರಾಜ್ಯದ ಯಾವುದೇ ವಿ.ವಿಯಿಂದ ಪತ್ರಿಕೋದ್ಯಮ ಅಥವಾ ಸಮೂಹ ಮಾಧ್ಯಮದಲ್ಲಿ ಪದವಿ ಪಡೆದಿರಬೇಕು. ಯಾವುದೇ ಪದವಿಯಲ್ಲಿ ಪ್ರಥಮ ಶ್ರೇಣಿಯಲ್ಲಿ ಪಾಸಾದ ಅಭ್ಯರ್ಥಿಗಳು ಇದಕ್ಕೆ ಅರ್ಹರಾಗಿರುತ್ತಾರೆ. ಕನ್ನಡ ಹಾಗೂ ಇಂಗ್ಲಿಷ್‌ಗಳನ್ನು ಐಚ್ಛಿಕವಾಗಿ ಪಡೆದಿರಬೇಕು. ಯಾವುದೇ ವಿಶ್ವವಿದ್ಯಾಲಯದ ಸ್ನಾತಕೋತ್ತರ ಪದವಿ ಪಡೆದವರೂ ಈ ಅಪ್ರೆಂಟಿಸ್‌ಶಿಪ್ ತರಬೇತಿಗೆ ಅರ್ಹರಾಗುತ್ತಾರೆ.

ಈ ಕುರಿತಂತೆ ಲಿಖಿತ ಪರೀಕ್ಷೆ ಹಾಗೂ ಸಂದರ್ಶನಗಳನ್ನು ಆಧರಿಸಿ ಅಭ್ಯರ್ಥಿಗಳ ಆಯ್ಕೆ ಮಾಡಲಾಗುತ್ತದೆ. ೨೦ ವರ್ಷಗಳಿಂದ ೩೫ ವರ್ಷದ ವರೆಗಿನ ವಯೋಮಿತಿಯ ಅಭ್ಯರ್ಥಿಗಳು ಇದಕ್ಕೆ ಅರ್ಹರಾಗಿರುತ್ತಾರೆ.

ಜನಪ್ರಿಯ ಪತ್ರಿಕೆಗಳಲ್ಲಿ ಈ ಅಭ್ಯರ್ಥಿಗಳಿಗೆ ತರಬೇತಿ ನೀಡುವ ಮೂಲಕ ಪತ್ರಿಕೋದ್ಯಮದ ಪರಿಚಯ ಮಾಡಿಸಿಕೊಡಲಾಗುತ್ತದೆ. ವಾರ್ತಾ ಮತ್ತು ಪ್ರಚಾರ ಇಲಾಖೆಯ ಶಾಖಾ ಕಚೇರಿಗಳನ್ನು ಸಂಪರ್ಕಿಸಿ ಈ ಬಗ್ಗೆ ಹೆಚ್ಚಿನ ಮಾಹಿತಿ ಪಡೆದುಕೊಳ್ಳಬಹುದು. ■

# ಸಿನಿಮಾದಲ್ಲಿ ಸದವಕಾಶಕ್ಕೆ ತರಬೇತಿ-ಶಿಕ್ಷಣ

ಸಿನಿಮಾ ಜಗತ್ತು ಸಾಮಾನ್ಯ ವರ್ಗಕ್ಕೆ ಬಹುದೂರದ ಸ್ವರ್ಗ ಅಥವಾ ಮಾಯಾಲೋಕ. ಇದರಲ್ಲಿ ಕೂಡ ಶಿಸ್ತು- ಸಂಯಮದಿಂದ ಅವಕಾಶ ಗಿಟ್ಟಿಸಬಹುದು. 'ಟ್ಯಾಲೆನ್ಸ್' ಎಂಬುದಕ್ಕೆ ಎಲ್ಲಿಯಾದರೂ ಅವಕಾಶ ಇದೆ ಎಂಬುದನ್ನು ಮನದಟ್ಟು ಮಾಡಿಕೊಳ್ಳಬೇಕು.

ಸದ್ಯ ನಿಮಗೆ ಬೆಂಗಳೂರಿನ ವಿಜಯ ಫಿಲ್ಮ್ ಇನ್ಸಿಟಿಟ್ಯೂಟ್ ಬಗ್ಗೆ ಸ್ವಲ್ಪ ವಿವರ ನೀಡುತ್ತಿದ್ದೇವೆ. ನೀವು ಅಲ್ಲಿಗೇ ನೇರವಾಗಿ ಸಂಪರ್ಕ ಇಟ್ಟುಕೊಂಡರೆ ಉತ್ತಮ.

ಬೆಂಗಳೂರಿನ ರಾಜಾಜಿನಗರದ ಇಎಸ್ಐ ಆಸ್ಪತ್ರೆ ಎದುರಿಗಿರುವ ಈ ಪುಟ್ಟ ಸಂಸ್ಥೆ ಸಂಗೀತ, ನೃತ್ಯಗಳ ಕುರಿತು 'ಬೇಸಿಕ್' ಜ್ಞಾನ ನೀಡುತ್ತದೆ. ಇದು ನಿಗದಿಪಡಿಸಿದ ಶುಲ್ಕ ಕೂಡ ಭಾರವಾದದ್ದೇನಲ್ಲ ಎಂದು ಹೇಳಬಹುದು.

ಪಿಯಾನೊ, ಗಿಟಾರ್, ವಾಯೊಲಿನ್, ಹಾಡುಗಾರಿಕೆ (ಸಿನಿಮಾ) ಸಂಗೀತದ ಬಗ್ಗೆ ಶಿಕ್ಷಣ-ತರಬೇತಿ, ತಬಲಾ, ಡ್ರಮ್ ವಾದ್ಯಗಳ ಬಗ್ಗೆ ನಿಗದಿತ ಅವಧಿಗೆ ಕೋರ್ಸ್ ನಡೆಸುವ ಇಲ್ಲಿನ ಪರಿಣತರು ತಮ್ಮ ಶ್ರಮ ಸಾರ್ಥಕಗೊಳಿಸುತ್ತಿದ್ದಾರೆ.

ಈ ಎಲ್ಲ ವಿಷಯ-ಕೋರ್ಸುಗಳ ಶಿಕ್ಷಣವು ಲಂಡನ್ನಿನ ಟ್ರನಿಟಿ ಕಾಲೇಜ್ ಆಫ್ ಮ್ಯೂಸಿಕ್‌ನ ಸಿಲಾಬಸ್‌ನೊಂದಿಗೆ ತಳಕುಹಾಕಿಕೊಂಡಿದೆ.

ಸಿನಿಮಾ ನಟನೆ ಬಗ್ಗೆ ಸಂಪೂರ್ಣ ಮಾಹಿತಿ, ತರಬೇತಿ, ದೂರದರ್ಶನ, ರಂಗ ಕಲಾವಿದರಾಗುವ ತರಬೇತು, ಸಿನಿಮಾ ಹಿನ್ನೆಲೆಯ ಸಂಗೀತ, ಹಾಡುಗಾರಿಕೆ, ಆಕಾಶವಾಣಿ, ದೂರದರ್ಶನಗಳಲ್ಲಿ ಹೇಗೆ ಹಾಡಿ ಮಿಂಚಬಹುದು, ಇಲ್ಲವೇ ನಿಮ್ಮದೇ ಆದ ಹಾಡುಗಳ ಕ್ಯಾಸೆಟ್ ಮಾಡಬೇಕೆಂಬ ಬಗ್ಗೆ ಸಹ ಈ ವಿಜಯ ಫಿಲ್ಮ್ ಇನ್ಸಿಟಿಟ್ಯೂಟ್‌ನಲ್ಲಿ ಶಿಕ್ಷಣ ಪಡೆಯಬಹುದು.

ನೀವು ಸಂಗೀತ-ವಾದ್ಯಗಳಲ್ಲಿ ಪರಿಣತಿ ಪಡೆಯಬೇಕೆಂದಾದಲ್ಲಿ ಅದಕ್ಕೂ ಅವಕಾಶವುಂಟು. ಸಿನಿಮಾ ಸಂಗೀತಕ್ಕೆ, ದೂರದರ್ಶನ, ಕ್ಯಾಸೆಟ್ ಹಾಗೂ ನಾಟಕಗಳಿಗೆ ಸಂಗೀತ ಒದಗಿಸುವ ಕಲೆ ಕೂಡ ಇಲ್ಲಿನ ಕಲಿಕೆಯ ಒಂದು ಭಾಗ.

## ಸ್ಟಂಟ್ ಮಾಡಬೇಕೆ?

ಸಿನಿಮಾದಲ್ಲಿನ ಸ್ಟಂಟ್‌ಗಳಿಂದ ನೀವು ಉತ್ತೇಜಿತರಾಗುವುದಿಲ್ಲವೇ? ನೀವೂ ಅದನ್ನು ಕಲಿಯಬಹುದು. ಕಲಾವಿದನಾಗಬಹುದು. ಇದರಲ್ಲಿ ಫಿಲ್ಮ್ ಡಾನ್ಸ್, ಬ್ರೇಕ್ ಡಾನ್ಸ್, ಫಿಲ್ಮ್ ಸ್ಟಂಟ್ ಹಾಗೂ ಇನ್ನಿತರ ಸಿನಿಮಾಗೆ ಸಂಬಂಧಿಸಿದ ನೃತ್ಯಗಳ ಬಗ್ಗೆ ಶಿಕ್ಷಣ, ತರಬೇತಿ ಇತ್ಯಾದಿಗಳನ್ನು ಈ ಸಂಸ್ಥೆ ನೀಡುತ್ತದೆ.

ಸುಮಾರು ಒಂದು ವರ್ಷದ ಅವಧಿಯ ಈ ಎಲ್ಲ ಕೋರ್ಸುಗಳು ಸರ್ಕಾರದಿಂದ ಮಾನ್ಯತೆ ಪಡೆದಿವೆ. ಶಿಕ್ಷಣ ಮಂಡಳಿಯಿಂದ ಪರೀಕ್ಷೆಗಳನ್ನು ನಡೆಸಲಾಗುತ್ತದೆ.

## ಫೀ ಎಷ್ಟು?

ಸಿನಿಮಾ ಸಂಗೀತ, ನಟನೆ, ಹಾಡುಗಾರಿಕೆ ಕಲಿಕೆ, ದೂರದರ್ಶನ, ಆಕಾಶವಾಣಿಗಳ ಬಗ್ಗೆ ಭಾಗವಹಿಸುವ ತರಬೇತಿ ಇವುಗಳಿಗೆಲ್ಲ ನೀವು ಬಹಳವೆಂದರೆ ಒಂದು ಕೋರ್ಸಿಗೆ ನೂರರಿಂದ-ನೂರೈವತ್ತು ರೂಪಾಯಿ ಶುಲ್ಕ ತೆರಬೇಕಾದೀತಷ್ಟೇ, ಹೆಚ್ಚಿಲ್ಲ. ನೀವು ಹೆಚ್ಚು ಕಲಿಯಲು ಇಷ್ಟಪಟ್ಟರೆ ಹೆಚ್ಚು ಶುಲ್ಕ ತೆರಬೇಕು.

ರೆಕಾರ್ಡಿಂಗ್, ಟೀವಿ ಶೂಟಿಂಗ್, ನೆರಳು-ಬೆಳಕು ಇತ್ಯಾದಿಗಳ ಪರಿಕಲ್ಪನೆ, ಶುದ್ಧ-ಶಿಸ್ತುಬದ್ಧತೆಯನ್ನು ಪರಿಶ್ರಮ ಮೂಲಕ ನೀವು ಪಡೆಯಬಹುದು.

ಇದಕ್ಕೆ ಕನಿಷ್ಠ ಶಿಕ್ಷಣ ಮಾತ್ರ ಅಗತ್ಯ. ನೀವು ಎಸ್.ಎಸ್.ಎಲ್.ಸಿ ಪಾಸು ಮಾಡಿಕೊಂಡಿದ್ದರೂ ಆದೀತು. ಯಾವುದೇ ನಿರ್ಬಂಧವಿಲ್ಲದೇ ನೀವು ಕಲಿಯಬಹುದು, ತರಬೇತಿ ಪಡೆಯಬಹುದು.

ಮುನ್ನುಗ್ಗಿ, ಜ್ಞಾನಕ್ಕೆ-ತರಬೇತಿಗೆ ಅನುಭವಕ್ಕೆ ಸಮನಾದುದಿಲ್ಲ. ■



## ಊಟ ಬಡಿಸುವ ಭಟ್ಟ ಯಾರು?

**ಟಿ** ಪಿ. ಕೈಲಾಸಂ ಶಿವಮೊಗ್ಗದಲ್ಲಿದ್ದಾಗ, ಅವರ ಮಿತ್ರರು ಬೆಳದಿಂಗಳೂಟವನ್ನು ಏರ್ಪಡಿಸಿದ್ದರು. ಆದರೆ ಎಷ್ಟು ಹೊತ್ತಾದರೂ ಕೈಲಾಸಂ ಬರಲೇ ಇಲ್ಲ. 'ಮಾಡಿರುವ ಅಡಿಗೆಯೆಲ್ಲಾ ಆರಿ ಹೋಗುತ್ತದೆ. ಕೊನೆಯ ಒಂದು ಎಲೆಯನ್ನು ಖಾಲಿ ಬಿಟ್ಟು ನಾವೆಲ್ಲ ಕುಳಿತು ಆರಂಭಿಸೋಣ' ಎಂದು ನಿಶ್ಚಯಿಸಿದರು.

'ಈ ಸಕ್ಕರೆ ಹೋಳಿಗೆ, ಶಾವಿಗೆ ಖೀರು ತಿನ್ನುವ ಯೋಗ ಕೈಲಾಸಂರವರಿಗೆ ಇಲ್ಲದೇ ಹೋಯಿತಲ್ಲ!' ಎಂದು ಒಬ್ಬರು ಉದ್ಗರಿಸಿದರು.

'ಹೌದು,ಪಾಪ - ಅದು ಅವನ ದುರ್ದೈವ, ಇರಲಿ. ನಿಮಗೆ ಇನ್ನೊಂದು ಹೋಳಿಗೆ ಹಾಕುತ್ತೇನೆ' ಎಂದರು ಬಡಿಸುವ ಭಟ್ಟರು.

ಹಾಗೆ ಉಪಚಾರ ಮಾಡುತ್ತ ಬಡಿಸುತ್ತಿದ್ದ ಭಟ್ಟರನ್ನು ಈಗ ಸ್ನೇಹಿತರು ಗಮನಿಸಿದರು. ಭಟ್ಟರಂತೆ ತುಂಡು ಪಂಚೆಯುಟ್ಟು ಊಟ ಬಡಿಸುತ್ತಿದ್ದವರೇ ಕೈಲಾಸಂ.

(ಸಂಗ್ರಹ) **ಶಂಕರಗೌಡ**

# ಬೋಧನಾ ಹುದ್ದೆಗಳ ನೇಮಕಾತಿಗಾಗಿ ಅರ್ಜಿ ಹಾಕಿ

## ಬೆಂಗಳೂರು ವಿಶ್ವವಿದ್ಯಾನಿಲಯ, ಜ್ಞಾನಭಾರತಿ, ಬೆಂಗಳೂರು – 560 056.

ಸ್ನಾತಕೋತ್ತರ ವಿಭಾಗಗಳು ಮತ್ತು ಅಂಡರ್ ಗ್ರಾಜ್ಯುಯೇಟ್ ಕಾಲೇಜುಗಳು/ ವಿಶ್ವ ವಿದ್ಯಾನಿಲಯದ ಶಿಕ್ಷಣ ಸಂಸ್ಥೆಗಳಲ್ಲಿ ಬೋಧನಾ ಹುದ್ದೆಗಳಿಗಾಗಿ ನಿಗದಿತ ನಮೂನೆಯಲ್ಲಿ 7 (ಏಳು) ಸೆಟ್‌ಗಳಲ್ಲಿ ಅರ್ಜಿಗಳನ್ನು ಅರ್ಹ ಭಾರತೀಯ ಪ್ರಜೆಗಳಿಂದ ಆಹ್ವಾನಿಸಲಾಗಿದೆ. ವಿದೇಶದಲ್ಲಿ ನೆಲಸಿರುವ ಅರ್ಹ ಭಾರತೀಯ ರಾಷ್ಟ್ರೀಯರೂ ಸಹ ಅರ್ಜಿ ಸಲ್ಲಿಸಬಹುದು.

**ಸೂಚನೆಗಳು :**

1. ಪ್ರೊಫೆಸರ್‌ಗಳು ಮತ್ತು ರೀಡರ್‌ಗಳ ಹುದ್ದೆಗಾಗಿ ರೂ. 15/- ಮತ್ತು ಉಪನ್ಯಾಸಕರು ಗಳ ಹುದ್ದೆಗಾಗಿ ರೂ. 10/ ಪಾವತಿ ಮಾಡಿ, ನಿಗದಿತ ಅರ್ಜಿ ಫಾರಂಗಳನ್ನು ನಿರ್ದೇಶಕರು, ಪ್ರಸಾರಾಂಗ ಮಾರಾಟ ಘಟಕ, ಅರಮನೆ ರಸ್ತೆ, ಬೆಂಗಳೂರು - 560 001 ಇವರಿಂದ ಪಡೆದುಕೊಳ್ಳಬಹುದು. ಈ ಮೊಬಲಗನ್ನು ಹಣಕಾಸು ಅಧಿಕಾರಿ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು ಇವರ ಕಚೇರಿಯಲ್ಲಿ ಪಾವತಿ ಮಾಡಬಹುದು ಅಥವಾ ಹೆಡ್ ಆಫ್ ಅಕೌಂಟ್ ''ಬೆಂಗಳೂರು ಯೂನಿವರ್ಸಿಟಿ ಫಂಡ್ಸ್ ಬ್ಲಾಕ್ ಗ್ರಾಂಟ್ಸ್'' ಇವರಿಗೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಇಲ್ಲಿ ಪಾವತಿ ಮಾಡಬಹುದು. ಅಥವಾ ರಿಜಿಸ್ಟ್ರಾರ್, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು ಇವರ ಪರವಾಗಿ ಪಡೆದ ಕ್ರಾಸ್ಡ್ ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಕಳುಹಿಸಬಹುದು. ಪೋಸ್ಟಲ್ ಆರ್ಡರ್‌ಗಳು, ಮನಿಯಾರ್ಡರ್‌ಗಳು ಮತ್ತು ಚೆಕ್‌ಗಳನ್ನು ಅಂಗೀಕರಿಸುವುದಿಲ್ಲ.

2. ಅಂಚೆ ಮೂಲಕ ಅರ್ಜಿಫಾರಂಗಳನ್ನು ಕಳುಹಿಸಬೇಕಾದಲ್ಲಿ, ರೂ. 15/-ರ ಮೌಲ್ಯದ ಅಂಚೆ ಚೀಟಿಯನ್ನು ಕ್ರಮವಾಗಿ ಅಂಟಿಸಿದ 6''X 12'' ಅಳತೆಯ ಸ್ವವಿಳಾಸ ಬರೆದ ಲಕೋಟೆಯೊಂದನ್ನು ಕಳುಹಿಸಬೇಕು. 3. ಅರ್ಜಿ ಶುಲ್ಕ ಪಾವತಿ ಮಾಡಿದ ಬಗ್ಗೆ ಪಡೆದ ರಸೀದಿ/ ಚಲನ್ ಸಲ್ಲಿಸಿದಲ್ಲಿ ಮಾತ್ರ, ಅರ್ಜಿ ಫಾರಂಗಳನ್ನು ನೀಡಲಾಗುವುದು/ಅಂಚೆ ಮೂಲಕ ಕಳುಹಿಸಲಾಗುವುದು.

3. **ಕ್ರಮವಾಗಿ ಭರ್ತಿ ಮಾಡಿದ ಅರ್ಜಿ ಫಾರಂಗಳನ್ನು ರಿಜಿಸ್ಟ್ರಾರ್, ಬೆಂಗಳೂರು**

### ಹಿಂದಿನಿಂದ ಉಳಿದುಕೊಂಡು ಬಂದಿರುವ ಖಾಲಿ ಹುದ್ದೆಗಳ ಅಡಿಯಲ್ಲಿ ನೇಮಕಾತಿಗಾಗಿ ಪ್ರಕಟಪಡಿಸಲಾದ, ವಿವಿಧ ಸ್ನಾತಕೋತ್ತರ ವಿಭಾಗಗಳಲ್ಲಿ ಖಾಲಿಯಿರುವ ಬೋಧನಾ ಹುದ್ದೆಗಳ ವಿವರಗಳು

| ಕ್ರಮ. ಸಂಖ್ಯೆ | ವಿಭಾಗ | ಉಪನ್ಯಾಸಕರು | ರೀಡರುಗಳು | ಪ್ರೊಫೆಸರ್‌ಗಳು | ವಿಶೇಷತೆ |
|---|---|---|---|---|---|
| 1. | ಮ್ಯಾನೇಜ್ಮೆಂಟ್ | 01-ಎಸ್‌ಟಿ | 02 | 01 | **ಪ್ರೊಫೆಸರ್** : ಫೈನಾನ್ಸ್/ಮಾರ್ಕೆಟಿಂಗ್/ಹ್ಯೂಮನ್ ರೀಸೋರ್ಸ್ ಮಾರ್ಕೆಟಿಂಗ್ ಅಥವಾ ಆರ್ಗನೈಜೇಷನ್ ಬಿಹೇವಿಯರ್ / ಪ್ರೊಡಕ್ಷನ್ / ಆಪರೇಷನ್.<br>**ರೀಡರ್** : - ಡಿಟೋ -<br>**ಉಪನ್ಯಾಸಕರು** : ಕ್ವಾಂಟಿಟೇಟಿವ್ ಟೆಕ್ನಿಕ್ / ಪ್ರೊಡಕ್ಷನ್ / ಫೈನಾನ್ಸ್/ ಮಾರ್ಕೆಟಿಂಗ್ / ಪರ್ಸೋನೆಲ್ ಸಿಸ್ಟಮ್/ ಬಿಸಿನೆಸ್/ಎಕ್ಸ್‌ಪರ್ಟ್ ಮ್ಯಾನೇಜ್ಮೆಂಟ್. |
| 2. | ರಸಾಯನಶಾಸ್ತ್ರ | 01-ಎಸ್‌ಸಿ | 01-ಎಸ್‌ಸಿ | 01-ಎಸ್‌ಸಿ | **ಪ್ರೊಫೆಸರ್** : ರಸಾಯನಶಾಸ್ತ್ರ<br>**ರೀಡರ್** : ಇನಾರ್ಗ್ಯಾನಿಕ್ ಕೆಮಿಸ್ಟ್ರಿ ಆದ್ಯನೀಯವಾಗಿ ಹೂಮೋಜೀನಿಯಸ್ ಕ್ಯಾಟಲಿಸಿಸ್/ ಸಾಲಿಡ್ ಸ್ಟೇಟ್‌ನಲ್ಲಿ ವಿಶೇಷತೆಯೊಂದಿಗೆ. |
| 3. | ಕಂಪ್ಯೂಟರ್ ಸೈನ್ಸ್ ಅಂಡ್ ಅಪ್ಲಿಕೇಷನ್ | 02-ಎಸ್‌ಸಿ | - | - | - - |
| 4. | ಎಂ.ಎಸ್ಸಿ. ಎಲೆಕ್ಟ್ರಾನಿಕ್ಸ್ | 01-ಎಸ್‌ಸಿ<br>01-ಎಸ್‌ಟಿ | 01 | - | - - |
| 5. | ಸಸ್ಯಶಾಸ್ತ್ರ | 01-ಎಸ್‌ಸಿ<br>(ಜೆ.ಬಿ ಕ್ಯಾಂಪಸ್‌ನಲ್ಲಿ)<br>01-ಎಸ್‌ಟಿ<br>(ಕೋಲಾರ) | - | - | - - |
| 6. | ಕಾನೂನು | 01-ಎಸ್‌ಟಿ | - | - | - - |
| 7. | ಪರ್‌ಫಾರ್ಮಿಂಗ್ ಆರ್ಟ್ಸ್ | 01-ಎಸ್‌ಸಿ<br>(ನಾಟಕ)<br>(ಪ್ರಸ್ತುತ ಖಾಲಿ ಹುದ್ದೆ) | 01 | -<br>- | -<br>ಉಪನ್ಯಾಸಕರು : ನಾಟಕ - |

ವಿಶ್ವವಿದ್ಯಾನಿಲಯ, ಜ್ಞಾನಭಾರತಿ ಕ್ಯಾಂಪಸ್, ಬೆಂಗಳೂರು - 560 056 ಇವರಿಗೆ ಸಲ್ಲಿಸಲು ಕಡೇ ದಿನಾಂಕ 14 ನೇ ಸೆಪ್ಟೆಂಬರ್ 1998.

4. **ಅರ್ಜಿ ಶುಲ್ಕಗಳು :** ಉಪನ್ಯಾಸಕರ ಹುದ್ದೆಗೆ ರೂ. 75/- (ಎಸ್/ಎಸ್‌ಟಿ ಅಭ್ಯರ್ಥಿಗಳಿಗೆ ರೂ. 40/-) ಮತ್ತು ರೀಡರುಗಳು/ ಪ್ರೊಫೆಸರ್‌ಗಳ ಹುದ್ದೆಗೆ ರೂ. 100/- (ಎಸ್‌ಸಿ/ಎಸ್‌ಟಿ ಅಭ್ಯರ್ಥಿಗಳಿಗೆ ರೂ. 50) ಪಾವತಿ ಮಾಡಬೇಕು. ಅರ್ಜಿ ಶುಲ್ಕಗಳನ್ನು ಪಾವತಿ ಮಾಡಿದ ಬಗ್ಗೆ, ರಿಜಿಸ್ಟ್ರಾರ್, ಬೆಂಗಳೂರು ವಿಶ್ವವಿದ್ಯಾನಿಲಯ ಬೆಂಗಳೂರು ಇವರ ಪರವಾಗಿ ಪಡೆದ ಡಿಮ್ಯಾಂಡ್ ಡ್ರಾಫ್ಟ್ ಅನ್ನು ಅರ್ಜಿ ಫಾರಂನ ಮೊದಲ ಪ್ರತಿಗೆ ಲಗತ್ತಿಸಿ ಸಲ್ಲಿಸಬೇಕು. ಈ ಮೊಬಲಗನ್ನು ಹೆಡ್ ಆಫ್ ಅಕೌಂಟ್ **"ಬೆಂಗಳೂರು ಯೂನಿವರ್ಸಿಟಿ ಫಂಡ್ಸ್ - ಬ್ಲಾಕ್ ಗ್ರಾಂಟ್ಸ್"** ಇವರಿಗೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಇಲ್ಲಿಯೂ ಪಾವತಿ ಮಾಡಬಹುದು.

5. ಎಲ್ಲಾ ಏಳು (7) ಸೆಟ್‌ಗಳೊಂದಿಗೆ ಪ್ರಕಟಿತ ಕೃತಿಗಳ ಪ್ರತಿಗಳು ಮತ್ತು ಅರ್ಹತಾ ಪತ್ರಗಳು/ ಸರ್ಟಿಫಿಕೇಟ್‌ಗಳು/ ಜಾತಿ ಪ್ರಮಾಣ ಪತ್ರಗಳು/ ಅಂಕಪಟ್ಟಿಗಳ ಯಥಾ ಪ್ರತಿಗಳನ್ನು ಲಗತ್ತಿಸಿ ಸಲ್ಲಿಸಬೇಕು ಮತ್ತು ಇವುಗಳನ್ನು ಹಿಂದಿರುಗಿಸುವುದಿಲ್ಲ.

6. ಉದ್ಯೋಗದಲ್ಲಿರುವವರು ಅವರ ಅರ್ಜಿಯನ್ನು ಅವರ ಉದ್ಯೋಗದಾತರ ಮೂಲಕ ನಿಗದಿಪಡಿಸಿದ ಕಡೇ ದಿನಾಂಕದಂದು ಅಥವಾ ಅದಕ್ಕೂ ಮುನ್ನ ಕಳುಹಿಸಬೇಕು.

7. 21 ವರ್ಷಕ್ಕಿಂತ ಕೆಳಗಿನ ಹಾಗೂ 60 ವರ್ಷಗಳಿಗೂ ಮೇಲ್ಪಟ್ಟ ವಯಸ್ಸಿನ ವ್ಯಕ್ತಿಗಳು ಅರ್ಜಿ ಸಲ್ಲಿಸುವಂತಿಲ್ಲ.

8. ಪ್ರತಿ ಹುದ್ದೆಗೆ ಪ್ರತ್ಯೇಕ ಅರ್ಜಿಗಳನ್ನು ಕಳುಹಿಸಬೇಕು.

9. ಆಯ್ಕೆಯಾದ ಅಭ್ಯರ್ಥಿಗಳು ಬೆಂಗಳೂರು ವಿಶ್ವವಿದ್ಯಾನಿಲಯದ ವ್ಯಾಪ್ತಿಯೊಳಗೆ ಯಾವುದೇ ಸ್ಥಳದಲ್ಲಿ ಕೆಲಸ ಮಾಡಲು ಸಿದ್ಧರಿರಬೇಕು.

10. ಆಯ್ಕೆಯಾದ ಅಭ್ಯರ್ಥಿಗಳನ್ನು ಸಾಮಾನ್ಯವಾಗಿ ಎರಡು ವರ್ಷಗಳ ಅವಧಿಗೆ ಪ್ರೊಬೇಷನ್ ಮೇಲೆ ನೇಮಕಮಾಡಲಾಗುವುದು. ವಿಶ್ವವಿದ್ಯಾನಿಲಯವು ಇಚ್ಛಿಸಿದಲ್ಲಿ ಪ್ರೊಬೇಷನ್ ಅವಧಿಯನ್ನು ಕಡಿಮೆ ಮಾಡಬಹುದು ಅಥವಾ ವಿಸ್ತರಿಸಬಹುದಾಗಿದೆ. ■

## ರಾಷ್ಟ್ರೀಯ ಮಕ್ಕಳ ಸಾಹಿತ್ಯ ಬಹುಮಾನ ಸ್ಪರ್ಧೆ

ರಾಷ್ಟ್ರೀಯ ಶೈಕ್ಷಣಿಕ ಸಂಶೋಧನಾ ಮತ್ತು ತರಬೇತಿ ಮಂಡಳಿ (ಎನ್‌ಸಿಇಆರ್‌ಟಿ) ಇವರು, XXX ರಾಷ್ಟ್ರೀಯ ಮಕ್ಕಳ ಸಾಹಿತ್ಯ ಬಹುಮಾನ ಸ್ಪರ್ಧೆಗಾಗಿ ವಯೋಮಾನ 5-8 ಮತ್ತು 9-15 ವರ್ಷದ ಮಕ್ಕಳಿಗೆ ಸೂಕ್ತವಾದ ಪುಸ್ತಕಗಳು/ಹಸ್ತಪ್ರತಿಗಳನ್ನು ಆಹ್ವಾನಿಸಿದ್ದಾರೆ. ಅರವತ್ತು ಬಹುಮಾನಗಳನ್ನು ನೀಡಲಾಗುವುದು. ವಯೋಮಾನ 9-15ಕ್ಕೆ ಇಪ್ಪತ್ತು ಪುಸ್ತಕಗಳು/ ಹಸ್ತ ಪ್ರತಿಗಳ ಲೇಖಕರಿಗೆ ಇಪ್ಪತ್ತು ಬಹುಮಾನಗಳು: ಹಿಂದಿಯಲ್ಲಿ ಎರಡು ಪುಸ್ತಕಗಳು/ ಹಸ್ತಪ್ರತಿಗಳಿಗೆ ಮತ್ತು ಅಸ್ಸಾಮೀಸ್, ಬಂಗಾಳಿ, ಇಂಗ್ಲೀಷ್, ಗುಜರಾತಿ, ಕನ್ನಡ, ಕಾಶ್ಮೀರಿ, ಕೊಂಕಣಿ, ಮಲಯಾಳಂ, ಮಣಿಪುರಿ, ಮರಾಠಿ, ನೇಪಾಳಿ, ಒರಿಯಾ, ಪಂಜಾಬಿ, ಸಂಸ್ಕೃತ, ಸಿಂಧಿ, ತಮಿಳು, ತೆಲುಗು ಮತ್ತು ಉರ್ದುವಿನಲ್ಲಿ ತಲಾ ಒಂದು.

### ಬಹುಮಾನದ ಮೊತ್ತ ರೂ. 10,000/-

5-8 ವಯೋಮಾನದವರಿಗೆ ಇಪ್ಪತ್ತು ಪುಸ್ತಕಗಳು/ ಹಸ್ತಪ್ರತಿಗಳ ಲೇಖಕರು ಮತ್ತು ಇಲಸ್ಟ್ರೇಟರ್‌ಗಳಿಗೆ ನಲವತ್ತು ಬಹುಮಾನಗಳು : ಹಿಂದಿಯಲ್ಲಿ ಎರಡು ಮತ್ತು ಅಸ್ಸಾಮೀಸ್, ಬಂಗಾಳಿ, ಇಂಗ್ಲೀಷ್, ಗುಜರಾತಿ, ಕನ್ನಡ, ಕಾಶ್ಮೀರಿ, ಕೊಂಕಣಿ, ಮಲಯಾಳಂ, ಮಣಿಪುರಿ, ಮರಾಠಿ, ನೇಪಾಳಿ, ಒರಿಯಾ, ಪಂಜಾಬಿ, ಸಂಸ್ಕೃತ, ಸಿಂಧಿ, ತಮಿಳು, ತೆಲುಗು ಮತ್ತು ಉರ್ದುವಿನಲ್ಲಿ ತಲಾ ಒಂದು.

ಪ್ರತಿ ಪುಸ್ತಕ/ ಹಸ್ತಪ್ರತಿಗೆ ಪ್ರಶಸ್ತಿ ಮೊತ್ತ ರೂ. 10,000/- ಇದರಲ್ಲಿ ರೂ. 5000/- ಅನ್ನು ಲೇಖಕರಿಗೂ ಮತ್ತು ರೂ. 5000/- ಅನ್ನು ಇಲಸ್ಟ್ರೇಟರ್‌ರವರಿಗೂ ನೀಡಲಾಗುವುದು.

### ಪ್ರವೇಶಗಳ ಅರ್ಹತೆ :

(ಎ) ಎರಡು ಕ್ಯಾಲೆಂಡರ್ ವರ್ಷಗಳು 1995 ಮತ್ತು 1996ರ ಅವಧಿಯಲ್ಲಿ ಪ್ರಕಟವಾದ ಪುಸ್ತಕಗಳು ಅರ್ಹವಾಗಿವೆ. ಪ್ರಕಟವಾದ ಪುಸ್ತಕಗಳು ಮಕ್ಕಳಿಗೆ ಸೂಕ್ತವಾದ ಯಾವುದೇ ವಿಷಯದ ಮೇಲಿರಬಹುದು. (ಬಿ) ಪ್ರಕಟವಾಗದ ಹಸ್ತಪ್ರತಿಗಳು. ಪ್ರಮುಖವಾಗಿ ಟೈಪ್ ರೂಪದಲ್ಲಿದ್ದಲ್ಲಿ ಸಹ ಅರ್ಹವಾಗುತ್ತವೆ. ಆದಾಗ್ಯೂ ಈ ಹಸ್ತಪ್ರತಿಗಳು "ಎಲ್ಲರಿಗೂ ಎಲ್ಲಾ ಮಾನವ ಹಕ್ಕುಗಳು" ಇದಕ್ಕೆ ಸಂಬಂಧಪಟ್ಟ ವಿಷಯದ ಮೇಲಿರಬೇಕು. (ಸಿ) 5-8ರ ವಯೋಮಾನದವರಿಗಾಗಿ ಬರೆದ ಹಸ್ತಪ್ರತಿಗಳೊಂದಿಗೆ ಇಲಸ್ಟ್ರೇಷನ್‌ಗಳು/ ಆರ್ಟ್‌ವರ್ಕ್ ಲಗತ್ತಿಸಿರಬೇಕು. (ಡಿ) ಪಠ್ಯಪುಸ್ತಕಗಳು, ಇತರೆ ಪುಸ್ತಕಗಳ ಅನುವಾದ ಅಥವಾ ಪ್ರತಿರೂಪದ ಪುಸ್ತಕಗಳನ್ನು ಪರಿಗಣಿಸುವುದಿಲ್ಲ. (ಇ) ಮಕ್ಕಳ ಸಾಹಿತ್ಯ ಬಹುಮಾನಗಳ ಸ್ಪರ್ಧೆಗೆ ಈ ಹಿಂದೆ ಸಲ್ಲಿಸಲಾದ ಪ್ರವೇಶಗಳನ್ನು ಅಥವಾ ರಾಜ್ಯ ಸರಕಾರ ಅಥವಾ ಭಾರತ ಸರಕಾರದ ಯಾವುದೇ ಏಜೆನ್ಸಿ ಅಥವಾ ಸಂಸ್ಥೆ ಮೂಲಕ ವ್ಯವಸ್ಥೆಗೊಳಿಸಲ್ಪಟ್ಟ ಯಾವುದೇ ಸ್ಪರ್ಧೆಯಲ್ಲಿ ಬಹುಮಾನ ಪಡೆದಂತಹ ಪುಸ್ತಕ ಈ ಸ್ಪರ್ಧೆಗೆ ಅರ್ಹವಾಗಿರುವುದಿಲ್ಲ.

### ಪ್ರವೇಶ ಶುಲ್ಕ :

ಪ್ರತಿ ಪ್ರವೇಶದೊಂದಿಗೆ (ಪುಸ್ತಕ/ಹಸ್ತಪ್ರತಿ) ಕಾರ್ಯದರ್ಶಿ, ಎನ್‌ಸಿಇಆರ್‌ಟಿ, ನವದೆಹಲಿ-110 016 ಇವರ ಪರವಾಗಿ ಪಡೆದ ಪೋಸ್ಟಲ್ ಆರ್ಡರ್‌ವೊಂದರ ರೂಪದಲ್ಲಿ ರೂ. 20/-ರ (ಇಪ್ಪತ್ತು ರೂಪಾಯಿಗಳು ಮಾತ್ರ) ಪ್ರವೇಶ ಶುಲ್ಕ ಲಗತ್ತಿಸಿರಬೇಕು.

### ಕೊನೆಯ ದಿನಾಂಕ : 30 ಅಕ್ಟೋಬರ್ 1998

ಸ್ಪರ್ಧೆಯ ಬಗ್ಗೆ ಹೆಚ್ಚಿನ ವಿವರಗಳು ಮತ್ತು ನಿಯಮಗಳನ್ನು ಕೆಳಕಂಡ ವಿಳಾಸದಿಂದ ಪಡೆದುಕೊಳ್ಳಬಹುದು.

**ಪ್ರೊಫೆಸರ್ ಅರ್ಜುನ್‌ದೇವ್, ಹೆಡ್, ಡಿಪಾರ್ಟ್‌ಮೆಂಟ್ ಆಫ್ ಎಜುಕೇಷನ್ ಇನ್ ಸೋಷಿಯಲ್ ಸೈನ್ಸಸ್ ಅಂಡ್ ಹ್ಯೂಮ್ಯಾನಿಟೀಸ್, ನ್ಯಾಷನಲ್ ಕೌನ್ಸಿಲ್ ಆಫ್ ಎಜುಕೇಷನಲ್ ರೀಸರ್ಚ್ ಅಂಡ್ ಟ್ರೈನಿಂಗ್ (ಎನ್‌ಸಿಇಆರ್‌ಟಿ), ಶ್ರೀ ಅರಬಿಂದೊ ಮಾರ್ಗ್, ನವದೆಹಲಿ - 110 016.**

**ಇನ್‌ಚಾರ್ಜ್, ರೀಜನಲ್ ಸೆಂಟರ್ ಫಾರ್ ಇನ್‌ಸರ್ವೀಸ್ ಟ್ರೈನಿಂಗ್ ಅಂಡ್ ಎಕ್ಸ್‌ಟೆನ್‌ಷನ್, ಎನ್‌ಸಿಇಆರ್‌ಟಿ ನಂ. 108, 100 ಅಡಿ ರಸ್ತೆ, ಹೊಸಕೆರೆಹಳ್ಳಿ ಎಕ್ಸ್‌ಟೆನ್‌ಷನ್, ಬನಶಂಕರಿ 3ನೇ ಹಂತ, ಬೆಂಗಳೂರು - 560 085.**

# ನೀವೂ ಇಂಗ್ಲಿಷ್ ಕಲಿಯಿರಿ | ಭಾಗ-8

## ಸಾಮಾನ್ಯರೂ ಸುಲಭವಾಗಿ ಇಂಗ್ಲಿಷ್ ಕಲಿಯಬಹುದಾದ ಸರಳ ಮಾರ್ಗ ಇಲ್ಲಿದೆ

(ಹಿಂದಿನ ಸಂಚಿಕೆಯಿಂದ)

**ಈಗ ವಿಶೇಷಣಗಳ ತರ-ತಮ ಭಾವನೆಗಳನ್ನು ಕುರಿತು ಅಧ್ಯಯನ (COMPARISON OF ADJECTIVE)**

ಜಾನ್ : ಜಾನಕಿ, ನಾವು ಎಲ್ಲಿಯವರೆಗೆ ಕಲಿತಿದ್ದೇವೆ? ಈಗ ಯಾವ ವಿಷಯ?

ಜಾನಕಿ : ಏನೋ, ನೀನು ನನಗಿಂತಲೂ ಹೆಚ್ಚು ನೆನಪಿನ ಶಕ್ತಿಯುಳ್ಳವ...

ಜಾನ್ : ಅಂದರ, ನನಗಿಂತ ನಿನ್ನ ನೆನಪಿನ ಶಕ್ತಿ ಕಡಿಮೆ, ಹೌದ?

ಜಾನಕಿ : ಹೌದಪ್ಪ, ಹೌದು. ಪಾಠ ಸುರು ಮಾಡ್ತಿಯಾ?

ಜಾನ್ : ಈಗ ಏನು ಮಾಡಿದೆವು ಅಂತ ತಿಳದಿ? ನನ್ನ ನೆನಪಿನ ಶಕ್ತಿ ಹೆಚ್ಚು ಅಂದರ My memory is stronger than your memory ಇಲ್ಲಿ stronger ಈ ಶಬ್ದ -ತರ ಭಾವಗಳನ್ನ ವ್ಯಕ್ತ ಪಡಿಸುವುದು. ಇದು Comparative Degree.

ಜಾನಕಿ : ಮೂಲ ಎಲ್ಲಿ ಇದೆ?

ಜಾನ್ : Strong ಇದು ಮೂಲ. ಅಂದರ Positive Degree ಉದಾ. Big, Long, Tall, Sweet, Much, Many. etc., ಅಂತೂ ಒಟ್ಟು ಮೂರು ಡಿಗ್ರಿ. ನಾನು ಹೇಳುವೆ, ನೀನು ಬರೆದುಕೊ..

| Positive Degree (ಮೂಲ ರೂಪ) | Comparative Degree (-ತರ) | Superlative Degree (-ತಮ) |
|---|---|---|
| Big | Bigger | Biggest |
| Long | Longer | Longest |
| Much | More | Most |
| Many | More | Most |

ಜಾನಕಿ : ಈಗ ತಿಳಿತು. -er, -est ಪ್ರತ್ಯಯ ಹಚ್ಚಿದರ ಆಯಿತಲ್ಲ.

ಜಾನ್ : ಸರಿಯಾಗಿ ತಿಳಿದುಕೊ.

**Positive Degree** - ಅಂದರೆ ವಿಶೇಷಣದ ಮೂಲರೂಪ

**Comparative Degree** - ಅಂದರೆ ಮೇಲಿನದಕ್ಕಿಂತ ಹೆಚ್ಚಿನದು ಅಂತ.

**Superlative Degree-** ಅಂದರೆ ಮೇಲಿನ (ಗುಣ) ಕ್ಕಿಂತ ಶ್ರೇಷ್ಠ

ಜಾನಕಿ : ನೀನು ಹೇಳಿದ ಹಾಗೆ Your memory is stronger than mine. ಹೌದಲ್ಲೊ. ನಾನು ಹೇಳ್ತೇನೆ, My memory is weaker, ಸರಿಯಾ...?

ಜಾನ್ : ಸರಿ. ಆದರೆ ನಾನು ಹೇಳಿದ್ದಕ್ಕೆ ಅದು ಸಮ ಆಗಲಿಲ್ಲ. ಸಮ ಅರ್ಥ ಬರಬೇಕಾದರೆ ಏನು ಮಾಡಬೇಕು ಅಂದ್ರೆ, The memory of Janaki is not as strong as John's. ಅಂದರೆ ನನ್ನಷ್ಟು ಇಲ್ಲ. ಆದರೆ ನಿನ್ನ ನೆನಪಿನ ಶಕ್ತಿ ದುರ್ಬಲವಿಲ್ಲ. ನೀ ಹೇಳಿದ ಪ್ರಕಾರ weaker-ದುರ್ಬಲ ಅಂತ ಆಗುವುದು.

ಜಾನಕಿ : Very good, Degreeಗಳ (ವಿಶೇಷಣ ರೂಪ) ಬದಲಾವಣೆಗೆ ನಿಯಮ ಹೇಳಿದರೆ easy ಆಗುವುದಲ್ಲ!

ಜಾನ್ : ಸರಿ, ಕೇಳಿಲ್ಲಿ, ಒಟ್ಟು ಆರು ನಿಯಮಗಳಿವೆ.

**ನಿಯಮ I**

ಮೂಲ ವಿಶೇಷಣ (ಪದ)ದ ಅಂತ್ಯದಲ್ಲಿ -e ಮಾತ್ರ ಇದ್ದರೆ ಅಲ್ಲಿ -r ಅಥವಾ -st ಪ್ರತ್ಯಯ ಹಚ್ಚುವುದರಿಂದ Comparison Degree ಹಾಗು Superlative Degree ಆಗುವುದು.

| | | |
|---|---|---|
| ಉದಾ: White | Whiter | Whitest |
| Fine | Finer | Finest |
| Wise | Wiser | Wisest |
| Large | Larger | Largest |

ನೀನು ಒಂದೆರಡು ಉದಾಹರಣೆ ಹೇಳು.

ಜಾನಕಿ :

| | | |
|---|---|---|
| Brave | Braver | Bravest |
| Noble | Nobler | Noblest |

ಜಾನ್ : Very good. ಈ ರೀತಿ ಕಲಿತರೆ, ನನಗೂ ಕಲಿಸಲಿಕ್ಕೆ easy.

ಜಾನಕಿ : ಯಾಕೊ? Easier ಅನ್ನಲ್ಲ?

ಜಾನ್ : Correct. ಈಗ ಏನು ಮಾಡಿದಿ ಅಂದರೆ ಇಲ್ಲಿ -ier ಪ್ರತ್ಯಯ ಹಚ್ಚಿದಿ.

**ನಿಯಮ II**

ಮೂಲ ಪದ (Positive Degree)ದ ಕೊನೆ -y ಇದ್ದು ಅದರ ಹಿಂದೆ ವ್ಯಂಜನ (Consonant) ಇದ್ದರ -y ಲೋಪವಾಗಿ ಅಲ್ಲಿ -ier ಅಥವಾ -iest ಪ್ರತ್ಯಯ ಜೋಡಿಸಬೇಕು.

| | | |
|---|---|---|
| ಉದಾ.: Easy | Easier | Easiest |
| Happy | Happier | Happiest |

ಜಾನಕಿ, ನೀನು ಉದಾಹರಣೆ ಹೇಳು

ಜಾನಕಿ :

| | | |
|---|---|---|
| Wealthy | Wealthier | Wealthiest |
| Heavy | Heavier | Heaviest |

ಇದು ಸರಿ ಆಯ್ತು - y ದ ಹಿಂದೆ ಸ್ವರ ಇದ್ದರೆ .....

ಜಾನ್ : Do not run faster, ಈಗ ಕೇಳು.

**ನಿಯಮ III**

ಮೂಲ ಪದದ ಕೊನೆಗೆ -y ಇದ್ದು ಅದರ ಹಿಂದೆ ಸ್ವರ (Vowel) ಇದ್ದರೆ ಕೇವಲ -er, -est ಪ್ರತ್ಯಯ ಹಚ್ಚಿದರೆ ಸಾಕು.

| | | |
|---|---|---|
| ಉದಾ: Gay | Gayer | Gayest |

ಜಾನಕಿ : ನೀನು ಮುಂದಿನ ನಿಯಮ ಹೇಳು. ಕೊನೆಗೆ ವ್ಯಂಜನ ಇದ್ದರೆ...

ಜಾನ್ : ತಡೆ, ತಡೆ. ಅದನ್ನೇ ನಾನು ಹೇಳ್ತಾ ಇರೋದು.

**ನಿಯಮ IV**

ಮೂಲ ಶಬ್ದದ ಕೊನೆಗೆ ವ್ಯಂಜನ ಇದ್ದು ಹಿಂದೆ ಸ್ವರ ಇದ್ದರೆ ಅಲ್ಲಿ ಇದ್ದ ವ್ಯಂಜನ (ಒಂದನ್ನು) ವನ್ನು ಎರಡು (Double) ಮಾಡಿ -er, -est, ಪ್ರತ್ಯಯ ಜೋಡಿಸಬೇಕು. ಉದಾ.

ಉದಾ: Big — Bigger — Biggest

Red — Redder — Reddest

ಈಗ ನೀನೊಂದು ಹೇಳು.

ಜಾನಕಿ : John is the hottest boy.

ಜಾನ್ : ಸಾಕು ಮಾರಾಯಳೇ, ನೀನೇನು ಶಾಂತ ಇದ್ದಿಯಾ! ನೀನು Fattest ತಿಳಿತ?

Fat — Fatter — Fattest

ಜಾನಕಿ : ನೀನು ತೆಳ್ಳಗಿದ್ದರೆ ನನಗೆ ಚೇಷ್ಟೆ ಮಾಡು! ಇರಲಿ ನಾನೇನು ಕಡಿಮೆ ಅಂತ ತಿಳಿಬೇಡ.

ಜಾನ್ :

**ನಿಯಮ V**

ಮೂಲಶಬ್ದ ಒಂದೇ ಇರದೆ, ಒಂದಕ್ಕಿಂತ ಹೆಚ್ಚು ಶಬ್ದವ್ಯಯಗಳಿದ್ದರೆ (Syllable) ಆಗ More -Most ಇವುಗಳನ್ನು ಆ ಪದದ ಹಿಂದೆ ಉಪಯೋಗಿಸಬೇಕು. ಉದಾ.

Beautiful — More Beautiful — Most Beautiful

Useful — More Useful — Most Useful

ಇದು ಸುಲಭ ಅಲ್ಲವೆ? ನೀನು ಹೇಳು.

ಜಾನಕಿ : Handsome — More Handsome — Most Handsome

Agreeable — More Agreeable — Most Agreeable

ಜಾನ್ : ನಾನು Handsome ಅಂತ ಒಪ್ಪಿದೆಯಲ್ಲಾ?

ಜಾನಕಿ : ಏನೋ, ಉದಾಹರಣೆ ಹೇಳಿದರೆ, ಇನ್ನೇನೋ ಅರ್ಥ ಹಚ್ಚಬೇಡ.

ಜಾನ್ : ಇರಲಿ ಬಿಡು ಮಾರಾಯಿತ್ತಿ. ಇನ್ನೊಂದು ನಿಯಮ ಕೇಳು.

**ನಿಯಮ VI**

ಕೆಲವು ಶಬ್ದಗಳು ಅನಿಯಮಿತವಾಗಿದ್ದು ಅವುಗಳ ರೂಪವೇ ಬದಲಿ ಆಗುತ್ತದೆ. ಇವೆಲ್ಲ ರೂಢಿಯಿಂದ ಕಲಿಯಬೇಕಷ್ಟೆ?

ಜಾನಕಿ : ಯಾವಾಗಲೂ ಹೀಗೆ ಅಪವಾದ ಇರೊದೇನು?

ಜಾನ್ : Every rule has exception. ಉದಾಹರಣೆ ಕೇಳು.

| | | |
|---|---|---|
| Good | Better | Best |
| Old | Older | Oldest |
| | Elder | Eldest |

ಸಮೀಪದ ರಕ್ತ ಸಂಬಂಧವಿದ್ದಲ್ಲಿ, Elder, Eldest ಪದಗಳನ್ನು, ಸಂಬಂಧವಿಲ್ಲದಲ್ಲಿ Older Oldest ಪದಗಳನ್ನು ಉಪಯೋಗಿಸುವರು.

| | | |
|---|---|---|
| Much | More | Most |
| (ಗಾತ್ರ ಪ್ರಮಾಣ ಸೂಚಕ) | | |
| Many | More | Most |
| (ಸಂಖ್ಯಾ ಬಾಚಕ) | | |
| Bad | Worse | Worst |

ಜಾನಕಿ : ನಾನು ಉಪಯೋಗಿಸಿ ಹೇಳ್ತೀನೆ.

John is my elder Brother.

Laxmi is older.

ಜಾನ್ : ಸರಿ. ಇವುಗಳನ್ನು ವಾಕ್ಯದಲ್ಲಿ ಉಪಯೋಗಿಸುವುದನ್ನು ಮುಂದೆ ಕಲಿಯೋಣ. ಈಗ ಪ್ರಶ್ನೆಗೆ ಉತ್ತರ ಹೇಳ್ತಿಯಾ?

## ಕೊನೆಯ ಹನಿ

ಜಾನ್ : Little, Late, Courageous Merry, Noble ಇವುಗಳ Comparative Degree, Superlative Degree ರೂಪ ಹೇಳು.

ಜಾನಕಿ :

| | | |
|---|---|---|
| Little | Less | Least |
| Late | Latter | Lattest |
| Courageous | More Courageous | Most Courageous |
| Noble | Nobler | Noblest |

Merry ನೀನೆ ಹೇಳು

ಜಾನ್ : Merry — Merrier — Merriest

## ಶಬ್ದ ಸಂಪತ್ತು

**ಪ್ರತಿ ಶಬ್ದಕ್ಕೆ 3 ಅರ್ಥಕೊಟ್ಟದ್ದು, ಶಬ್ದದ ವಿರುದ್ಧಪದ ಹುಡುಕಿ, ನಂತರ ಉತ್ತರ ನೋಡಿ.**

| | | | |
|---|---|---|---|
| a. Abundant | - ಅ.ಬಹಳಷ್ಟು | ಬ.ಸಾಕಾಗುವಷ್ಟು | ಕ.ಕಡಿಮೆ |
| b. Advance | - ಅ.ಹಿಂದೆಸರಿ | ಬ.ಮುನ್ನಡೆ | ಕ.ಸುಧಾರಿಸು |
| c. Bare | - ಅ.ದಿಗಂಬರ | ಬ.ಮುಚ್ಚಿದ | ಕ.ಬಚ್ಚಿಟ್ಟ |
| d. Contempt | - ಅ.ಅಗೌರವ | ಬ.ಗೌರವ | ಕ.ತಿರಸ್ಕಾರ |
| e. Discover | - ಅ.ಶೋಧಿಸು | ಬ.ಬಹಿರಂಗ ಪಡಿಸು | ಕ.ಬಚ್ಚಿಡು |

**ಉತ್ತರಗಳು:**

a. ಕ b. ಅ c. ಬ d. ಬ e. ಕ

## ವಿನೂತನ ಶಿಕ್ಷಣ

ಸಮಾಜ ಪರಿವರ್ತನೆಯಲ್ಲಿ ತೊಡಗಿರುವ ಹಿಂದು ಸೇವಾ ಪ್ರತಿಷ್ಠಾನ ಒಂದು ವಿನೂತನ ಅಂಚೆ ತೆರಪಿನ ಶಿಕ್ಷಣವನ್ನು ಆರಂಭಿಸಿದೆ.

ಭಾರತದಲ್ಲಿ ಹುಟ್ಟಿರುವ ಎಲ್ಲ ಪ್ರಮುಖ ಮತ, ದರ್ಶನ, ತತ್ವ, ಸಂಸ್ಕೃತಿ ನೀತಿ ನಿಯಮಗಳು, ಜೀವನ ಸಿದ್ಧಾಂತಗಳು ಯೋಗ ವಾನದ ವಿವಿಧ ಪ್ರಕಾರಗಳು ಜೀವದ ಮೌಲ್ಯಗಳು, ಇತಿಹಾಸದ ಸಾಧನೆಗಳು ಮುಂತಾದ ಸಮಸ್ತ ಹಿಂದುತ್ವದ ಪರಿಚಯ ನೀಡುವ ಶಿಕ್ಷಣ ಯೋಜನೆ. ವಿವರಗಳಿಗೆ ರೂ. ೧/-ರ ಅಂಚೆ ಚೀಟಿ ಸಹಿತ ಸ್ವವಿಳಾಸ ಲಕೋಟೆಯೊಂದಿಗೆ ಬರೆಯಿರಿ-

**ಸಂಯೋಜಕರು**

ಹಿಂದು ಜೀವನ ದೀಪಿಕಾ, 8/28, ಬುಲ್ ಟೆಂಪಲ್ ರಸ್ತೆ, ಬೆಂಗಳೂರು - 560 004.

# ಸ್ಪರ್ಧಾತ್ಮಕ ಪರೀಕ್ಷೆಗೆ ಸಿದ್ಧರಾಗಿ

## ಸಾಮಾನ್ಯ ಜ್ಞಾನ

1. ರಿಜರ್ವ್ ಬ್ಯಾಂಕ್ ಆಫ್ ಇಂಡಿಯಾ ಜಾರಿಗೆ ಬಂದ ವರ್ಷ ಯಾವುದು?
2. ದ್ವೀಪ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು ಯಾರು?
3. ಇತ್ತೀಚಿಗೆ ಬಾಹ್ಯಾಕಾಶಕ್ಕೆ ಹೋಗಿ ಬಂದ ಭಾರತದ ಸ್ತ್ರೀ ಯಾರು ?
4. ಬಿಲ್ ಕ್ಲಿಂಟನ್ ಯಾವ ಪಕ್ಷಕ್ಕೆ ಸೇರಿದವರು?
5. ಬ್ರಿಟನ್ನಿನ ಬುಕರ್ ಪ್ರಶಸ್ತಿ ಪಡೆದ ಭಾರತದ ಅರುಂಧತಿರಾಯ್ ಎಷ್ಟನೆಯವರು?
6. Mystory ಎಂಬ ಪುಸ್ತಕ ಬರೆದ ಕ್ರೀಡಾಪಟು ಯಾರು?
7. ಅರ್ಜಂಟೈನಾದ ಮುಖ್ಯ ಕಸುಬು ಯಾವುದು?
8. ಭಾರತದ ಪ್ರಥಮ ಪ್ರಜೆಯೆಂದು ಯಾರನ್ನು ಕರೆಯಲಾಗಿದೆ?
9. ಕಾನೂನು ಆಯೋಗವನ್ನು ಎಂದು ಆರಂಭಿಸಲಾಯ್ತು?
10. ಮಹಮದ್ ಪೈಗಂಬರರು ಇಸ್ಲಾಂ ಧರ್ಮವನ್ನು ಎಷ್ಟನೇ ಶತಮಾನದಲ್ಲಿ ಪ್ರಾರಂಭಿಸಿದರು?
11. ಬೇಲೂರಿನ ಹೊಯ್ಸಳೇಶ್ವರ ದೇವಸ್ಥಾನದ ನಿರ್ಮಾಪಕರು ಯಾರು?
12. ಹುಮಾಯೂನ್ ಎಂದರೆ ಯಾವ ಅರ್ಥ ಕೊಡುತ್ತದೆ?
13. ಪ್ರಸಿದ್ಧ ತಾಳಿಕೋಟೆ ಯುದ್ಧ ನಡೆದದ್ದು ಎಂದು?
14. ಭಾರತದಲ್ಲಿ ಅತೀ ಉದ್ದವಾಗಿ ಹರಿಯುವ ನದಿ ಯಾವುದು?
15. ಪಾಕಿಸ್ತಾನದ ರಾಜಧಾನಿ ಯಾವುದು?
16. ನಾಗಾಲ್ಯಾಂಡ್ ರಾಜ್ಯದ ರಾಜಧಾನಿ ಯಾವುದು?
17. ಸದ್ಯದ ತಮಿಳುನಾಡು ರಾಜ್ಯದ ರಾಜ್ಯಪಾಲರಾರು?
18. 'ಜೈಜವಾನ್-ಜೈಕಿಸಾನ್' ಎಂದ್ಹೇಳಿದವರು ಯಾರು?
19. ಅತೀ ಹೆಚ್ಚು ಸಮೃದ್ಧವಾದ ಮಣ್ಣು ಯಾವುದು?
20. ಸತೀಶ್ ಗುಜ್ರಾಲ್ ಯಾರು?
21. ಯಾವ ರಾಜ್ಯ ಅತ್ಯಂತ ಹೆಚ್ಚು ಅರಣ್ಯಪ್ರದೇಶ ಹೊಂದಿದೆ.
22. ಇತ್ತೀಚಿಗೆ ನಿಧನ ಹೊಂದಿದ ಮಾಜಿ ಹಂಗಾಮಿ ಪ್ರಧಾನಿ (ಭಾರತರತ್ನ ಪ್ರಶಸ್ತಿ ವಿಜೇತ) ಯಾರು?
23. 'ಹಸಿರು ಕ್ರಾಂತಿ' ಎಂದರೇನು?
24. ಇತ್ತೀಚಿಗೆ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ ಪಡೆದ ಡಾ. ಚಿದಾನಂದಮೂರ್ತಿಯವರ ಕೃತಿ ಯಾವುದು?
25. ಬಪ್ಪಿಲಹರಿ ಯಾವುದಕ್ಕೆ ಹೆಸರಾಗಿದ್ದಾರೆ?
26. ಇತ್ತೀಚಿಗೆ ಸಂಗೀತ ವಿದೂಷಕಿಯೊಬ್ಬರಿಗೆ ಭಾರತರತ್ನ ಪ್ರಶಸ್ತಿ ನೀಡಲಾಗಿದೆ, ಅವರ್‍ಯಾರು?
27. ಕನ್ನಡದಲ್ಲಿ ಅವರ್ಗೀಯ ವ್ಯಂಜನಗಳು ಎಷ್ಟು?
28. ಗದುಗಿನ ನಾರಾಯಣಪ್ಪನ (ಕುಮಾರ ವ್ಯಾಸ) ಆರಾಧ್ಯದೈವ ಯಾರು?
29. ಗೌತಮ ಬುದ್ಧರ ಸಂದೇಶಗಳು ಇರುವ ಭಾಷೆ?
30. ಕೇಂದ್ರ ಸಾಹಿತ್ಯ ಅಕಾಡಮಿ ಪ್ರಾರಂಭ ಗೊಂಡ ವರ್ಷ?
31. 'UNITA' ವಿಸ್ತೃತ ರೂಪವೇನು?
32. 1995ರ ವಿಶ್ವ ಸುಂದರಿಯರ ಸ್ಪರ್ಧೆ ಎಲ್ಲಿ ಮತ್ತು ಯಾವ ದೇಶದಲ್ಲಿ ನಡೆಯಿತು?
33. 'ಸಿಕ್ಕಿಂ' ರಾಜ್ಯದ ವಿಧಾನಸಭೆಯ ಸದಸ್ಯರ ಸಂಖ್ಯೆ ಎಷ್ಟು?
34. 'A thing of beauty is joy for ever' ಇದನ್ನು ಹೇಳಿದ ಆಂಗ್ಲ ಕವಿ ಯಾರು?
35. ಜ್ಞಾನ ಪೀಠ ಪ್ರಶಸ್ತಿ ಪಡೆದವರಿಗೆ ನೀಡುವ ಹಣವೆಷ್ಟು?
36. ಕೀಟಗಳನ್ನು ಕುರಿತು ಅಧ್ಯಯನ ಮಾಡುವದಕ್ಕೆ ಏನನ್ನುತ್ತಾರೆ?
37. ಭಾರತದ ಮೊದಲ ಚುನಾವಣಾ ಆಯುಕ್ತರಾಗಿದ್ದವರು ಯಾರು?
38. 'Battery' ಈ ಪದವನ್ನು ಮೊದಲಿಗೆ ಬಳಸಿದವರು?
39. ಅಕ್ಬರ್ ಚಕ್ರವರ್ತಿ ನಿಧನ ಹೊಂದಿದ್ದು ಎಂದು?
40. ಬಹುಮನಿ ಸುಲ್ತಾನರ ರಾಜಧಾನಿ ಯಾವುದಾಗಿತ್ತು?
41. ಜಪಾನ್ ದೇಶದಲ್ಲಿ ಎಷ್ಟು ದ್ವೀಪಗಳಿವೆ?
42. ಮದರ್ ತೆರೇಸಾರ ಸ್ವಂತ ದೇಶ ಯಾವುದು?
43. 'ಕಾಫಿರಾಜ' ಎಂದು ಯಾವ ದೇಶಕ್ಕೆ ಕರೆಯುವರು?
44. 'ಕ್ಯಾಂಡಿ' (ಶ್ರೀಲಂಕಾ) ಯಲ್ಲಿರುವ ದೇವಾಲಯ ಯಾರದು?
45. ಭಾರತದ ಉಪ-ರಾಷ್ಟ್ರಪತಿಯು ಸಂವಿಧಾನ ಉಲ್ಲಂಘಿಸಿ ಹೊರ ಹಾಕಲ್ಪಟ್ಟಾಗ ಬಳಸುವ ಪದ ಯಾವುದು?
46. ಷೇಕ್ಸ್‌ಪಿಯರ್'ನ ಒಥೆಲ್ಲೊ ನಾಟಕವನ್ನು ಕನ್ನಡಕ್ಕೆ ತರ್ಜುಮೆ ಮಾಡಿದವರು ಯಾರು?
47. ಫ್ರಾನ್ಸಿನ ಮಹಾಕ್ರಾಂತಿ ಯಾವಾಗ ಜರುಗಿತು?
48. ಅಮೇರಿಕದ ಅಧ್ಯಕ್ಷ ಅಬ್ರಾಹಂ ಲಿಂಕನ್ನರನ್ನು ಕೊಲೆಗೈದ ವ್ಯಕ್ತಿ ಯಾರು?
49. 'ನವಕೋಟಿ ನಾರಾಯಣ' ಎಂಬ ಬಿರುದು ಪಡೆದಿದ್ದ ಮೈಸೂರಿನ ಒಡೆಯರಾರು?
50. ಸೀ ಬರ್ಡ್ (Sea Bird) ಎಂದರೇನು?

### ಉತ್ತರಗಳು

1. 1950 ಜನವರಿ 26, 2. ಪ್ರಧಾನ ಮಂತ್ರಿ, 3. ಕಲ್ಪನಾ ಚಾವಲಾ, 4. ಡೆಮೊಕ್ರೆಟಿಕ್, 5. 3ನೇ ಯವರು, 6. ಮೋನಿಕಾ ಸೆಲೆಸ್, 7. ಪಶು-ಸಂಗೋಪನೆ, 8. ರಾಷ್ಟ್ರಪತಿ, 9. 1955, 10. ಕ್ರಿ.ಶ. 7ನೇ ಶತಮಾನ, 11. ಹೊಯ್ಸಳರು (ವಿಷ್ಣು ವರ್ಧನ್), 12. 'ಸುದೈವಿ' ಎಂದರ್ಥ, 13. 1565, 14. ಗಂಗಾನದಿ, 15. ಇಸ್ಲಾಮಾಬಾದ್, 16. ಕೊಹಿಮಾ, 17. ಬಿ.ವಿ. ಫಾತಿಮಾ, 18. ಲಾಲ್ ಬಹಾದ್ದೂರ್ ಶಾಸ್ತ್ರಿ 19. ಕಪ್ಪು ಮಣ್ಣು 20. ಚಿತ್ರಕಲಾವಿದ (Artist), 21. ಅರಣಾಚಲ ಪ್ರದೇಶ, 22. ಗುಲ್ಜಾರಿಲಾಲ ನಂದಾ, 23. ಆಧುನಿಕ ಕೃಷಿ ಯಂತ್ರಗಳ ಬಳಕೆ, 24. ಹೊಸತು-ಹೊಸತು, 25. ಸಂಗೀತಕ್ಕೆ (ವಿದೇಶ ದವರು), 26. ಎಂ.ಎಸ್. ಸುಬ್ಬುಲಕ್ಷ್ಮಿ, 27. 9 28. ವೀರ ನಾರಾಯಣ, 29. ಪಾಲಿಭಾಷೆ, 30. ಕ್ರಿ.ಶ. 1954, 31. National Union for total Independence of Angola, 32. 1995ರಲ್ಲಿ ಆಫ್ರಿಕಾದ ಸನ್‌ಸಿಟಿ, 33. 32, 34. ಜಾನ್‌ಕೀಟ್ಸ್, 35. ಎರಡೂವರೆ ಲಕ್ಷ ರೂಗಳು, 36. ಎಂಟಮೋಲಾಜಿ, 37. ಸುಕುಮಾರ ಸೇನ್, 38. ಬೆಂಜಾಮಿನ್ ಫ್ರಾಂಕ್ಲಿನ್, 39. 1605ರಲ್ಲಿ, 40. ಗುಲಬರ್ಗಾ, 41. 3900ಕ್ಕಿಂತ ಹೆಚ್ಚು, 41. ಯುಗೋಸ್ಲೋವಿಯಾ, 43. ಬ್ರೆಜಿಲ್, 44. ಬುದ್ಧನ ದೇವಾಲಯ, 45. ಮಹಾಭಿಯೋಗ, 46. ಬಸವಪ್ಪ ಶಾಸ್ತ್ರಿ 47. ಕ್ರಿ.ಶ. 1789, 48. ಬೂತ್, 49. ಚಿಕ್ಕದೇವರಾಜ ಒಡೆಯರು, 50. ನೌಕಾನೆಲೆ (Harbour).

■ ಶಿ.ಕಾ. ಬಡಿಗೇರ

# ಸ್ಪರ್ಧಾತ್ಮಕ ಪರೀಕ್ಷೆಗೆ ಸಿದ್ಧರಾಗಿ

## ಇತಿಹಾಸ

1. ಭರತ ಚಕ್ರವರ್ತಿಯ ತಂದೆ-ತಾಯಿ ಯಾರು?
2. ಗ್ರೀಕರು ಸಿಂಧೂ ನದಿಯನ್ನು ಏನೆಂದು ಕರೆದರು?
3. ಪುರಾತನ ಪರ್ಷಿಯನ್ ಶಾಸನಗಳಲ್ಲಿ ಸಿಂಧೂ ನದಿಯನ್ನು ಏನೆಂದು ಕರೆಯಲಾಗಿದೆ?
4. ಭಾರತವು ಸುಮಾರು ಎಷ್ಟು ಕಿ.ಮಿ. ತೀರ ಪ್ರದೇಶವನ್ನು ಹೊಂದಿದೆ?
5. ಅಲೆಗ್ಸಾಂಡರ್ ಭಾರತದ ಮೇಲೆ ಎಷ್ಟನೇ ಶತಮಾನದಲ್ಲಿ ದಾಳಿ ಮಾಡಿದ?
6. 'ಗೋಧಿಯ ಕಣಜ' ಎಂಬ ಹೆಸರು ಯಾವ ರಾಜ್ಯಕ್ಕೆ ಇದೆ?
7. ಚಿರಾಪುಂಜಿಯಲ್ಲಿ ವರ್ಷಕ್ಕೆ ಸರಾಸರಿ ಎಷ್ಟು ಇಂಚು ಮಳೆ ಸುರಿಯುತ್ತದೆ?
8. ಪ್ರಸಕ್ತ ಸಂವಿಧಾನ ಎಷ್ಟು ಭಾಷೆಗಳನ್ನು ಅನುಮೋದಿಸಿದೆ?
9. 'ದಶಕುಮಾರ ಚರಿತ' ಅನ್ನುವ ಪುಸ್ತಕ ಬರೆದವರ್‍ಯಾರು?
10. ಪ್ರಪಂಚದಲ್ಲೇ ಬೃಹತ್ ದೇವಾಲಯ ಯಾವುದು?
11. ಭಾರತದಲ್ಲಿ ಸುಮಾರು ಎಷ್ಟು ಶಾಸನಗಳನ್ನು ತಜ್ಞರು ಪತ್ತೆ ಹಚ್ಚಿದ್ದಾರೆ?
12. ಭಾರತದಲ್ಲೇ ಅತ್ಯಂತ ಪ್ರಾಚೀನ ಶಾಸನ ಯಾವುದು?
13. 'ದೇವನಾಂಪ್ರಿಯ ಅಶೋಕ ಚಕ್ರವರ್ತಿ' ಎಂದು ಯಾವ ಶಾಸನದಲ್ಲಿ ಕೆತ್ತಲಾಗಿದೆ?
14. 'ಶಿಲಾಶಾಸನದ ಪಿತಾಮಹ' ಎಂದು ಯಾರನ್ನು ಕರೆಯಲಾಗಿದೆ?
15. ಕೌಸಾಂಬಿ ಶಾಸನವನ್ನು ಅಲಹಾಬಾದಿಗೆ ವರ್ಗಾಯಿಸಿದ ಮೊಘಲ್ ದೊರೆ ಯಾರು?
16. 'ಅಶ್ವಮೇಧ ರಾಜನ್' ಎಂದು ಯಾವ ಗುಪ್ತ ದೊರೆಯನ್ನು ಕರೆಯಲಾಗಿದೆ?
17. ವೇದಗಳಲ್ಲಿ ಮೊದಲನೆಯದು?
18. 'ಪಾಳಿ' ಈ ಶಬ್ದದ ಅರ್ಥವೇನು?
19. ಸಿಲೋನಿ ವೃತ್ತಾಂತ' ಎಂದು ಯಾವ ಗ್ರಂಥಗಳಿಗೆ ಕರೆಯಲಾಗಿದೆ?
20. ಪ್ರಥಮವಾಗಿ ಜೈನಧರ್ಮದ ಕೃತಿಗಳು ಯಾವ ಭಾಷೆಯಲ್ಲಿ ರಚನೆಗೊಂಡವು?
21. ವಿಶಾಖದತ್ತನ ಮುದ್ರಾರಾಕ್ಷಸ ನಾಟಕದಲ್ಲಿ ಯಾವ ಅಂಶ ಪ್ರಧಾನವಾಗಿ ಅಡಗಿದೆ?
22. 'ಬುದ್ಧಚರಿತ' ಗ್ರಂಥದ ಕರ್ತೃ ಯಾರು?
23. ಹರ್ಷಚರಿತದಲ್ಲಿರುವ ಅಧ್ಯಾಯಗಳ ಸಂಖ್ಯೆ ಎಷ್ಟು?
24. ಕಲ್ಹಣನು ತನ್ನ ಕೃತಿಯಾದ ರಾಜತರಂಗಿಣಿಯನ್ನು ಪೂರ್ಣಗೊಳಿಸಿದ ಕಾಲ ಯಾವುದು?
25. ಗುಪ್ತರ ಕಾಲದ ಪ್ರಸಿದ್ಧ ಖಗೋಳ ಹಾಗೂ ಗಣಿತ ಶಾಸ್ತ್ರಜ್ಞನಾಗಿದ್ದವನು ಯಾರು?
26. ಆರ್ಯಭಟನು ಸೌರಮಾನ ದಿನಗಳೆಂದು, ಲೆಕ್ಕ ಹಾಕಿದ ದಿನಗಳು?
27. 'ಪ್ರಬಂಧ ಚಿಂತಾಮಣಿ' ಈ ಗ್ರಂಥ ಬರೆದವರು?
28. 'ಭಾರತದ ರಾಸಾಯನಶಾಸ್ತ್ರದ ಪಿತಾಮಹ' ಎಂದು ಯಾರನ್ನು ಪರಿಗಣಿಸಲಾಗಿತ್ತು?
29. 'ಹಿಸ್ಟರೀಸ್' (Histories) ಎಂಬ ಇತಿಹಾಸ ಗ್ರಂಥದ ಕರ್ತೃ ಯಾರು?
30. ಪ್ಲಿನಿ, ಪ್ಲುಟಾರ್ಕ್, ಟಾಲಮಿ ಮತ್ತು ಸ್ಟ್ರಾಬೋ ಇವರು ಯಾವ ದೇಶದ ಪ್ರವಾಸಿಗರು?
31. ಮೌರ್ಯರ ಕಾಲದಲ್ಲಿ ಪಾಟಲಿಪುತ್ರ ನಗರದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ಸಮಿತಿಯ ಸಂಖ್ಯೆ ಎಷ್ಟು?
32. ಹ್ಯೂಯನ್ ತ್ಸಾಂಗ್‌ನ ಪ್ರವಾಸಿ ಗ್ರಂಥ ಯಾವುದು?
33. ಚೀನಿ ಪ್ರವಾಸಿಗರಾದ ಇಲ್ಸಿಂಗ್, ಹ್ಯೂಯನ್ ತ್ಸಾಂಗ್ ಹಾಗೂ ಫಾಹಿಯಾನ ಮುಂತಾದವರು ಭಾರತಕ್ಕೆ ಬರಲು ಕಾರಣ?
34. ಹೊಸ ಶಿಲಾಯುಗದ ಕಾಲಾವಧಿ ಎಲ್ಲಿಂದ-ಎಲ್ಲಿಯವರೆಗೆ?
35. ಕ್ರಿ.ಶ. ೧೯೨೧ರಲ್ಲಿ ಹರಪ್ಪ ನೆಲೆಯನ್ನು ಸಂಶೋಧಿಸಿದವರು ಯಾರು?
36. ಕ್ರ್ಯಾನಿಯೋಲಜಿ (craniology) ಎಂದರೆ?
37. ಸರ್, ಜಾನ್ ಮಾರ್ಷಲರ ಪ್ರಕಾರ ಸಿಂಧೂ ನದಿ ಬಯಲಿನ ನಾಗರಿಕತೆಯ ಕಾಲ ಎಷ್ಟು?
38. 'ಸಿಂಧೂ ನಾಗರಿಕತೆ'ಯನ್ನು ಇನ್ನೊಂದು ಹೆಸರಿನಿಂದಲೂ ಕರೆಯುತ್ತಾರೆ, ಅದು ಯಾವುದು?
39. ಹರಪ್ಪ ಸಂಸ್ಕೃತಿಯಲ್ಲಿ, ಮಣ್ಣಿನಿಂದ ತಯಾರಿಸಿದ ಪೈಪುಗಳು ದೊರೆತದ್ದು ಯಾವ ಸ್ಥಳದಲ್ಲಿ?
40. ಸಿಂಧೂ ಬರವಣಿಗೆಯನ್ನು ಹೊಂದಿದ ಮುದ್ರೆಗಳು ಎಷ್ಟು ದೊರೆತಿವೆ?
41. 'ದಿ ಈಸ್ಟ್ ಆ್ಯಂಡ್ ವೆಸ್ಟ್' ಗ್ರಂಥದ ಲೇಖಕರು ಯಾರು?
42. ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತದ ಘಟನೆಗಳು ಕ್ರಿ.ಪೂ. ಎಷ್ಟನೇ ಶತಮಾನಕ್ಕೆ ಸೇರಿದವಾಗಿವೆ?
43. ಋಗ್ವೇದ ಕಾಲದಲ್ಲಿ ರಾಜ್ಯವನ್ನು ಏನೆಂದು ಕರೆಯಲಾಗಿದೆ?
44. ವೇದ ಕಾಲದಲ್ಲಿ 'ಸಾಮ್ರಾಟ್' ಎಂಬ ಪದದ ಅರ್ಥವೇನಾಗಿತ್ತು?
45. ತಂದೆ ಮತ್ತು ಮಗಳ ಮದುವೆಯನ್ನು ವೇದ ಕಾಲದ ಜನಗಳು ಏನೆಂದು ದೂಷಿಸುತ್ತಿದ್ದರು?
46. '೮' ಈ ಚಿಹ್ನೆಯನ್ನು ಋಗ್ವೇದದ ಜನರು ದನಗಳ ಕಿವಿಯ ಮೇಲೆ ಹಾಕಿ ಏನೆಂದು ಕರೆಯುತ್ತಿದ್ದರು?
47. ಮರಣಾನಂತರ ಆತ್ಮದ ಇರುವಿಕೆಯ ಕುರಿತು ಋಗ್ವೇದ ಏನು ಹೇಳಿದೆ?
48. ಋಗ್ವೇದ ಕಾಲದಲ್ಲಿ ಯಜ್ಞ ಮಾಡುವಾಗ ಬಂದ ಅತಿಥಿಗಳನ್ನು ಏನೆಂದು ಕರೆಯುತ್ತಿದ್ದರು?
49. ಸತಪತ ಬ್ರಾಹ್ಮಣದ ಪ್ರಕಾರ 'ಪರಿಚಕ್ರ' ಯಾವ ನಗರವಾಗಿದೆ?
50. ಧರ್ಮಸೂತ್ರಗಳ ಪ್ರಕಾರ ವಿವಾಹಗಳ ಸಂಖ್ಯೆ ಎಷ್ಟು?

### ಉತ್ತರಗಳು

1. ವೃಷಭದೇವ ಹಾಗೂ ಯಶಸ್ವಿನಿ, 2. ಇಂಡಸ್ (Indus) 3. ಹಿಂದು, 4. 7516 ಕಿ.ಮಿ, 5. ಕ್ರಿ.ಪೂ. 4ನೇ ಶತಮಾನ, 6. ಪಂಜಾಬ್, 7. 460 ಇಂಚು, 8. 18, 9. ದಂಡಿ, 10. ಆಂಗೋರ್ ವಾಟ್ (ಕಾಂಬೋಡಿಯದಲ್ಲಿದೆ), 11. ಸುಮಾರು 75,000, 12. ಸೋಹಗಾರ್, 13. ಮಸ್ಕಿ ಶಾಸನದಲ್ಲಿ, 14. ಅಶೋಕ, 15. ಅಕ್ಬರ್, 16. ಸಮುದ್ರ ಗುಪ್ತ, 17. ಋಗ್ವೇದ, 18. ಸರಳ ಅಥವಾ ಪವಿತ್ರ, 19. ದೀಪವಂಶ ಹಾಗೂ ಮಹಾವಂಶ, 20. ಅರ್ಧಮಾಗಧಿ, 21. ರಾಜಕೀಯ ಅಂಶ, 22. ಅಶ್ವಘೋಷ, 23. 8, 24. 1150ರಲ್ಲಿ, 25. ಆರ್ಯಭಟ, 26. 265, 3586805 ದಿನಗಳು, 27. ಮೇರು ತುಂಗ, 28. 2ನೇನಾಗಾರ್ಜುನ, 29. ಹೆರೋಡೋಟಸ್, 30. ಗ್ರೀಕ್, 31. 30, 32. ಸಿ-ಯು-ಕಿ, 33. ಬೌದ್ಧ ಸಾಹಿತ್ಯದ ಅಧ್ಯಯನ, 34. ಕ್ರಿ.ಪೂ. 7000 ರಿಂದ ಕ್ರಿ.ಪೂ. 2100, 35. ದಯಾರಾಂ ಸಹಾನಿ, 36. ಕಪಾಲ ಶಾಸ್ತ್ರ, 37. 3250ರಿಂದ ಕ್ರಿ.ಪೂ. 2750, 38. ಹರಪ್ಪ ಸಂಸ್ಕೃತಿ, 39. ಚಾನ್ಹುದಾರೋ, 40. ಸುಮಾರು 2500, 41. ಸ್ವಾಮಿ ವಿವೇಕಾನಂದ, 42. ಕ್ರಿ.ಪೂ. 1000 ರಿಂದ ಕ್ರಿ.ಪೂ. 7000, 43. ರಜನ್, 44. ಸರ್ವಶ್ರೇಷ್ಟ, 45. ಹಾದರ, 46. ಅಷ್ಟಕರಣಿ, 47. ಏನೂ ಹೇಳಿಲ್ಲ, 48. ಗೋಘ್ನಾ, 49. ಪಾಂಚಾಲ, 50. 8.

■ ಶಿ.ಕಾ. ಬಡಿಗೇರ

## ಗೋರೆಗಾಂವ್ ಕರ್ನಾಟಕ ಸಂಘದಿಂದ ಅಖಿಲ ಭಾರತ ಮಟ್ಟದ ಸಾಹಿತ್ಯ ಸ್ಪರ್ಧೆ

ಮುಂಬಯಿ ಮಹಾನಗರದಲ್ಲಿ ಕನ್ನಡಿಗರ ಸಕ್ರಿಯ ಚಟುವಟಿಕೆಗಳ ಕ್ರಿಯಾಕೇಂದ್ರವೆನಿಸಿರುವ ಗೋರೆಗಾಂವ್ ಕರ್ನಾಟಕ ಸಂಘವು 40ನೆಯ ವರ್ಷಕ್ಕೆ ಕಾಲಿಟ್ಟ ಸಂದರ್ಭದಲ್ಲಿ ಅಖಿಲ ಭಾರತ ಮಟ್ಟದ ಸಾಹಿತ್ಯ ಸ್ಪರ್ಧೆಯೊಂದನ್ನು ಆಯೋಜಿಸಿದೆ. ಸಣ್ಣಕತೆ, ಕವಿತೆ ಮತ್ತು ವೈಚಾರಿಕ ಪ್ರಬಂಧವನ್ನೊಳಗೊಂಡ ಈ ಸಾಹಿತ್ಯ ಸ್ಪರ್ಧೆಯ ನಿಯಮಗಳು ಈ ಕೆಳಗಿನಂತಿವೆ.

**ಸಣ್ಣ ಕತೆ**

- ಫುಲ್‌ಸ್ಕೇಪ್ ಹಾಳೆಯಲ್ಲಿ 12ರಿಂದ 14 ಪುಟಗಳಿಗೆ ಮೀರದಂತೆ ಹಾಳೆಯ ಒಂದೇ ಬದಿಯಲ್ಲಿ ಸ್ವಚ್ಛವಾಗಿ ಬರೆದಿರಬೇಕು.
- ಜೆರಾಕ್ಸ್ ಪ್ರತಿಗಳನ್ನು ಖಂಡಿತಾ ಸ್ವೀಕರಿಸುವುದಿಲ್ಲ.
- ಸ್ಪರ್ಧೆಗೆ ಕಳುಹಿಸುವ ಕತೆಯು ಆಕಾಶವಾಣಿಯಲ್ಲಿ ಪ್ರಸಾರವಾಗಿರಬಾರದು ಮತ್ತು ಈ ಮೊದಲು ಬೇರೆಲ್ಲೂ ಪ್ರಕಟವಾಗಿರಬಾರದು.
- ಒಬ್ಬರು ಒಂದೇ ಕತೆ ಕಳುಹಿಸಬೇಕು.

**ಪ್ರಬಂಧ**

- ಫುಲ್‌ಸ್ಕೇಪ್ ಹಾಳೆಯಲ್ಲಿ 8-10 ಪುಟಗಳಿಗೆ ಮೀರದಂತೆ ಸ್ವಚ್ಛವಾಗಿ ಹಾಳೆಯ ಒಂದೇ ಮಗ್ಗುಲಲ್ಲಿ ಬರೆದಿರಬೇಕು. (ಉಳಿದಂತೆ ಮೇಲಿನ ಎಲ್ಲಾ ನಿಯಮಗಳು ಅನ್ವಯವಾಗುವುದು).

**ಪ್ರಬಂಧದ ವಿಷಯ:**

- ಭಾರತದ ಸ್ವಾತಂತ್ರ್ಯ ಸುವರ್ಣ ಮಹೋತ್ಸವದಲ್ಲಿ ನಾವೆಲ್ಲಿದ್ದೇವೆ?
- ಆಧುನಿಕ ಶಿಕ್ಷಣದ ಸವಾಲುಗಳ ನಡುವೆ ಕನ್ನಡ ಭಾಷೆಯ ಉಳಿವು.
- ಸಾಹಿತ್ಯ ಮತ್ತು ಪ್ರಜಾಪ್ರಭುತ್ವ

**ಕವಿತೆ**

- ಒಂದರಿಂದ ಎರಡು ಪುಟಗಳ ಕವಿತೆಯನ್ನು ಮಾತ್ರ ಸ್ವೀಕರಿಸಲಾಗುವುದು. (ಉಳಿದಂತೆ ಕತೆ, ಪ್ರಬಂಧಗಳ ನಿಯಮಗಳನ್ನು ಗಮನಿಸಿ)

ಕತಾ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ: 1,500ರೂ. ದ್ವಿತೀಯ ಬಹುಮಾನ : 1.000 ರೂ. ತೃತೀಯ ಬಹುಮಾನ : 750 ರೂ.

ಹಾಗೆಯೇ ಪ್ರಬಂಧ ಸ್ಪರ್ಧೆಯಲ್ಲಿ ಪ್ರಥಮ : 1.000ರೂ. ದ್ವಿತೀಯ : 750ರೂ. ತೃತೀಯ: 500 ರೂ.

ಮತ್ತು ಕವಿತಾ ಸ್ಪರ್ಧೆಯಲ್ಲಿ ಪ್ರಥಮ: 500 ರೂ. ದ್ವಿತೀಯ: 400 ರೂ. ತೃತೀಯ : 300 ರೂಪಾಯಿಗಳಿದ್ದು ಸ್ಪರ್ಧೆಗೆ ಬರಹ ಕಳುಹಿಸುವ ಕೊನೆಯ ದಿನಾಂಕ ಸೆಪ್ಟೆಂಬರ್ 30, 1998

ಎಲ್ಲಾ ವಿಭಾಗಗಳಲ್ಲೂ ಮೊದಲ ಮೂರು ಬಹುಮಾನ ಪಡೆದ ಬರಹಗಳನ್ನು ಗೋರೆಗಾಂವ್ ಕರ್ನಾಟಕ ಸಂಘದ 'ಮುಂಬೆಳಕು' 1999ರ ವಾರ್ಷಿಕ ವಿಶೇಷಾಂಕದಲ್ಲಿ ಪ್ರಕಟಿಸಲಾಗುವುದು.

ಅಂಚೆ ಕವರಿನ ಮೇಲೆ ಅದು ಯಾವ ವಿಭಾಗ ಎಂದು ತಪ್ಪದೆ ನಮೂದಿಸಿರಿ.

ಬರಹಗಳನ್ನು ಕಳುಹಿಸಬೇಕಾದ ವಿಳಾಸ:

**Secretary Goregoan Karnataka Sangha, B-5 & 6, "Prembindu', Off: M.G. Road, Goregoan, (West) Mumbai - 400 062.**

## ದ್ವಿಚಕ್ರ ವಾಹನ ರಿಪೇರಿ ತರಬೇತಿ

ಗ್ರಾಮಾಭಿವೃದ್ಧಿ ಹಾಗೂ ಸ್ವ-ಉದ್ಯೋಗ ತರಬೇತಿ ಸಂಸ್ಥೆ ಅರಿಶಿನಕುಂಟೆ, ನೆಲಮಂಗಲ ಇವರು ನಿರುದ್ಯೋಗಿ ಯುವಕರಿಗಾಗಿ ಒಂದು ತಿಂಗಳ ದ್ವಿಚಕ್ರವಾಹನ ತರಬೇತಿಯನ್ನು ಸೆಪ್ಟಂಬರ್ ತಿಂಗಳಲ್ಲಿ ನೀಡುವರು.

ತರಬೇತಿಯಲ್ಲಿ ಎಲ್ಲಾ ದ್ವಿಚಕ್ರವಾಹನಗಳ ರಿಪೇರಿ ಬಗ್ಗೆ ಹಾಗೂ ಸ್ವ-ಉದ್ಯೋಗ ಪ್ರಾರಂಭಿಸಲು ಬೇಕಾದ ಎಲ್ಲಾ ಮಾಹಿತಿಯನ್ನು ನೀಡಲಾಗುತ್ತದೆ. ತರಬೇತಿಯು ಪೂರ್ಣವಾಗಿ ಉಚಿತವಾಗಿದ್ದು, ಉಚಿತ ಊಟ ವಸತಿ ವ್ಯವಸ್ಥೆಯನ್ನು ಮಾಡಲಾಗುತ್ತದೆ. ಬೆಂಗಳೂರು ಗ್ರಾಮಾಂತರ, ಬೆಂಗಳೂರು ನಗರ ಹಾಗೂ ತುಮಕೂರು ಜಿಲ್ಲೆಗಳ 18-35 ವಯಸ್ಸಿನೊಳಗಿನ, ಪ್ರಾಥಮಿಕ ಜ್ಞಾನ, ಅನುಭವವುಳ್ಳ ಆಸಕ್ತ ಯುವಕರು ವೈಯಕ್ತಿಕ ವಿವರಗಳೊಂದಿಗೆ ಸಂಸ್ಥೆಗೆ ಅರ್ಜಿ ಸಲ್ಲಿಸಬಹುದು.

ಅರ್ಜಿ ಸಲ್ಲಿಸಬೇಕಾದ ವಿಳಾಸ : *ನಿರ್ದೇಶಕರು, ಗ್ರಾಮಾಭಿವೃದ್ಧಿ ಹಾಗೂ ಸ್ವ-ಉದ್ಯೋಗ ತರಬೇತಿ ಸಂಸ್ಥೆ, ಚೆಕ್‌ಪೋಸ್ಟ್ ಹಿಂಭಾಗ, ಅರಿಶಿನಕುಂಟೆ, ನೆಲಮಂಗಲ - 562 123. ಫೋನ್ : 08118-23166*

## ಡಿಸೆಂಬರ್‌ನಲ್ಲಿ ಎನ್‌ಟಿಎಸ್‌ಇ ಪ್ರತಿಭಾ ಪರೀಕ್ಷೆ

ರಾಜ್ಯದ 33 ಪರೀಕ್ಷಾ ಕೇಂದ್ರಗಳಲ್ಲಿ ಡಿಸೆಂಬರ್ 13,98ರಂದು ನಡೆಯುವ ರಾಷ್ಟ್ರೀಯ ಪ್ರತಿಭಾನ್ವೇಷಣೆ ಪರೀಕ್ಷೆಗೆ (ಎನ್‌ಟಿಎಸ್‌ಇ) ಅರ್ಜಿ ಆಹ್ವಾನಿಸಲಾಗಿದೆ.

98-99ನೇ ಸಾಲಿನಲ್ಲಿ 10ನೇ ಅಥವಾ ತತ್ಸಮಾನ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಹಾಗೂ 9ನೇ ತರಗತಿಯಲ್ಲಿ ಕನಿಷ್ಠ ಶೇ.55 ಅಂಕ ಗಳಿಸಿರುವ ಸಾಮಾನ್ಯ ಅಭ್ಯರ್ಥಿಗಳು ಶೇ.45 ಅಂಕ ಪಡೆದಿರುವ ಪರಿಶಿಷ್ಟ ಜಾತಿ ಹಾಗೂ ಪಂಗಡದ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅರ್ಹರು. ನಿಗದಿತ ಅರ್ಜಿ ನಮೂನೆಗಳನ್ನು ಬೆಂಗಳೂರು ನಗರ ಹಾಗೂ ಜಿಲ್ಲಾ ಕೇಂದ್ರಗಳ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಚೇರಿಯಿಂದ ಮತ್ತು ಕನಕಪುರದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಚೇರಿಯಿಂದ ಪಡೆಯಬಹುದು. ಭರ್ತಿ ಮಾಡಿದ ಅರ್ಜಿಗಳನ್ನು ಅವರಿಗೆ ಹಿಂದಿರುಗಿಸಿ ಅವರಿಂದ ಪ್ರವೇಶ ಪತ್ರ ಪಡೆಯಬಹುದು.

ಹೆಚ್ಚಿನ ವಿವರಗಳಿಗೆ 'ಸಂಚಾಲಕರು, ಎನ್.ಟಿ.ಎಸ್.ಇ ಹಾಗೂ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬಿ.ಪಿ.ವಾಡಿಯಾ ರಸ್ತೆ, ಬಸವನಗುಡಿ, ಬೆಂಗಳೂರು (ದೂರವಾಣಿ : 6707735 ಅಥವಾ 6506176)' ಈ ವಿಳಾಸ ಸಂಪರ್ಕಿಸಬಹುದು. ■

## ಕಿತ್ತೂರು ರಾಣಿ ಚೆನ್ನಮ್ಮ ಪ್ರಶಸ್ತಿ

ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆ ಅಂಗವಾಗಿ ಅಭಿವೃದ್ಧಿ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿರುವ ಸಂಸ್ಥೆ ಹಾಗೂ ವ್ಯಕ್ತಿಗಳಿಗೆ ಪ್ರತಿವರ್ಷ ಮಾರ್ಚ್‌ನಲ್ಲಿ 'ಕಿತ್ತೂರು ರಾಣಿ ಚೆನ್ನಮ್ಮ' ಪ್ರಶಸ್ತಿ ನೀಡಲು ಸರ್ಕಾರ ನಿರ್ಧರಿಸಿದೆ. ಆಯ್ಕೆಯಾದ ಸಂಸ್ಥೆಗೆ ರೂ. 50 ಸಾವಿರ ಹಾಗೂ ಅರ್ಹ ವ್ಯಕ್ತಿಗೆ ರೂ.10 ಸಾವಿರ ಬಹುಮಾನ ಮತ್ತು ಪ್ರಶಸ್ತಿ ಪತ್ರ ನೀಡಲಾಗುವುದು.

ಕಳೆದ ಐದು ವರ್ಷಗಳಿಂದ ಮಹಿಳಾ ಅಭಿವೃದ್ಧಿ ಕಾರ್ಯಕ್ರಮದಲ್ಲಿ ತೊಡಗಿ ಸೇವೆ ಸಲ್ಲಿಸುತ್ತಿರುವವರು ಈ ಪ್ರಶಸ್ತಿಗೆ ಅರ್ಹರಾಗಿರುತ್ತಾರೆ. ಅರ್ಜಿಗಳನ್ನು ಆಯಾ ಜಿಲ್ಲಾಧಿಕಾರಿಗಳ ಕಚೇರಿ ಅಥವಾ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಂದ ಪಡೆಯಬಹುದು. ಭರ್ತಿ ಮಾಡಿದ ಅರ್ಜಿಗಳನ್ನು ಆಯಾ ಜಿಲ್ಲಾಧಿಕಾರಿಗಳಿಗೆ ಡಿಸೆಂಬರ್ 31ರ ಒಳಗೆ ಸಲ್ಲಿಸಬೇಕು.

# ಮೂಡಲಪಾಯ ದೊಡ್ಡಾಟದ ರಚನಕಾರ ವೀರಪ್ಪ ಶೆಟ್ಟರ

**ಬಾ**ಗಲಕೋಟೆಯ ವಯೋವೃದ್ಧರಾದ ವೀರಪ್ಪ ಸಂಗಪ್ಪ ಶೆಟ್ಟರ ರವರು ಮೂಡಲಪಾಯ ದೊಡ್ಡಾಟದ ಮತ್ತು ನಾಟಕಗಳ ರಚನಾಕಾರರಾಗಿ ಜಾನಪದ ಸಾಹಿತ್ಯದ ಉಳುವಿಗಾಗಿ ಅವಿರತವಾಗಿ ಶ್ರಮಿಸುತ್ತಿದ್ದಾರೆ. ಜಾನಪದ ಸಾಹಿತ್ಯಕ್ಕೆ ಹಲವಾರು ಉತ್ತಮ ಕೃತಿಗಳನ್ನು ನೀಡಿದ್ದಾರೆ. ಅವರ ನಾಟಕಗಳು ವಿವಿಧ ಪ್ರಾಂತ್ಯಗಳಲ್ಲಿ ರಂಗಪ್ರವೇಶಗೊಂಡು ಪ್ರಯೋಗಗೊಳ್ಳುತ್ತಲಿವೆ.

ಚಿಕ್ಕಂದಿನಿಂದಲೂ ನಾಟಕ ಮತ್ತು ದೊಡ್ಡಾಟದ ಹವ್ಯಾಸವನ್ನು ಬೆಳೆಸಿಕೊಂಡ ಇವರು ನಾಟಕದಲ್ಲಿ ಕಲಾವಿದರಾಗಿ ಪಾತ್ರ ಮಾಡಿದ್ದಾರೆ. ಅಲ್ಲದೆ ನಾಟಕದ ನಿರ್ದೇಶನವನ್ನು ಕೂಡ ಮಾಡಿದ್ದಾರೆ. ಮಹಾಭಾರತದ ಮೂಲ ಕಥಾ ವಸ್ತುವನ್ನು ಆಧಾರವಾಗಿಟ್ಟುಕೊಂಡು ಕವಿತೆ, ಲೇಖನಗಳನ್ನು ಬರೆಯಲು ಪ್ರಾರಂಭಿಸಿದರು. ನಂತರ ದೊಡ್ಡಾಟ ಮತ್ತು ನಾಟಕಗಳ ರಚನೆಯನ್ನು ಪ್ರಾರಂಭಿಸಿದರು.



ಇಂದ್ರಪ್ರಸ್ಥ, ವೀರಭೀಮಸೇನ, ವೀರಭೀಮಾರ್ಜುನ, ಕೃಷ್ಣ-ಪಾಂಡವ, ಪಾರ್ಥಂಜನೇಯ, ಅಲ್ಲಮಪ್ರಭು ಮುಂತಾದ ಹನ್ನೊಂದು ದೊಡ್ಡಾಟಗಳನ್ನು ಮತ್ತು ಶಿವ ಪ್ರಭುವಿನ ತೃಷ್ಣಾ, ಚಪಲ-ಚಪಲಾ, ಋಣಭಾರ ಶಹಜಿಪುತ್ರ, ಶಿವಾಜಿ, ಅಲ್ಲಮಪ್ರಭುವಿನ ಸತ್ವಪರೀಕ್ಷೆ ಮುಂತಾದ ಏಳು ನಾಟಕಗಳನ್ನು ರಚಿಸಿದ್ದಾರೆ. ಇವುಗಳು ಸ್ಥಳೀಯ ದಾನಿಗಳ ಸಹಯೋಗದಿಂದ ಪ್ರಕಟವಾಗಿವೆ.

ವೀರಪ್ಪ ಶೆಟ್ಟರವರು ವೃತ್ತಿಯಿಂದ ಶಿಲ್ಪಿಗಳಾದರೆ ಪ್ರವೃತ್ತಿಯಿಂದ ಉತ್ತಮ ಕಲಾವಿದರಾಗಿ, ನಾಟಕಕಾರರಾಗಿ, ಅಪ್ಪಟ ದೇಶಭಕ್ತರಾಗಿ ಕಲಾಸೇವೆಯನ್ನು ಮುಖ್ಯ ಗುರಿಯಾಗಿಟ್ಟುಕೊಂಡು ತಮ್ಮ ಎಪ್ಪತ್ತರ ಬ್ರಹ್ಮಚಾರಿ ಜೀವನವನ್ನು ಸಾಗಿಸುತ್ತಿದ್ದಾರೆ. ಸರಕಾರದ ಸಹಾಯ ಸನ್ಮಾನಗಳಿಗೆ ಬಾಯಿಬಿಡದೆ ಅವಕಾಶ ದೂರೆಯಲಿಲ್ಲ ಎಂದು ನಿರಾಶೆಯಾಗದೆ 'ಕಾಯಕವೇ ಕೈಲಾಸ' ಎಂದು ತಿಳಿದು ಶ್ರಮಿಜೀವಿಯಾಗಿ ಬದುಕುತ್ತಿದ್ದಾರೆ. ಸರಕಾರದಿಂದ ಆರ್ಥಿಕ ಸಹಾಯ ಸಿಗಬೇಕಾಗಿದೆ.

■ **ಸಿದ್ಧರಾಜ್ ಎಂ. ಕೆಂಧೂಳಿ**








# ಕಂಪ್ಯೂಟರ್ : ಕಬ್ಬಿಣದ ಕಡಲೆ ಅಲ್ಲ!

**ಕಂಪ್ಯೂಟರ್ ಕೊಳ್ಳದವರು ಬೇಕಾದಷ್ಟು ಜನ ಸಿಗಬಹುದು. ಆದರೆ ಕಂಪ್ಯೂಟರ್ ಬಗ್ಗೆ ಕುತೂಹಲ ಇಟ್ಟುಕೊಳ್ಳದವರು ಸಿಗಲಾರರು. ಸಾಮಾನ್ಯ ಜನರಿಗೆ ಕಂಪ್ಯೂಟರ್ ಬಗ್ಗೆ ತಿಳಿಹೇಳಲೆಂದೇ ಈ ಅಂಕಣ ಪ್ರಾರಂಭಿಸುತ್ತಿದ್ದೇವೆ.**

**ಇಲ್ಲಿನ ಭಿನ್ನ ಶೈಲಿಯ ಸರಳ ನಿರೂಪಣೆ ನಿಮಗೆ ಹಿಡಿಸುತ್ತದೆ ಎಂಬ ನಂಬಿಕೆ ನಮ್ಮದು.**

ನಿಮ್ಮ ಮನೆಯ ಟೀವಿ, ಟೇಪ್ ರೆಕಾರ್ಡರ್, ಅದು ಬೇಡ.... ಒಂದು ಸಿಂಪಲ್ ಕ್ಯಾಲ್ಕ್ಯುಲೇಟರ್ ಬಳಸಲು ನಿಮಗೆ ಗೊತ್ತೇ?

ಹಾಗಾದರೆ ಸರಿ.... ನೀವು ಕಂಪ್ಯೂಟರನ್ನು ಅಷ್ಟೇ ಸಲೀಸಾಗಿ ಉಪಯೋಗಿಸಬಹುದು. ಕಂಪ್ಯೂಟರ್ ಏನೂ ಕಬ್ಬಿಣದ ಕಡಲೆ ಅಲ್ಲ.

ಈ ಇಂಡಿಯಾದ ಶೇಕಡಾ 98 ರಷ್ಟು ಜನ ಈಗಲೂ ಕಂಪ್ಯೂಟರ್ ಎಂದರೆ ಏನೋ ರಾಕೆಟ್ ತಂತ್ರಜ್ಞಾನ, ಅಣುಬಾಂಬ್ ಸೂತ್ರ ಅನ್ನೋ ಥರಾ ದಿಗಿಲು ಬೀಳುತ್ತಾರೆ. ಈ ಕಂಪ್ಯೂಟರೆಲ್ಲ ತಮ್ಮಂಥವರಿಗಲ್ಲ ಅಂದುಕೊಳ್ಳುತ್ತಾರೆ. ಅಂಥವರಲ್ಲಿ ನೀವೂ ಒಬ್ಬರಾದರೆ.... ಕಿವಿಯಲ್ಲಿ ಹೇಳುತ್ತೇನೆ. ದಯವಿಟ್ಟು ನಾಚಿಕೆಪಟ್ಟುಕೊಳ್ಳಿ.

ಹಾಗಂತ 'ಕಂಪ್ಯೂಟರ್' ಗೊತ್ತು ಅಂತ ಜಂಭಪಡುವವರಿಗೇನೂ ಕಡಿಮೆ ಇಲ್ಲ. ಅಂಥ ಜಂಭವನ್ನು ಸೀರಿಯಸ್ಸಾಗಿ ತೆಗೆದುಕೊಳ್ಳಬೇಕಿಲ್ಲ. ಇಷ್ಟಕ್ಕೂ ಕಂಪ್ಯೂಟರ್ ಏನು ಮಹಾ? ಹೇಳಿದೆನಲ್ಲಾ, ನಿಮ್ಮ ಮನೆಯ ಟೀವಿ, ಟೇಪ್ ರೆಕಾರ್ಡರ್... ಇದ್ದ ಹಾಗೇ ಇನ್ನೊಂದು ವಸ್ತು ಅಷ್ಟೇ.

ಹೀಗೆ ಹೇಳಿದೆನೆಂದು ಕಂಪ್ಯೂಟರನ್ನು ಅಂಡರ್ ಎಸ್ಟಿಮೇಟ್ ಮಾಡಬೇಡಿ. ಅದೊಂದು ಅದ್ಭುತ ವಸ್ತು. ನಿಮ್ಮನ್ನು ಬಿಟ್ಟರೆ ಈ ಪ್ರಪಂಚದಲ್ಲಿ ಅದ್ಭುತ ಅಂತ ಏನನ್ನಾದರೂ ಮಾಡಲು ಸಾಧ್ಯವಿದ್ದರೆ ಅದು ಕಂಪ್ಯೂಟರ್‌ನಿಂದ ಮಾತ್ರ....!

ಆದರೆ ಇಷ್ಟೇ... ಕಂಪ್ಯೂಟರ್ ಗುಂಡಿ ಒತ್ತುವುದನ್ನು ನೀವು ಕಲಿಯಬೇಕು. ಯಾವ ಗುಂಡಿ ಒತ್ತಿದರೆ ಏನಾಗುತ್ತದೆ? ಏನು ಮಾಡಲು ಯಾವ ಗುಂಡಿ ಒತ್ತಬೇಕು? ಎಂಬು

## ಚಾಟ್ ರೂಂ

### ಟೈಪಿಸ್ಟ್ ಕಂ ಆಫೀಸ್ ಅಸಿಸ್ಟೆಂಟ್ ಹುದ್ದೆಗೆ ಏನು ಕಲಿಯಲಿ?

ನಾನು ಸಣ್ಣ ಖಾಸಗಿ ಸಂಸ್ಥೆಯಲ್ಲಿ ಟೈಪಿಸ್ಟ್. ಬಿ.ಎ. ಆಗಿದೆ. ಈಗ ಕಂಪ್ಯೂಟರ್ ಕಲಿಯಬೇಕು ಅಂದುಕೊಂಡಿದ್ದೇನೆ. ಏನು ಕಲಿಯಲಿ? ಇಲ್ಲಿ ಆ್ಯಪಲ್, ಫಸ್ಟ್ ಕಂಪ್ಯೂಟರ್ ಮುಂತಾದ ಇನ್‌ಸ್ಟಿಟ್ಯೂಟ್‌ಗಳಿಗೆ ಹೋಗಿದ್ದೆ. ಕೋರ್ಸಿಗೆ 20-30 ಸಾವಿರ ಹೇಳಿದರು. ಅಷ್ಟೊಂದು ಹಣವಿಲ್ಲ. ಸ್ವಯಂ ಉದ್ಯೋಗದ ಬಗ್ಗೆ ಆಸಕ್ತಿಯಿಲ್ಲ. ನೌಕರಿ ಹುಡುಕುತ್ತಿದ್ದೇನೆ. ಟೈಪಿಸ್ಟ್ ಕಂ ಆಫೀಸ್ ಅಸಿಸ್ಟೆಂಟ್ ಹುದ್ದೆಗೆ ಸರಿ ಹೋಗುವಂಥದ್ದು ಏನು ಕಲಿಯಲಿ?

**ಶಿವಮೂರ್ತಿ ಕುಲಕರ್ಣಿ**, ಧಾರವಾಡ

ಕಂಪ್ಯೂಟರ್ ಇನ್‌ಸ್ಟಿಟ್ಯೂಟ್‌ನಲ್ಲಿ ನೂರಾರು ಬಗೆಯ ಶಿಕ್ಷಣಾವಕಾಶಗಳಿವೆ. ನಿಮ್ಮ ಆಸಕ್ತಿ ಹಾಗೂ ಉದ್ದೇಶಗಳನ್ನು ನೋಡಿದರೆ, ನಿಮಗೆ ಅವು ನೀಡುವ ರೆಡಿಮೇಡ್ ಕೋರ್ಸ್ ಸರಿಹೋಗುವಂತೆ ಕಾಣುವುದಿಲ್ಲ. ಈ ಕೆಳಗಿನ 4 ಮೂಲಭೂತ ಅಂಶಗಳನ್ನು ಕಲಿಯಬಹುದು.

1. **DOS - FUNDAMENTALS**
2. **WINDOWS - FUNDAMENTALS**, ಮತ್ತು ವಿಂಡೋಸ್ ಪ್ಯಾಕೇಜಿನಲ್ಲಿರುವ **Write, Paint Brush, Calculator, Card File** ಇತ್ಯಾದಿಗಳ ಬಳಕೆ.
3. **Word Star/ Word Perfect.**
4. ಇವಲ್ಲದೇ, ಕಂಪ್ಯೂಟರ್‌ನ ಅಂಗಾಂಗಗಳು, ಪ್ರಿಂಟರ್, **LAN** ಮತ್ತು ಅತ್ಯಗತ್ಯ ಪಾರಿಭಾಷಿಕ **(Terminology - important words)** ಪರಿಚಯ.

ಯಾವುದೇ ಕಂಪನಿಯಲ್ಲಿ ಯಾವ ಸಾಫ್ಟ್‌ವೇರ್ ಬಳಸಿದರೂ ಮೇಲೆ ಹೇಳಿದ ನಾಲ್ಕು ಮೂಲಭೂತ ಅಂಶಗಳು ಗೊತ್ತಿದ್ದರೆ, ಕಂಪ್ಯೂಟರನ್ನು ಸುಲಭವಾಗಿ ನಿರ್ವಹಿಸಬಹುದು.

ಇವನ್ನು ಕಲಿಯಲು ಗರಿಷ್ಠ ಎಂದರೆ ಒಂದು ತಿಂಗಳು ಸಾಕು. ಖರ್ಚು ಒಂದು ಸಾವಿರ ಮೀರುವುದಿಲ್ಲ.

ಅಲ್ಲದೇ, ಸಾಧ್ಯವಿದ್ದರೆ, MS WORD, MS EXCEL ಅಥವಾ MS OFFICE, TALLY ಎಂಬ ಮೂರು ಪ್ಯಾಕೇಜ್‌ಗಳ ಬಳಕೆಯನ್ನೂ ಕಲಿತುಕೊಂಡರೆ ಒಳ್ಳೆಯದು. ಇವು ಮೂರನ್ನು ಕಲಿಯಲು ಗರಿಷ್ಠ 1 ತಿಂಗಳು ಸಾಕು. ವೆಚ್ಚ ಸುಮಾರು 1500 ರೂ.

ಅಂದ ಹಾಗೇ, ಇವನ್ನು ಕಲಿಯಲು, ದೊಡ್ಡ ಇನ್‌ಸ್ಟಿಟ್ಯೂಟ್‌ಗಳಿಗಿಂತ ಸಣ್ಣ ಇನ್‌ಸ್ಟಿಟ್ಯೂಟ್‌ಗಳು ಉತ್ತಮ. ದೊಡ್ಡ ಇನ್‌ಸ್ಟಿಟ್ಯೂಟ್‌ಗಳಲ್ಲಿ ಇವೇ ಕೋರ್ಸ್‌ಗಳ ಶುಲ್ಕ ದುಬಾರಿಯಾಗುತ್ತದೆ.

## ಹೇಳಿದ್ದು ಮಾಡೋ ಮಹಾರಾಯ!

ಐಬಿಎಂನ ಹೊಸ ಕಂಪ್ಯೂಟರುಗಳು ಬಂದಿವೆ. ಇವನ್ನು ಆಪರೇಟ್ ಮಾಡಲು ಕೈಯಿಂದ ಗುಂಡಿ ಒತ್ತಬೇಕಿಲ್ಲ. ಬಾಯಿಂದ ಆಜ್ಞೆ ನೀಡಿದರೆ ಸಾಕು.ಕೆಲಸ ಮಾಡುತ್ತವೆ. ಇವು ವಾಯ್ಸ್ ಪ್ರಾಸೆಸರ್ ಕಂಪ್ಯೂಟರ್‌ಗಳು.

ಬಾಸ್ ಲೆಟರ್ ಡಿಕ್ಟೇಟ್ ಮಾಡಿದರೆ ಸಾಕು ತಂತಾನೇ ಕಾಂಪೋಸ್ ಮಾಡಿಕೊಳ್ಳುತ್ತವೆ. ಬಾಸ್‌ನ ಉಚ್ಚಾರಣೆಯನ್ನು ಅರ್ಥ ಮಾಡಿಕೊಳ್ಳುತ್ತವೆ. ಸ್ಪೆಲ್ಲಿಂಗ್, ಗ್ರಾಮರ್‌ಗಳನ್ನು ಪರಿಶೀಲಿಸಿ ಸರಿಪಡಿಸುತ್ತವೆ. ಇವು ಎಷ್ಟರ ಮಟ್ಟಿಗೆ ಬುದ್ಧಿವಂತ ಕಂಪ್ಯೂಟರುಗಳೆಂದರೆ ADVICE -ADVISE, DEAR DEER, BUY BYE BY ಮುಂತಾದ ಶಬ್ದಗಳ ಅಂತರವನ್ನು ಗುರುತಿಸಿ ಸಂದರ್ಭಕ್ಕನುಸಾರ ಬಳಸುತ್ತವೆ. ನಿಜಕ್ಕೂ ಅದ್ಭುತವಲ್ಲವೇ?

ದನ್ನೊಂದಿಷ್ಟು ಕಲಿತರೆ ಸಾಕು, ಬೇಕಾದಷ್ಟಾಯಿತು. ಹಾಗಂತ ಕಂಪ್ಯೂಟರ್‌ನಲ್ಲಿ ಕಲಿಯುವುದಕ್ಕೆ ಮಿತಿ ಇಲ್ಲಬಿಡಿ. ಆದರೆ ಯಾರು? ಎಷ್ಟು? ಏನನ್ನು? ಕಲಿಯಬೇಕು ಎಂಬುದು ಮುಖ್ಯ.

ಇವನ್ನು ಕಲಿಯುವುದು ಸಹ ಏನೂ ಕಷ್ಟವಲ್ಲ. ಹೇಳಿ, ಟೀವಿ ಬಳಸುವುದನ್ನು ಕಲಿಯುವುದು ನಿಮಗೆ ಕಷ್ಟವಾಯಿತೇ? ಇಲ್ಲವಲ್ಲ? ಹಾಗಾದರೆ ಕಂಪ್ಯೂಟರ್ ಕೂಡ ಕಷ್ಟವಾಗುವುದಿಲ್ಲ.

ಈ ಅಂಕಣದಲ್ಲಿ ಪ್ರತಿ ತಿಂಗಳೂ ಭೇಟಿಯಾಗೋಣ. ಕಂಪ್ಯೂಟರ್ ಬಗ್ಗೆ ಮಾತನಾಡೋಣ.

ತಲೆ ಚಿಟ್ಟು ಹಿಡಿಸುನಂಥ, ಅಥವಾ ಜಿಗುಟೆನಿಸುವಂಥ ಆಳವಾದ ವಿಷಯಗಳು ಇಲ್ಲಿ ಬೇಡ. ನಮ್ಮ ದಿನನಿತ್ಯದ ಕೆಲಸವನ್ನು ಕಂಪ್ಯೂಟರ್ ಹೇಗೆ ಸುಲಭಗೊಳಿಸುತ್ತದೆ? ನಮಗೆ ನಿಮಗೆ ಕಂಪ್ಯೂಟರ್ ಹೇಗೆ ಉಪಯುಕ್ತ? ಚಿಕ್ಕ ವ್ಯಾಪಾರಸ್ಥರಿಗೆ ಕಂಪ್ಯೂಟರಿಂದ ಏನು ಲಾಭ? ಕಂಪ್ಯೂಟರ್ ಸ್ವಯಂ ಉದ್ಯೋಗ ಹೇಗೆ? ಕಂಪ್ಯೂಟರ್ ಬಗ್ಗೆ ಯಾರು, ಎಷ್ಟು, ಏನನ್ನು ಕಲಿಯಬೇಕು? ಹೊಸ ಕಂಪ್ಯೂಟರ್ ಸಮಾಚಾರ ಏನಿದೆ? ಇಂಟರ್‌ನೆಟ್, ಈಮೇಲ್, ಕಂಪ್ಯೂಟರ್ ಲೈಬ್ರರಿ, ಕಂಪ್ಯೂಟರ್ ಸಿನೆಮಾ, ಸಾಫ್ಟ್‌ವೇರ್, ಹಾರ್ಡ್‌ವೇರ್‌ನಿಂದ ಹಿಡಿದು ಕಂಪ್ಯೂಟರ್ ವೈರಸ್, ವೈಟೂಕೆ ತಿಗಣೆ, ಹ್ಯಾಕಿಂಗ್ ಗುಪ್ತಚಾರರವರೆಗೆ ವೈವಿಧ್ಯ ವಿಷಯಗಳನ್ನು ಕುರಿತು ಮಾತನಾಡೋಣ.

**ಮತ್ತೆ ಭೇಟಿ ಮುಂದಿನ ಸಂಚಿಕೆಯಲ್ಲಿ.**

## ಸಂಗೀತ ಸ್ಪರ್ಧೆ

ಆದರ್ಶ ಸುಗಮ ಸಂಗೀತ ಅಕಾಡೆಮಿಯು ರಾಜ್ಯಮಟ್ಟದ ಭಾವಗೀತೆ, ಜನಪದ ಗೀತೆ ಹಾಗೂ ಕನ್ನಡ ಚಲನಚಿತ್ರ ಗೀತೆಗಳ ಸ್ಪರ್ಧೆಯನ್ನು ಏರ್ಪಡಿಸಲಿದೆ. ಬೆಂಗಳೂರಿನ ಅಭ್ಯರ್ಥಿಗಳಿಗೆ ಸೆಪ್ಟಂಬರ್ 5 ರಂದು, ಇತರ ಜಿಲ್ಲೆಗಳ ಅಭ್ಯರ್ಥಿಗಳಿಗೆ ಸೆ. 6 ರಂದು ಸ್ಪರ್ಧೆಯನ್ನು ನಡೆಸಲಾಗುವುದು.

ಆಸಕ್ತ ಅಭ್ಯರ್ಥಿಗಳು ಈ ತಿಂಗಳ 30ರೊಳಗೆ ಹೆಸರು ನೋಂದಾಯಿಸಿಕೊಳ್ಳಬೇಕು. ಹೆಚ್ಚಿನ ವಿವರಗಳಿಗೆ ವ್ಯವಸ್ಥಾಪಕರು, ಆದರ್ಶ ಸುಗಮ ಸಂಗೀತ ಅಕಾಡೆಮಿ, 'ಶ್ರೀ ಗಣೇಶ', 2ನೇ ಮಹಡಿ, ಸನ್ನಿಧಿ ರಸ್ತೆ, ಬಸವನಗುಡಿ, ಬೆಂಗಳೂರು - 4 (ದೂರವಾಣಿ: 6679081, 6508066) ಇವರನ್ನು ಸಂಪರ್ಕಿಸಬಹುದು.

■ ಕೋ. ಚೆನ್ನಬಸಪ್ಪ

ನಿವೃತ್ತ ನ್ಯಾಯಾಧೀಶರು
10333, ಎಂಬರ್ ಕ್ಲಿನ್ ಡ್ರೈವ್
ಆಸ್ಟಿನ್ (ಟಿ.ಎಕ್ಸ್) - 78726
ಅಮೇರಿಕಾ



**ದಕ್ಷಿಣ ಕನ್ನಡದಲ್ಲಿ ಕನ್ನಡ ಉಳಿದಿರುವುದು ತುಳುವರಿಂದ, ಕೊಂಕಣಿಗಳಿಂದ ಎಂದು ದೃಢವಾಗಿ ನಂಬಿರುವ ನನಗೆ ಶ್ರೀ ಕೃಷ್ಣಾ ಅವರು ಕನ್ನಡದ ಬಗ್ಗೆ ಇಲ್ಲಿಯೂ ಆಸಕ್ತಿ ಉಳಿಸಿಕೊಂಡಿರುವುದು ಸಹಜವೇ ಅನಿಸಿದರೂ, ಅವರ ನಿಷ್ಠೆಯ ಬಗ್ಗೆ ಆಶ್ಚರ್ಯವೂ, ಅಭಿಮಾನವೂ ಆಯಿತು.**

# ಸಾಹಿತ್ಯ ನಮಗೆ ಬೇಕೆ ?

**ಜೂನ್** 24ರ ಸಂಜೆ ದೂರವಾಣಿ ಗಂಟೆ ಬಾರಿಸಿತು. ಎತ್ತಿಕೊಂಡೆ. ಆ ತುದಿಯಿಂದ 'ನಾನು ಡಾ.ಎಂ.ಮಹೇಶ್ ಅಂತ. ಬಾಲ್ಟಿಮೋರ್ ನಿಂದ ಮಾತಾಡುತ್ತಿದ್ದೇನೆ. ಚೆನ್ನಬಸಪ್ಪನವರು ಇದ್ದಾರೊ ?'

'ಹೌದು, ನಾನೇ ಮಾತನಾಡೋದು, ನಮಸ್ಕಾರ...'

'ನಮಸ್ಕಾರ ಶ್ರೀ ಹರಿಹರೇಶ್ವರರು ನಿಮ್ಮ ವಿಚಾರ ಹೇಳಿದ್ರು. ನೀವು ಈ ದೇಶಕ್ಕೆ ಬಂದಿದ್ದು ತಿಳಿಯಿತು. ಇಂಟರ್‌ನೆಟ್ ಮೂಲಕ ನಿಮ್ಮ ವಿಚಾರ ಎಲ್ಲ ತಿಳಿಸಿದ್ದಾರೆ. ನೀವು ವಾಷಿಂಗ್‌ಟನ್ನಿಗೆ ಬರುವ ವಿಚಾರ ದೂರವಾಣಿಯಲ್ಲಿ ತಿಳಿಸಿದ್ರು. ಇಲ್ಲಿ ವಾಷಿಂಗ್‌ಟನ್ ಹತ್ರ ವರ್ಜೀನಿಯಾದಲ್ಲಿ 'ಕಾವೇರಿ' ಅಂತ ಕನ್ನಡಿಗರ ಕೂಟ ಇದೆ. ಅದರ ಆಶ್ರಯದಲ್ಲಿ ಒಂದು ಸಂಜೆ ಸಣ್ಣ ಕೂಟ ಇಟ್ಟುಕೊಳ್ಳಬೇಕು ಅಂತ ಮಾಡಿದೀವಿ... ನೀವು ದಯವಿಟ್ಟು ನಮ್ಮ ಕೂಟದಲ್ಲಿ ಭಾಗವಹಿಸಿ ನಾಲ್ಕು ಮಾತನಾಡಬೇಕಾಗಿ ವಿನಂತಿಸಲು ಫೋನ್ ಮಾಡಿದೆ' ಎಂದರು.

ಶ್ರೀ ಹರಿಹರೇಶ್ವರರ ಪ್ರತ್ಯಕ್ಷ ಪರಿಚಯ ನನಗಿರಲಿಲ್ಲ. ಅವರು ಕ್ಯಾಲಿಫೋರ್ನಿಯಾ ರಾಜ್ಯದ ಸ್ಟಾಕ್‌ಟನ್ ಪಟ್ಟಣದಲ್ಲಿ ಸುಮಾರು ಎರಡು ದಶಕಗಳಿಂದ ನೆಲೆಸಿದ್ದಾರೆ. ಅವರ ಪತ್ನಿ ಶ್ರೀಮತಿ ನಾಗಲಕ್ಷ್ಮಿ ಕನ್ನಡದಲ್ಲಿ ಎಂ.ಎ., ಸ್ನಾತಕೋತ್ತರ ಪಡೆದವರು. ಶ್ರೀ ಹರಿಹರೇಶ್ವರ ಒಂದು ಸಂಜೆ ಫೋನ್ ಮಾಡಿ ನನ್ನನ್ನು ಮಾತನಾಡಿಸಿದರು. ನನ್ನ ಕೆಲವು ಪುಸ್ತಕಗಳನ್ನು ಮುಖ್ಯವಾಗಿ ಶ್ರೀ ಕುವೆಂಪು ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯ ಸಮೀಕ್ಷೆಯನ್ನು ಅಭ್ಯಾಸ ಮಾಡಿದವರು, ಸಾಹಿತ್ಯಾಭಿಮಾನಿಗಳು. 'ಅಮೆರಿಕನ್ನಡ' ಎಂಬ ಒಂದು ಪತ್ರಿಕೆಯನ್ನು ನಡೆಸಿಕೊಂಡು ಬರುತ್ತಿದ್ದರು. ಸಹೃದಯರು ಅವರ ಮಡದಿಯ ಕೈಗೆ ಫೋನ್‌ಕೊಟ್ಟು,

'ನನ್ನ ಶ್ರೀಮತಿ ಮಾತನಾಡ್ತಾರೆ' ಎಂದರು.

'ನಮಸ್ಕಾರಮ್ಮ, ತುಂಬ ಸಂತೋಷ ಇಲ್ಲಿಯೂ ನಮ್ಮ ಭಾಷೆ ಸಂಸ್ಕೃತಿ ಬಿಟ್ಟಿಲ್ಲ.'

'ನಾನು ನಿಮ್ಮ ಅಭಿಮಾನಿ. ಸ್ವಾಮಿ ವಿವೇಕಾನಂದ ಶತಮಾನೋತ್ಸವದ ಸಂದರ್ಭದಲ್ಲಿ ಏರ್ಪಡಿಸಿದ್ದ ಲೇಖನ/ಭಾಷಣ ಸ್ಪರ್ಧೆಯಲ್ಲಿ ಭಾಗವಹಿಸಿದ್ದೆ. ಬಹುಮಾನವಾಗಿ ನಿಮ್ಮ 'ರಾಮಕೃಷ್ಣರ ದೃಷ್ಟಾಂತ ಕಥೆಗಳು' ಗ್ರಂಥವನ್ನು ಕೊಟ್ಟಿದ್ದರು.....'

ಈ ದಂಪತಿ ಶಿವಮೊಗ್ಗೆಯವರು. ನಮ್ಮ ಪ್ರಸಿದ್ಧ ಸಾಹಿತಿ ಡಾ. ಲಕ್ಷ್ಮಿನಾರಾಯಣಭಟ್ಟರಿಗೆ ದೂರದ ಬಂಧುಗಳಂತೆ. ಶಿವಮೊಗ್ಗೆಯಲ್ಲಿ ಇಬ್ಬರೂ ಕೂಡಿಕಲಿತವರು. ಭಟ್ಟರು ಸಾಹಿತ್ಯಾಬ್ಯಾಸದಲ್ಲಿ ಪ್ರಾವೀಣ್ಯ ಪಡೆದು ಶಿಕ್ಷಣ ಕ್ಷೇತ್ರಕ್ಕೆ ಹೋದರು. ಶ್ರೀ ಹರಿಹರೇಶ್ವರು ಇಂಜಿನಿಯರಿಂಗ್‌ನಲ್ಲಿ ಪ್ರಾವೀಣ್ಯ ಪಡೆದು ಹೇಗೋ ಇಲ್ಲಿಗೆ ಬಂದು ನೆಲೆಸಿದ್ದಾರೆ. ಡಾ.ಲಕ್ಷ್ಮೀನಾರಾಯಣಭಟ್ಟರು ಆಸ್ಟಿನ್‌ಗೆ ಬಂದು ಶ್ರೀ ವೆಂಕಟೇಶ್ ಮತ್ತು ಶ್ರೀಮತಿ ಸಂಧ್ಯಾರ ಮನೆಯಲ್ಲಿ ನಡೆದ ಗೋಷ್ಠಿಯಲ್ಲಿ ಶಿಶುನಾಳ ಷರೀಫರ ಬಗ್ಗೆ ಮಾತನಾಡಿದ ದಿನ ಆ ಸಭೆಗೆ ಹೋಗಿದ್ದೆ. ಭಟ್ಟರ ಮೂಲಕ ನನ್ನ ವಿಚಾರ ತಿಳಿದುಕೊಂಡು ಶ್ರೀ ಹರಿಹರೇಶ್ವರರು ನನ್ನನ್ನು ಸಂಪರ್ಕಿಸಿ ಇಂಟರ್‌ನೆಟ್ ಮೂಲಕ ನನ್ನ ವಿಚಾರ ಈ ಪ್ರಪಂಚಕ್ಕೆ ಬಿತ್ತರಿಸಿ, ಅಜ್ಞಾತವಾಸಕ್ಕಾಗಿ ತಲೆಮರೆಸಿಕೊಂಡು ಬಂದಿದ್ದ ನನ್ನನ್ನು ಇಲ್ಲಿ ಲೋಕಾಂತರ ಮಾಡಿ ಡಾ.ಎಂ.ಮಹೇಶರ ಬಲೆಯಲ್ಲಿ ಹಾಕಿದ್ದರು.

ಡಾ.ಮಹೇಶರ ಆಮಂತ್ರಣವನ್ನು ಒಪ್ಪಿಕೊಂಡು :

'ಆಗಬಹುದು, ಜುಲೈ ಒಂದರ ಸಂಜೆ ಕಾರ್ಯಕ್ರಮ ಏರ್ಪಡಿಸಬಹುದು' ಎಂದೆ.

'ಯಾವ ವಿಚಾರವಾಗಿ ಮಾತನಾಡುತ್ತೀರಿ' ಎಂದರು ಡಾ.ಮಹೇಶ್,

'ನಿಮಗೆ ಇಷ್ಟವಾದ ವಿಚಾರವನ್ನು ನೀವೇ ಸೂಚಿಸಿರಿ.'

'ಸಾಹಿತ್ಯದ ವಿಚಾರ ಮಾತನಾಡಿ'

'ಸಾಹಿತ್ಯ ಏಕೆ ಬೇಕು ? ಬಹುಶಃ ನೀವಲ್ಲಿ ಸೇರುವವರಲ್ಲಿ ಸಾಹಿತ್ಯಜ್ಞರು ಬಹು ವಿರಳ' ಎಂದೆ.

'ಸಾಹಿತ್ಯ ನಮಗೆ ಬೇಕೆ ?' ಎಂಬ ವಿಚಾರವಾಗಿ ಮಾತನಾಡಿ' ಎಂದರು ನನ್ನ ಮಾತನ್ನು ನನಗೇ ತಿರುಗಿಸಿ! ಡಾ.ಮಹೇಶ್ ಜಾನ್ ಹಾಪ್‌ಕಿನ್ಸ್ ಆಸ್ಪತ್ರೆಯಲ್ಲಿ ಮುಖ್ಯ ರೇಡಿಯಾಲಜಿ ವೈದ್ಯರು. ಹಾಪ್‌ಕಿನ್ಸ್‌ನಂಥ ಜಗದ್ವಿಖ್ಯಾತ ಆಸ್ಪತ್ರೆಯಲ್ಲಿ ಉನ್ನತ ಹುದ್ದೆಯಲ್ಲಿರುವ ಅವರು ಸಾಹಿತ್ಯದಲ್ಲಿ ಆಸಕ್ತಿ ಇಟ್ಟುಕೊಂಡಿರುವುದು ನನಗೆ ಆಶ್ಚರ್ಯವನ್ನುಂಟುಮಾಡಿತ್ತು. ಮನುಷ್ಯನ ಅಂಗರಚನೆಯನ್ನು ಕ್ಷ-ಕಿರಣದಿಂದ ಚಿತ್ರತೆಗೆದು ಪರೀಕ್ಷಿಸುವ ಈ ವೈದ್ಯರಿಗೆ ಮನುಷ್ಯನ ಮನಸ್ಸಿನ ಚಿತ್ರ ಬಿಡಿಸುವ ಸಾಹಿತ್ಯದ ವಿಚಾರದಲ್ಲಿ ಆಸಕ್ತಿ ಇರುವುದು ಸೋಜಿಗವೆ ಅನಿಸಿತು. ಆದ್ದರಿಂದಲೇ ನಾನು ಆ ಪ್ರಶ್ನೆ ಕೇಳಿದೆ 'ಸಾಹಿತ್ಯ ಏಕೆ ಬೇಕು ?' ಎಂದು. ಅವರ ಅಪೇಕ್ಷೆಯಂತೆ ಆ ವಿಚಾರವಾಗಿಯೆ ಮಾತನಾಡಲು ಒಪ್ಪಿಕೊಂಡೆ.

ಜುಲೈ 1 ರಂದು ವಾಷಿಂಗ್‌ಟನ್ ಶಹರ ಕೇಂದ್ರದಲ್ಲಿರುವ ಹಾಲಿಡೇ ಇನ್ ಹೋಟೆಲಿನಲ್ಲಿದ್ದವು. ಆ ಬೆಳಿಗ್ಗೆ ಒಂದು ದೂರವಾಣಿ ಕರೆ ಬಂತು. ನನ್ನ ಮಗ ಪ್ರಭುದೇವ ದೂರವಾಣಿಯನ್ನು ಎತ್ತಿಕೊಂಡು ಉತ್ತರಿಸಿ, ನನ್ನ ಕೈಗೆ ಕೊಟ್ಟು: 'ಕರೆ ನಿಮಗೆ' ಅಂದ.

'ನಮಸ್ಕಾರ ಚೆನ್ನಬಸಪ್ಪನವರೆ, ನಾನು ಚಂದ್ರಾ ಬಪ್ಪನಾಡು. ಈ ಸಂಜೆ ಕಾರ್ಯಕ್ರಮ

ನಮ್ಮ ಮನೆಯಲ್ಲಿ...' ಎಂದು ಇಂಗ್ಲೀಷಿನಲ್ಲಿ ಮಾತು ಮುಂದುವರೆಸಿದರು. ನಾನು ಸಹಜವಾಗಿ ಕನ್ನಡದಲ್ಲಿ ಉತ್ತರಕೊಟ್ಟು ಕನ್ನಡದಲ್ಲಿ ಮಾತು ಮುಂದುವರಿಸಿದೆ. ಆ ತುದಿಯಲ್ಲಿ ಮಾತ ನಾಡುತ್ತಿದ್ದ ಆ ತಾಯಿ: 'ನನಗೆ ಕನ್ನಡ ಸರಳವಾಗಿ ಶುದ್ಧವಾಗಿಬಾರದು, ಕ್ಷಮಿಸಿ!' ಎಂದರು.

ನನಗೆ ಆಶ್ಚರ್ಯವಾಯಿತು. ಕನ್ನಡಿಗರಲ್ಲದವರು 'ಕನ್ನಡ ಕಾವೇರಿ'ಯ ಸಂಚಾಲಕರು! ಅಧ್ಯಕ್ಷರು!!

ನಾನು: 'ಪರವಾಯಿಲ್ಲ, ನಿಮ್ಮ ಮಾತಿನಲ್ಲೆ ಮಾತನಾಡಿ ಸಂಕೋಚ ಪಡಬೇಡಿ' ಎಂದೆ.

'ನಾನು ಹುಟ್ಟಿದ್ದು ಆಂಧ್ರಪ್ರದೇಶ ಗುಂಟೂರಿನಲ್ಲಿ, ಬೆಳೆದದ್ದು ಶಿಕ್ಷಣ ಮದ್ರಾಸಿನಲ್ಲಿ, ಮದುವೆ ಆದದ್ದು ದಕ್ಷಿಣ ಕನ್ನಡದವರನ್ನು...!' ಎಂದು ತುಸುವೇ ನಕ್ಕರು. 'ಯಾವ ಭಾಷೆಯಲ್ಲೂ ಪ್ರಭುತ್ವ ಇಲ್ಲ' ಎಂದು ಇಂಗ್ಲೀಷಿನಲ್ಲಿಯೆ ಹೇಳಿದರು.

'ನನಗೆ ತೆಲುಗು ಬರುತ್ತದೆ, ನನ್ನ ಶಿಕ್ಷಣ ಅನಂತಪುರದಲ್ಲಿ, ಪ್ರಾಕ್ಟೀಸ್ ಮಾಡಿದ್ದು ಬಳ್ಳಾರಿಯಲ್ಲಿ, 'ಆಂಧ್ರ ಕಥಾ ಮಂಜೂಷ' ಕನ್ನಡಕ್ಕೆ ಅನುವಾದಿಸಿದ್ದೇನೆ...' ಎಂದು ನಾನು ತೆಲುಗಿನಲ್ಲಿ ಮಾತನಾಡಿದಾಗ: 'ರಾಯಲ್‌ಸೀಮಾ ಶುದ್ಧ ತೆಲುಗೂ ಕೂಡ ನನಗೆ ಬಾರದು' ಎಂದರು ಚಂದ್ರಾ.

ಆ ಸಂಜೆ ಮತ್ತೊಂದು ದೂರವಾಣಿ ಕರೆ: 'ನಾನು ಕೃಷ್ಣಾ ಬಪ್ಪನಾಡು, ಈ ಸಂಜೆಯ ಕಾರ್ಯಕ್ರಮಕ್ಕೆ ನಿಮ್ಮನ್ನು ಕರೆದೊಯ್ಯುತ್ತೇನೆ. ಕಾರ್ ತರಲೆ?'' ಎಂದರು.

'ಬೇಡಿ ಇಲ್ಲಿ ನಾವು ಒಂದು ಕಾರ್ ಬಾಡಿಗೆ ಹಿಡಿದಿದ್ದೇವೆ. ನನ್ನ ಮಗ ಡ್ರೈವ್ ಮಾಡುತ್ತಾನೆ. ನೀವು ದಾರಿ ತಿಳಿಸಿ ಇಂಥಾ ಕಡೆ ಇರುತ್ತೀರಿ ಅಂದರೆ ಅಲ್ಲಿಗೆ ಬರುತ್ತೇವೆ. ಅಲ್ಲಿಂದ ಹೋಗೋಣ' ಎಂದೆ. ಅವರು ಸೂಚಿಸಿದ ಕಡೆಗೆ ನಾವು ಹೋದೆವು. ಶ್ರೀ ಕೃಷ್ಣಾ ಕಾದಿದ್ದರು, ಅವರು ಕಾರಿನಲ್ಲಿ ಕುಳಿತಮೇಲೆ:

'ನೀವು ದಕ್ಷಿಣ ಕನ್ನಡ ಜಿಲ್ಲೆಯವರೆಂದು ನಿಮ್ಮ ಮಡದಿ ಹೇಳಿದರು. ದಕ್ಷಿಣ ಕನ್ನಡದಲ್ಲಿ ಯಾವೂರು ?' ಎಂದೆ.

'ಮೂಲ್ಕಿ...'

'ಸುಂದರ ರಾಮಶೆಟ್ಟರ ಊರು, ಚೆನ್ನಾಗಿ ಗೊತ್ತು, ನಾನು ದಕ್ಷಿಣ ಕನ್ನಡದಲ್ಲಿ ಎರಡು ವರ್ಷ ಇದ್ದೆ.'

'ನಮ್ಮ ಮನೆಮಾತು ತುಳು! ಇಲ್ಲಿಗೆ ಬಂದು ಆಗಲೆ ಕಾಲು ಶತಮಾನ ಆಗುತ್ತಾ ಬಂತು, ಜಾಗತಿಕ ಬ್ಯಾಂಕ್ (World Bank) ನಲ್ಲಿದ್ದೇನೆ...'

ದಕ್ಷಿಣ ಕನ್ನಡದಲ್ಲಿ ಕನ್ನಡ ಉಳಿದಿರುವುದು ತುಳುವರಿಂದ, ಕೊಂಕಣಿಗಳಿಂದ ಎಂದು ದೃಢವಾಗಿ ನಂಬಿರುವ ನನಗೆ ಶ್ರೀ ಕೃಷ್ಣಾ ಅವರು ಕನ್ನಡದ ಬಗ್ಗೆ ಇಲ್ಲಿಯೂ ಆಸಕ್ತಿ ಉಳಿಸಿಕೊಂಡಿರುವುದು ಸಹಜವೇ ಅನಿಸಿದರೂ, ಅವರ ನಿಷ್ಠೆಯ ಬಗ್ಗೆ ಆಶ್ಚರ್ಯವೂ, ಅಭಿಮಾನವೂ ಆಯಿತು. ಅವರ ಮನೆ ತಲುಪಿದಾಗ ಸಂಜೆ 7.20 ಶ್ರೀಮತಿ ಚಂದ್ರಾ, ಬಾಗಿಲು ತೆರೆದು ಬರಮಾಡಿಕೊಂಡರು. ಹತ್ತು-ಹದಿನೈದು ನಿಮಿಷದಲ್ಲಿ ಕಾವೇರಿ ಬಳಗದ ಪ್ರಮುಖರೆಲ್ಲ ಬಂದರು. ಅವರಲ್ಲಿ ಬಹುಜನರು ಮೈಸೂರು ಶಹರ ಅಥವಾ ಜಿಲ್ಲೆಯವರು. ಕೆಲವರು ಹಾಸನ, ಶಿವಮೊಗ್ಗ, ಉತ್ತರ ಕರ್ನಾಟಕದವರೂ ಇದ್ದರು. ಬಹುಜನರು ಕನ್ನಡ ಕಲಿತವರು. ಅವರ ಉತ್ಸಾಹ, ಆಸಕ್ತಿ ಅಭಿಮಾನ ಇನ್ನು ಹೇಳತೀರದು. ಕಾವೇರಿ ಬಳಗದ ಅಧ್ಯಕ್ಷಿಣಿ ಚಂದ್ರಾ, ಸಂಚಾಲಕ ಡಾ.ಮಹೇಶ, ಮಡದಿ ವಸಂತ ಬಂದವರನ್ನೆಲ್ಲಾ ನಮಗೆ ಪರಿಚಯಿಸಿದರು. ಊಟವಾದ ಮೇಲೆ ಗೋಷ್ಠಿ ಪ್ರಾರಂಭವಾಯಿತು.

ನಾನು: 'ಈ ಸಂಜೆ ಇಲ್ಲಿ ಕರ್ನಾಟಕದ ಸಂಕ್ಷಿಪ್ತ ರೂಪವೇ ಸೇರಿದೆ. ಕರ್ನಾಟಕದ ನಿಜವಾದ ಸಂಸ್ಕೃತಿ, ಪರಂಪರೆ, ಸಂಪ್ರದಾಯವನ್ನು ಇಲ್ಲಿಯೂ ಕಾಪಾಡಿಕೊಂಡು ಬಂದಿರುವುದು ಸಂತೋಷ, ಶ್ರೀಮತಿ ಚಂದ್ರಾ ಅವರ ಮಾತೃಭಾಷೆ ತೆಲುಗು, ಅವರ ಪತಿಯ ಮಾತೃಭಾಷೆ ತುಳು, ಇಲ್ಲಿರುವ ಒಬ್ಬಿಬ್ಬರ ಮನೆಮಾತು ಇತರ ಭಾಷೆಯೂ ಇರಬಹುದು. ಇದೇ ಕರ್ನಾಟಕದ ಹಿರಿಮೆ. ಹೀಗೆ ವಿಭಿನ್ನತೆಯಲ್ಲಿ ಐಕ್ಯವನ್ನು ಸಾಧಿಸಿರುವ ಭಾರತದ ಸತ್ ಸಂಪ್ರದಾಯ ಕರ್ನಾಟಕದ ಜೀವ ಜೀವಾಳ. ಇಂದು ಭಾರತ ಒಂದಾಗಿ ಉಳಿಯಬೇಕಾದರೆ ಹೀಗೆ ವೈವಿಧ್ಯದಲ್ಲಿ, ವಿಭಿನ್ನತೆಯಲ್ಲಿ ಐಕ್ಯವನ್ನು ಕಾಪಾಡಿಕೊಳ್ಳುವುದರಿಂದಲೇ ಆಗಬೇಕಾಗಿದೆ.

'ನಾನು ಇಲ್ಲಿ ವಿದ್ವತ್‌ಪೂರ್ಣ ಭಾಷಣ ಮಾಡುವುದಿಲ್ಲ. ನಾನೇನೂ ಪಂಡಿತನಲ್ಲ. ಎಂ.ಎ., ಅಥವಾ ಪಿ.ಹೆಚ್‌ಡಿ., ತರಗತಿಯ ವಿದ್ಯಾರ್ಥಿಗಳಿಗಾಗಿ ಪಾಠಮಾಡುವುದಿಲ್ಲ. ಅಗತ್ಯವೂ ಇಲ್ಲ. ಇದು ಭಾಷಣವೂ ಅಲ್ಲ, Informal ಮಾತುಕತೆ... ಸಾಹಿತ್ಯ ನಮಗೆ ಬೇಕೆ? ಎಂಬ ವಿಚಾರವಾಗಿ ಚಿಂತನೆ ಮಾಡೋಣ... ಮನುಷ್ಯ ವಿಚಾರಶೀಲ ಪ್ರಾಣಿ. ಕಾರಣವಿಲ್ಲದೆ ಅವನು ಏನನ್ನೂ ಮಾಡುವುದಿಲ್ಲ ಹಾಗೂ ಪ್ರಯೋಜನವಿಲ್ಲದೆಯೂ ಏನನ್ನೂ ಮಾಡುವುದಿಲ್ಲ. ನೀವು ನಮ್ಮ ದೇಶ ಬಿಟ್ಟು ಇಲ್ಲಿಗೆ ಬರಬೇಕಾದರೆ ಒಂದು ಉದ್ದೇಶ ಇಟ್ಟುಕೊಂಡೇ ಬಂದಿದೀರಿ. ಅಲ್ಲಿ ಇಲ್ಲದೆ ಇರುವ ಅವಕಾಶ, ಪ್ರಯೋಜನ ಇಲ್ಲಿ ಇದೆ ಅಂತ ಬಂದಿದ್ದೀರಿ. ಹಾಗೆ ಪ್ರಯೋಜನ ಇಲ್ಲದ ಯಾವ ಕೆಲಸವನ್ನೂ ಯಾರೂ ಮಾಡುವುದಿಲ್ಲ. ಇವೊತ್ತು ಇಲ್ಲಿ ನೀವು ಕೆಲಸದ ದಿನ, 20, 30, 40 ಮೈಲುಗಳಿಂದ ಇಲ್ಲಿಗೆ ಬರಬೇಕಾದರೆ ಇಲ್ಲಿಗೆ ಬಂದ್ರೆ ಏನು ಪ್ರಯೋಜನ ಅಂತ ಮನಸ್ಸಿನಲ್ಲಿ ವಿಚಾರ ಮಾಡಿರುತ್ತೀರಿ. ಏನೋ ಕರೆದಿದ್ದಾರೆ ಅಂತ ನಿಮ್ಮ ವೇಳೆ, ಶ್ರಮ, ಹಣ ಖರ್ಚು ಮಾಡಿಕೊಂಡು ಮುಲಾಜಿಗಾಗಿ ಇಷ್ಟು ಜನ ಬಂದಿರಲಾರಿರಿ. ಸಾಹಿತ್ಯ ನಮಗೇಕೆ ಬೇಕು ? ಅದರಿಂದ ಏನು ಪ್ರಯೋಜನ ? ಅಂತ ನೀವು ಪ್ರಶ್ನೆ ಮಾಡಿಕೊಂಡೇ ಇರ್ತೀರಿ. ಅತ್ಯಂತ ಮೂಢ ನಂಬುಗೆಯಿಂದ ಆಚರಿಸುವ ಆಚರಣೆಗಳಲ್ಲಿ ಒಂದು ಪ್ರಯೋಜನ ಉದ್ದೇಶ ಇದ್ದೇ ಇರ್ತದೆ ! ಸಾಹಿತ್ಯ ನಮಗೆ ಬೇಕೆ? ಎಂಬ ಪ್ರಶ್ನೆಗೆ ಉತ್ತರ ಸಿಗಬೇಕಾದರೆ ಸಾಹಿತ್ಯ ಅಂದ್ರೇನು ಅಂತ ಸ್ಥೂಲವಾಗಿ ತಿಳಿಯಬೇಕು. ನಾನು ಕಾವ್ಯ ಮೀಮಾಂಸೆಯ ಮಾತಿನಲ್ಲಿ ಮಾತನಾಡುವುದಿಲ್ಲ.

'ಸಾಹಿತ್ಯ ಅಂದ್ರೆ ಸವಿಯಾದ ಮಾತು ಅಥವಾ ಕಹಿಯಾದರೂ ಕೇಳಿದವರಿಗೆ ಹಿಡಿಸುವಂತೆ ಹೇಳುವ ಮಾತು ಅಂತ ಇಟ್ಟುಕೊಳ್ಳಬಹುದು. ಹಿತ ಸಹಿತವಾದ ಮಾತು ಸಾಹಿತ್ಯ ಅಂತ ಬೇಕಾದ್ರೂ ಇಟ್ಟುಕೊಳ್ಳಬಹುದು. ಹೇಳುವ ಮಾತು ಕಿವಿಗೆ ಇಂಪಾಗಿ ಹೃದಯಕ್ಕೆ ತಂಪಾಗಿ ಇದ್ದರೆ ಸಾಹಿತ್ಯ ಅನ್ನಬಹುದು. ಇನ್ನೂ ಸ್ವಲ್ಪ ಶಾಸ್ತ್ರಿಯವಾಗಿ ಹೇಳಬೇಕೆಂದರೆ ಹೇಳುವ ಮಾತಿನಿಂದ ಕೇಳುವವರಿಗೆ ರಸಾನುಭವ ಉಂಟಾದ್ರೆ ನವರಸಗಳಲ್ಲಿ ಯಾವುದಾದರೂ ಅಥವಾ ಎಲ್ಲದರ ಅನುಭವ ಉಂಟಾದ್ರೆ ಅದನ್ನು ಸಾಹಿತ್ಯ ಅನ್ನಬಹುದು. ಸೀತಾಪಹರಣದ ಕಥಾಭಾಗ ಓದಿದರೆ, ಚಂದ್ರಮತಿಯ ಶಿರಚ್ಛೇದನ ಕತೆ ಓದುವಾಗ ಹೃದಯಕ್ಕೆ ತಂಪು ಎಲ್ಲಿಂದ ಬಂತು? ತಳಮಳ ಆಗ್ತದೆ, ಸಂಕಟ ಆಗ್ತದೆ. ದ್ರೌಪದಿ ವಸ್ತ್ರಾಪಹರಣ ಕಥಾ ಭಾಗ ಓದಿದರೆ ಹೃದಯಕ್ಕೆ ತಂಪಾಗ್ತದೆಯೇ? ಆದರೂ ಆ ಕಥೆಗಳನ್ನು ಆಸಕ್ತಿಯಿಂದ ಓದುತ್ತೇವೆ. ಯಾಕೆ ?

'ಅಂದರೆ ಕಾವ್ಯದ, ಸಾಹಿತ್ಯದ ಉದ್ದೇಶ ಏನು? ಅನ್ನುವ ಇನ್ನೊಂದು ಪ್ರಶ್ನೆ ಎದುರಾಗುತ್ತದೆ. ಕನ್ನಡದ ಒಬ್ಬ ದೊಡ್ಡ ಕವಿ ತನ್ನ ಕಾವ್ಯದ ಉದ್ದೇಶ: 'ಇದು ಒಳ್ಳೆಯದು; ಇದು ಕೆಟ್ಟದ್ದು ಎಂಬುದನ್ನು ತಿಳಿಸುವುದು' ಎನ್ನುತ್ತಾನೆ. ಒಳ್ಳೆಯದು ಕೆಟ್ಟದ್ದು ಎಂಬುದು ಎಂಥ ದಡ್ಡನಿಗೂ, ನೀಚನಿಗೂ ಗೊತ್ತಾಗುತ್ತದೆ. ಸಣ್ಣ

ಮಕ್ಕಳಿಂದ ಹಿಡಿದು, hardened criminalsವರೆಗೆ ಒಳ್ಳೆಯದು ಕೆಟ್ಟದ್ದು ಗೊತ್ತಾಗುತ್ತದೆ. ಶಾಲೆಗೆ ಹೋಗೋ ಮಗುವನ್ನು ಕುರಿತು: 'ಯಾಕೊ ಅವನ ಪುಸ್ತಕ ತಗೊಂಡೇ? ಅವನ ಪೆನ್ಸಿಲ್ ಕದ್ದೆ?' ಎಂದರೆ 'ಇಲ್ಲ! ಸುಳ್ಳು!' ಎಂದು ಉತ್ತರ ಕೊಡುತ್ತದೆ. ಹಾಗೇನೆ ಅಪರಾಧಿ ಕಟಕಟೆಯಲ್ಲಿ ನಿಂತಿರುವ ಕೊಲೆಗಾರರನ್ನು, ಒತ್ತಟ್ಟಿಗೆ ಕರೆದು ಗುಟ್ಟಾಗಿ ಕೇಳಿದರೆ ತಾನು ಮಾಡಿದ್ದು ಸರಿಯೆ ತಪ್ಪೆ ಅಂತ ಹೇಳ್ತಾನೆ. ಹಾಗಾದರೆ 'ಇದು ಸರಿ ಇದು ತಪ್ಪು' ಅಂತ ಈ ಕವಿ ಅನ್ನೋ ಬೊಮ್ಮಪ್ಪ -ಕವಿ ಅಂದ್ರೆ ಬ್ರಹ್ಮ-ಹೇಳಬೇಕೆ? ಅದೇ ವ್ಯತ್ಯಾಸ. ಎಲ್ಲರಿಗೂ ಗೊತ್ತಿರುವ ವಿಚಾರವನ್ನೇ ಕವಿ-ಸಾಹಿತಿ -ಸೊಗಸಾದ ಮಾತಿನಲ್ಲಿ, ಕೇಳಿದವರು: 'ಬೇಷ್' 'ಬಹಳ ಸೊಗಸಾಗಿ ಹೇಳಿದ್ದಾರೆ' ಎನ್ನುವಂತೆ ಹೇಳುತ್ತಾನೆ. ಆಗ ಅದು ಮನಸ್ಸಿಗೆ ನಾಟುತ್ತದೆ. 'ಸತ್ಯವನ್ನೇ ಆಡಬೇಕು' ಎಂಬ ಮಾತನ್ನು 'ಗೋವಿನಕತೆ'ಯಲ್ಲಿ ಹೇಳಿದಾಗ ಜನ ಒಮ್ಮೊಮ್ಮೆ ಕಣ್ಣೀರು ತರುತ್ತಾರೆ. ಹರಿಶ್ಚಂದ್ರನ ಕತೆ ಕೇಳಿದಾಗ ಕಣ್ಣೀರು ತರ್‍ತಾರೆ. ಹಾಗೆ 'ಕಣ್‌ಕಣ' ತರಿಸುವ ಸೊಗಸಾದ ರೀತಿಯಲ್ಲಿ ಹೇಳಿದರೆ ಅದು ಮನಸ್ಸಿಗೆ ನಾಟುತ್ತದೆ.

'ಹೌದು, ಅದನ್ನು ಕೇಳಿ ಏನು ಪ್ರಯೋಜನ? ಮತ್ತೆ ಪ್ರಶ್ನೆ ಎದುರಾಗುತ್ತದೆ. ಕನ್ನಡದ ಇನ್ನೊಬ್ಬ ದೊಡ್ಡ ಕವಿ-ರಾಘವಾಂಕ-ಹೇಳ್ತಾನೆ: 'ಜನ ಬದುಕ ಬೇಕೆಂದು ಕಾವ್ಯ ಮುಖದಿಂ ಪೇಳ್ದೆ ಅನಪೇಕ್ಷೆಯಿಂ' ಎಂದು. ತನ್ನ ಕಾವ್ಯ ಓದಿ ಜನ ಬದುಕಬೇಕೆಂಬುದು ಆ ಕವಿಯ ಅಪೇಕ್ಷೆ. ಯಾವ ಪ್ರತಿಫಲಾಕಾಂಕ್ಷೆಯೂ ಇಲ್ಲದೆ ಹರಿಶ್ಚಂದ್ರ ಕಾವ್ಯ ಬರೆದನಂತೆ! ಪುಸ್ತಕ ಬರೆದರೆ, ಬರೆದವರಿಗೆ ಸ್ವಲ್ಪ ಬದುಕುವ ದಾರಿ ಸಿಕ್ಕೀತು. ಆದರೆ ಓದಿದವರಿಗೆ ಏನು ಪ್ರಯೋಜನ. ಹಾಗೆ ಪುಸ್ತಕ ಓದಿ ಬದುಕ ಬಹುದಾಗಿದ್ದರೆ-ಹೊಟ್ಟೆಗೆ ಅನ್ನ, ಮೈಗೆ ಬಟ್ಟೆ ಸಿಗಬಹುದಾಗಿದ್ದರೆ - ಈ ಕಡುಕಷ್ಟವೆ ಬೇಕಾಗಿರಲಿಲ್ಲ.

ಆಗ ಇನ್ನೊಂದು ಪ್ರಶ್ನೆಗೆ ಉತ್ತರ ಹುಡುಕಬೇಕು ? ಜನ ಬದುಕುವುದು ಅಂದ್ರೆ ಹೊಟ್ಟೆ ಬಟ್ಟೆಗೆ ಗಳಿಸಿಕೊಳ್ಳೋದು. ಚೆನ್ನಾಗಿ ಉಂಡು ಉಟ್ಟು ಮಜಾ ಮಾಡೋದೆ ಬದುಕುವುದೇನು? ಈ ದೇಶದಲ್ಲಿ ಅದಕ್ಕೇನು ಕೊರತೆ? ಅಲ್ಲಿಂದ ಬಂದಿರುವ ನಿಮಗೇನು ಕೊರತೆ? ಅಂದರೆ ಎಲ್ಲಿಗೆ ಬಂತು? ಮನುಷ್ಯನಿಗೆ ಹೊಟ್ಟೆ ಬಟ್ಟೆ ತುಂಬಿದರೂ ಇನ್ನೂ ಏನೋ ಒಂದು ಬೇಕೆನಿಸುತ್ತದೆ. ಪ್ರಾಪಂಚಿಕ ಸುಖ ಕಟ್ಟರೆ ಆಗುವಂತೆ ಉಂಡರೂ ಈ ದೇಶದ ಜನ ಮನಸ್‌ಶಾಂತಿಗಾಗಿ ಏನೇನೋ ಮಾಡುತ್ತಿರುವುದನ್ನು ನೀವು ನೋಡುತ್ತಿದ್ದೀರಿ. ಊಟ ಮಾಡಿ ಹೊಟ್ಟೆ ಬಿರಿದಿದ್ದರೂ, ಇನ್ನೂ ಸುಖ ಸಂತೋಷ ಬೇಕು ಅಂತ ಕುಡೀತಾನೆ; ಸಿಗರೇಟ್ ಸೇದುತ್ತಾನೆ. ಈ ದೇಶದ ಬಹುದೊಡ್ಡ ಸಮಸ್ಯೆಯಾಗಿರುವ ಅನಿರ್ಬಂಧ ಲೈಂಗಿಕ ಸಂಪರ್ಕದಲ್ಲಿ ಸುಖಕಾಣಲು ಪ್ರಯತ್ನಿಸುತ್ತಾನೆ! ಈ ದೈಹಿಕ ಸುಖ ಕ್ಷಣಿಕ. ಆ ಮದುಪಾನದಿಂದ ಮೈಮರೆತು ಕ್ಷಣಕಾಲ ಸುಖ ಕಾಣ್ತಾನೆ ಮತ್ತು ಇಳಿದ ಕೂಡಲೇ ಮನಸ್ಸು ತಳಮಳಗೊಳ್ಳುತ್ತದೆ! ಈ ಮನಸ್ಸಿಗೆ ಶಾಂತಿ ಸಿಗುವುದು ಹೇಗೆ ? ಸಂತೋಷ ಹೇಗೆ ಸಿಕ್ಕೀತು ? ಇದು ಮನುಷ್ಯನ ಪ್ರಥಮ ಆಸಕ್ತಿಯೂ ಆಗಿತ್ತು, ಅವನ ಅಂತ್ಯ ಆಸಕ್ತಿಯೂ ಅದೇ ಎಂದು ಶ್ರೀ ಅರವಿಂದರು ಹೇಳ್ತಾರೆ. ಅದಕ್ಕಾಗಿ ಮನುಷ್ಯ ದೈವ, ದೇವರು, ಪ್ರೇಮ, ಜ್ಯೋತಿ, ಸತ್ಯ... ಇತ್ಯಾದಿಗಳತ್ತ ತಿರುಗುತ್ತಾನೆ. ಆ ಸುಖ, ಶಾಂತಿ ಹೇಗೆ ಸಿಕ್ಕೀತು? ಎನ್ನುವುದೇ ಮಾನವನ ಎಡೆಬಿಡದ ಹಾರೈಕೆ. ಮನಸ್ಸನ್ನು ತಣಿಸಿದರೆ ಸುಖಶಾಂತಿ ಸಿಕ್ಕೀತು ಎಂದು ಮನುಷ್ಯ ಅನ್ವೇಷಣೆ ಮಾಡುತ್ತಿದ್ದಾನೆ. ಮನಸ್ಸನ್ನು ತಣಿಸುವ, ಸಮಾಧಾನ ಪಡಿಸುವ ಒಂದು ಸಾಧನ ಈ ಸಾಹಿತ್ಯ. ಸಾಹಿತ್ಯದಿಂದಾಗುವ ಕೆಲಸ ಸಂಗೀತ, ನೃತ್ಯ, ಶಿಲ್ಪ, ಚಿತ್ರ ಮುಂತಾದ ರಾಗಭಾವಗಳನ್ನು ಸಂಸ್ಕರಿಸುವ ಇತರ ಸಾಧನದಿಂದಲೂ ಆಗುತ್ತದೆ. ಆದರೆ ಆ ಕೆಲಸ ಮಾತಿನಿಂದ ಆಗುವಷ್ಟು ಸುಲಭವಾಗಿ, ಪರಿಣಾಮಕಾರಿಯಾಗಿ ಇತರ ಸಾಧನಗಳಿಂದ ಆಗಲಾರದು.

'ಈಗ ನೀವೇ ಹೇಳಿ ನಮಗೆ ಸಾಹಿತ್ಯ ಬೇಕೆ? ಬೇಡವೆ? ಅಂತ. ಯಾರೋ ಒಬ್ಬ ಸರ್ವಜ್ಞನ ಶತ್ರು : 'ಸಾಹಿತ್ಯ ಎಲ್ಲರಿಗೆ ಇಲ್ಲ ಸರ್ವಜ್ಞ' ಎಂದು ಸರ್ವಜ್ಞನ ತಲೆಗೇ ಈ ಅವಿವೇಕದ ಮಾತನ್ನು ಕಟ್ಟಿ ಹಾಕಿದ್ದಾನೆ. ನನ್ನ ಕೇಳಿದರೆ : 'ಸಾಹಿತ್ಯ ಎಲ್ಲರಿಗೆ ಬೇಕು. ಯಾರಿಗೆ ಬೇಡ ಸರ್ವಜ್ಞ' ಎನ್ನುತ್ತಾನೆ. ವೇದೋಪನಿಷತ್ತಿನ ಸತ್ಯಗಳನ್ನು ಕಿವಿಯಿದ್ದವರೆಲ್ಲ ಕೇಳಲಿ ಎಂದು ಆ ಪರಮ ಕರುಣಾ ಸಿಂಧು ದಾಸರು, ಕಾಲಿಗೆ ಗೆಜ್ಜೆ ಕಟ್ಟಿಕೊಂಡು, ತಾಳತಂಬೂರಿ ಹಿಡಿದುಕೊಂಡು ಬೀದಿಯಲ್ಲಿ ಕುಣಿ ಕುಣಿದು ದೈವ ಸಂಕೀರ್ತನೆ ಮಾಡುತ್ತಾ ಹೋದರು. ಯಾಕೆ? 'ಜನಬದುಕ ಬೇಕೆಂದು' ಹಾಗೆ ಮಾಡಿದರು. ನೀವು ಈ ಸಂಪತ್ತಿನ ವಾರಾಣಸಿಯಲ್ಲೇ ಇದ್ದರೂ ಸಾಹಿತ್ಯದ ಬಗ್ಗೆ ಆಸಕ್ತಿ ಇಟ್ಟುಕೊಂಡಿರುವುದು ಇದೇ ಕಾರಣಕ್ಕೆ...'

ಸರಿಯಾಗಿ ಒಂದು ಗಂಟೆ ಮಾತನಾಡಿದ ಮೇಲೆ ಬಂದಿದ್ದವರೆಲ್ಲ ನನ್ನ ಸುತ್ತ ಮುಕುರಿದರು. ವಾಷಿಂಗ್‌ಟನ್ ಸುತ್ತ ಮುತ್ತ ಇನ್ನೂ ಮೂರು ನಾಲ್ಕು ಕಡೆ ನನ್ನನ್ನು ಕರೆದರು... ಅವರ ಪ್ರೀತಿ ವಿಶ್ವಾಸಗಳಿಗಾಗಿ ನಾನು, ನನ್ನ ಮಡದಿ, ಮಗ ಪ್ರಭುದೇವ, ಸೊಸೆ ಸುಚೇತಾಳ ಪರವಾಗಿ ಅವರಿಗೆ ಕೃತಜ್ಞತೆ ಅರ್ಪಿಸಿದೆ. ನಾವು ಜುಲೈ 5ರ ಬೆಳಗ್ಗೆ ವಾಷಿಂಗಟನ್ ಬಿಡಲೇಬೇಕಾದ್ದರಿಂದ ಇತರ ಕಡೆ ಹೋಗಲಾಗಲಿಲ್ಲ. ನಾವು ಹಿಂದಿರುಗಿ ಬಂದ ಮೇಲೆ ಅವರಿಗೆ ಕೃತಜ್ಞತಾ ಪತ್ರಗಳನ್ನು ಬರೆದೆವು. ಅವರೂ ಮಾತನಾಡಿಸಿದರು.

ಹೀಗೆ ಸಾಹಿತ್ಯದ ಬಗ್ಗೆ ಇಲ್ಲಿ ಆಸಕ್ತಿ ಇದೆ. ಸಾಹಿತ್ಯ ಎಂದರೆ ಕೇವಲ ಕನ್ನಡ ಸಾಹಿತ್ಯವೆಂದೇ ಅಲ್ಲ ಎಂಬುದನ್ನು ಹೇಳದೆ ಬಿಡಲಿಲ್ಲ. ಆದರೆ ನಮಗೇಕೆ ಕನ್ನಡದ ಮೇಲೆ ಪ್ರೀತಿ ಎಂದರೆ, ಅದು ನಮಗೆ ತಿಳಿಯುತ್ತದೆ. ಅದರಿಂದ ಮನಸ್ಸು ಹದವಾಗುತ್ತದೆ ; ಮುದವಾಗುತ್ತದೆ. ಆದ್ದರಿಂದಲೇ ಕುವೆಂಪು ಅವರು 'ಎಲ್ಲಾದರು ಇರು ಎಂತಾದರು ಇರು ಎಂದೆಂದಿಗೂ ನೀ ಕನ್ನಡವಾಗಿರು' ಎಂಬ ಮಾತಿನ ಅಂತರಾರ್ಥವನ್ನು ಬಿಡಿಸಿಹೇಳಿದೆ. ಅದು ಅವರಿಗೆ ಹಿಡಿಸಿತೆಂದು ನಾನು ಎಣಿಸಿದೆ. ■




ಸಹಕಾರಿ ಸಂಘದಲ್ಲಿ ಈಗ ಬ್ಲಾಕ್‌ನಲ್ಲಿ 'ಎಣ್ಣೆ' ಸಿಗುತ್ತೆ ಅಂತ ಕೇಳಿ ಇಲ್ಲಿ ಬಂದ್ರೆ ಇದು ಪಾಮಾಯಿಲ್ ನಾಗಾಯ್ತು......!

# ನಮ್ಮ ರಾಮಣ್ಣ : ಫೇರ್ ಅಂಡ್ ಲವ್ಲೀ



**ಕರ್ನಾಟಕದ ಬೇರೆ ಬೇರೆ ಹಳ್ಳಿಗಳಿಂದ ಬಂದು ಏನೇನೋ ಕಾರಣಗಳಿಂದಾಗಿ ಬೆಂಗಳೂರು ಸೇರಿಕೊಂಡ ನಮ್ಮ ಅನೇಕ ಗ್ರಾಮಾಂತರ ಸಾಹಿತಿಗಳು ರಾಜಧಾನಿಯ ಹೊಗೆ ಬಡಿಸಿಕೊಂಡು ಮಾತಿನಲ್ಲಿ ಮೌನದಲ್ಲಿ ಮುಖದ ಚಹರೆ ಪಟ್ಟಿಯಲ್ಲಿ ದಿನನಿತ್ಯದ ವ್ಯವಹಾರದಲ್ಲಿ ರಾಜಧಾನಿಯ ಟಿಪಿಕಲ್ ಒನ್-ಬೈ-ಟೂ ತನವನ್ನು ಆವಾಹನೆ ಮಾಡಿಕೊಂಡಿರುವಾಗ, ಮೈಸೂರು-ಬೆಂಗಳೂರುಗಳ ಅಡಕತ್ತಿನಲ್ಲಿ ಸಿಕ್ಕಂತಿರುವ ಮಂಡ್ಯ ಜಿಲ್ಲೆಯ ರಾಮಣ್ಣ ಕೊನೆಯವರೆಗೂ ಮಂಡ್ಯದ ಮಣ್ಣಿನ ಮಗನಾಗಿಯೇ**

■ ಚಂದ್ರಶೇಖರ ಪಾಟೀಲ

**24** ಜುಲೈ 1998. ನಾನು, ಭಕ್ತರಹಳ್ಳಿ ಕಾಮರಾಜ ಮತ್ತು ಪ್ರಹ್ಲಾದ ಬೆಟಗೇರಿ ಮದ್ದೂರು ತಾಲೂಕಿನ ದೇಶಹಳ್ಳಿ ತಲುಪಿದಾಗ ಆಗಲೇ ಬೆಸಗರಹಳ್ಳಿ ರಾಮಣ್ಣ ತೀರಿಕೊಂಡ ನಂತರದ 'ಭೂಶಾಂತಿ' ಕಾರ್ಯಕ್ರಮ ಮುಗಿಯುವ ಹಂತಕ್ಕೆ ಬಂದಿತ್ತು. (ನಮ್ಮ ಕಡೆ 'ದಿನ ಮಾಡುವುದು', 'ಒಳಗೆ ತಗೊಳ್ಳುವುದು' ಅನ್ನುತ್ತಾರೆ. ಮಣ್ಣು ತಪ್ಪಿಸಿಕೊಂಡರೂ ದಿನಾ ತಪ್ಪಿಸಬಾರದು ಎಂಬ ನಂಬಿಗೆ). ಊರ ಮುಂದಿನ ಹೊಲ. ಕಪ್ಪು ನೆಲ. ಸುತ್ತೆಲ್ಲ ಹಸಿರು ತುಳುಕುತ್ತಿದೆ. ಅಲ್ಲಿ ಒಂದು ಕಡೆ ಸ್ವಲ್ಪ ಆಳದಲ್ಲಿ ರಾಮಣ್ಣ ಕುಳಿತಿದ್ದಾನೆ. ಬೇರೆ ಬೇರೆ ಕಡೆಯಿಂದ ಬಂದ ಗೆಳೆಯರು ಬೀಗರು ಬಿಜ್ಜರು ಅಗಲಿಹೋದ ರಾಮಣ್ಣನಿಗೆ ಶ್ರದ್ಧಾಂಜಲಿ ಸಲ್ಲಿಸುತ್ತಿದ್ದಾರೆ.

ಹತ್ತಿರದಲ್ಲಿಯೇ ಹಾಕಿದ್ದ ಶಾಮಿಯಾನಾದಲ್ಲಿ ಗಮಕ ಕಲಾವಿದ ನಾರಾಯಣಗೌಡರಿಂದ ಕುವೆಂಪು ಅವರ ರಾಮಾಯಣ ದರ್ಶನಂ ಮಹಾಕಾವ್ಯದ ಗಂಭೀರ ವಾಚನ. ಭೂಮಿ, ಆಕಾಶ, ಸಾವಿನ ನೆನಪು, ಕಾವ್ಯ, ನೋವು-ಎಲ್ಲವುಗಳ ಸಂಗಮದ ಕ್ಷಣ ಅದು.

ಮಗ್ಗುಲಲ್ಲಿ ಕುಳಿತಿದ್ದ ವೈ.ಕೆ. ರಾಮಯ್ಯ ಹೇಳುತ್ತಿದ್ದರು: ಚಂಪಾ ಅವರೆ,ನಮ್ಮ ಕಡೆ ಒಂದು ಜನಪದ ನಂಬಿಕೆ ಇದೆ. ಭೂಶಾಂತಿ ಮುಗಿದು ಸ್ಥಳ ನಿರ್ಜನವಾದ ಮೇಲೆ ಹಕ್ಕಿಗಳೆಲ್ಲಾ ಬಂದು ಸಮಾಧಿ ಮೇಲೆ ಇಟ್ಟ ಭಕ್ಷ್ಯ-ಭೋಜ್ಯಗಳನ್ನು ತಿನ್ನಬೇಕು. ಅಂದರೆ ಆ ಮನುಷ್ಯ ಬದುಕಿದ್ದಾಗ ಒಳ್ಳೆಯ ಕೆಲಸ ಮಾಡಿದ್ದ ಅಂತ ಅರ್ಥ. ಅವನು ಕೆಟ್ಟವನಾಗಿದ್ದರೆ ಹಕ್ಕಿಗಳಿಗೂ ಕೂಡ ಅವನು ಬೇಡವಾದಂತೆ. ಈ ಬಗ್ಗೆ ಒಂದು ಗಾದೆಯ ಮಾತೇ ಇದೆ.

ಅವರ ಮಾತು ಮುಗಿಯುತ್ತಿದ್ದಂತೆಯೇ ಸುತ್ತುಮುತ್ತಲಿನ ಗಿಡಮರಗಳಲ್ಲಿ ಜಪ್ಪಿಸಿ ಕುಂತಿದ್ದ ಹದ್ದು, ಕಾಗೆ, ಇತರ ಪಕ್ಷಿಗಳು ಒಂದೊಂದಾಗಿ ಗಾಳಿಯಲ್ಲಿ ಭಂವ್ ಅಂತ ಜೋಕಾಲಿ ಜೀಕಿ ಸಮಾಧಿಯ ಮೇಲಿನ ಸಾಮಾನುಗಳನ್ನು ಚುಂಚಿನಲ್ಲಿ ಕಚ್ಚಿಕೊಂಡು ಮತ್ತೆ ಗಿಡ ಸೇರತೊಡಗಿದ್ದವು. ಜನ ಜಾಗ ಖಾಲಿ ಮಾಡಿದಂತೆ ಹಕ್ಕಿಗಳ ಹಾರಾಟ ಜೋರು. ಒಂದೊಂದು ಹಕ್ಕಿಯದೂ ಒಂದೊಂದು ಅರ್ಧ ವರ್ತುಳ. ಸರ್ಕಸ್ಸಿನ ತಂಬೂವಿನಲ್ಲಿ ಜೋಕಾಲಿಗಳು ಜೀಕಿದಂತೆ. ಕಣ್ಣಿಗೆ ಕೀಳಿಸುವಂತೆ ನನ್ನ ಎದುರೇ ನಿರ್ಮಿತವಾದ ಬದುಕು-ಸಾವು, ಮನುಷ್ಯ-ನಿಸರ್ಗ, ಭೂಮಿ-ಆಕಾಶದ ನಂಟುಗಳ ಈ 'ಲಯ'ವನ್ನು ಮೂಕನಾಗಿ ನೋಡಿದೆ. ಮನುಷ್ಯನ ಅಸ್ತಿತ್ವದ ಸಾವಿರಾರು ವರ್ಷಗಳ ಸೆಳವಿನಲ್ಲಿ ಮಡುಗಟ್ಟಿ ನಿಂತ ಇಂಥ ನಂಬಿಕೆಗಳ ಹಿಂದಿನ ಜೀವಪರ ತಿಳಿವನ್ನು ನೆನೆಯುತ್ತ ನನ್ನ 'ರ್‍ಯಾಶನಲ್' ಬುದ್ಧಿಯನ್ನು ಒಂದಿಷ್ಟು ಹೊತ್ತು ಅರಗು ಮಾಡಿ ಇಟ್ಟದ್ದೆ.

ಆ ಪಕ್ಷಿಗಳ ಬೀಸು ಹೇಳುತ್ತಿತ್ತು: ನಮ್ಮ ರಾಮಣ್ಣ ಬದುಕಿದ್ದಾಗ ಎಂಥಾ ಒಳ್ಳೆಯ ಮನುಷ್ಯನಾಗಿದ್ದನಲ್ಲ, ಅಂತ.

●

ರಾಮಣ್ಣ ಅಂದರೆ ರಾಮಣ್ಣನೇ.

ಕನ್ನಡ ಸಾಹಿತ್ಯ ನವ್ಯದ ಹಂಗು ಹರಕೊಂಡು ಹೊಸ ಜೀವ ಪಡೆಯಲು ಹವಣಿಸಿದ್ದು ಅರವತ್ತರ ದಶಕದಲ್ಲಿ. ಅಡಿಗ-ಅನಂತಮೂರ್ತಿ-ಶರ್ಮಾದಿಗಳು ನವ್ಯದ ಮಟಮಟ ಮದ್ಯಾಣದಲ್ಲಿ ಮಿರಿಮಿರಿ ಮಿಂಚುತ್ತ ಉರಿಯುತ್ತಿದ್ದ ಕಾಲವದು. ಆ ದಿನಗಳಲ್ಲಿ - (ಎಪ್ಪತ್ತರ ದಶಕದ ಕೊನೆಯಲ್ಲಿ ಬಂಡಾಯ ಸಾಹಿತ್ಯಘಟ್ಟ ಅಧಿಕೃತವಾಗಿ ಪ್ರಾರಂಭವಾಗುವ ಎಷ್ಟೋ ವರ್ಷ ಮೊದಲೇ)-ಮುಖ್ಯವಾಗಿ ಕತೆ-ಕಾದಂಬರಿಗಳಲ್ಲಿ ವಿಭಿನ್ನವಾದ ನಾದ ಮೂಡಿಸಿದವರು ಮೂವರು : ತೇಜಸ್ವಿ ಲಂಕೇಶ ಮತ್ತು ಬೆಸಗರಹಳ್ಳಿ ರಾಮಣ್ಣ.

ತೇಜಸ್ವಿ ಲಂಕೇಶರಿಗಿಂತ ವಯಸ್ಸಿನಲ್ಲಿ ರಾಮಣ್ಣ ಸಣ್ಣವರು. ಅವರಿಬ್ಬರೂ (ಅನಂತಮೂರ್ತಿಯೊಂದಿಗೆ) ಜಂಟಿಯಾಗಿ ಷಷ್ಟ್ಯಬ್ದಿ ಸಮಾರಂಭ ಮಾಡಿಸಿಕೊಂಡು ಅನೇಕ ವರ್ಷಗಳಾಗಿವೆ. ರಾಮಣ್ಣ ಬದುಕಿದ್ದರೆ ಈ ಅಗಸ್ಟ ಹದಿನೈದಕ್ಕೆ ಅರವತ್ತು ತುಂಬುತ್ತಿತ್ತು. ನಾಡಿನುದ್ದದ ಗೆಳೆಯರ ವಲಯದಲ್ಲಿ ರಾಮಣ್ಣನೊಬ್ಬನೇ ಅಣ್ಣಾ ಅಂತ ಕರೆಸಿಕೊಳ್ಳುವ ಯೋಗ್ಯತೆ ಇದ್ದವನು. ಉಳಿದ ಇಬ್ಬರು ತಾವೇ ನಿರ್ಮಿಸಿಕೊಂಡ ಜೇಡರ ಬಲೆಗಳಲ್ಲಿ ಬಂದಿಗಳು. ಅವರ ಬಗ್ಗೆ ಏಕವಚನದಲ್ಲಿ ಮಾತಾಡಲಿಕ್ಕೂ ಬರೆಯಲಿಕ್ಕೂ ಮುಜುಗರ, ಸಂಕೋಚ, ಭಯ. ಅಕಾಡೆಮಿಯ ಸಲಹಾ ಮಂಡಲಿಯ ಸಭೆಗೆಂದು ಬೆಂಗಳೂರಿಗೆ ಬಂದ ರಾಮಣ್ಣನಿಗೆ, ಸಭೆ ನಡೆ

ದಾಗಲೇ, ಸ್ಟ್ರೋಕ್ ಆಯಿತು. ಮುಂದೆ ನಾಲ್ಕೈದು ದಿನದಲ್ಲಿ (13.7.1998) ರಾಮಣ್ಣ ಮಂಡ್ಯದ 'ನೆಲದ ಒಡಲು' ಸೇರಿದ್ದು 'ದಿವಂಗತ' ಬೆಸಗರಹಳ್ಳಿ ರಾಮಣ್ಣನಾಗಿ.

ತೇಜಸ್ವಿ ಲಂಕೇಶರಿಗಿಂತ ವಯಸ್ಸಿನಲ್ಲಿ ರಾಮಣ್ಣ ಸಣ್ಣವರು. ಅವರಿಬ್ಬರೂ (ಅನಂತ ಮೂರ್ತಿಯೊಂದಿಗೆ) ಜಂಟಿಯಾಗಿ ಷಷ್ಠ್ಯಬ್ದಿ ಸಮಾರಂಭ ಮಾಡಿಸಿಕೊಂಡು ಅನೇಕ ವರ್ಷಗಳಾಗಿವೆ. ರಾಮಣ್ಣ ಬದುಕಿದ್ದರೆ ಈ ಆಗಸ್ಟ ಹದಿನೈದಕ್ಕೆ ಅರವತ್ತು ತುಂಬುತ್ತಿತ್ತು. ನಾಡಿನುದ್ದದ ಗೆಳೆಯರ ವಲಯದಲ್ಲಿ ರಾಮಣ್ಣನೊಬ್ಬನೇ ಅಣ್ಣಾ ಅಂತ ಕರೆಸಿಕೊಳ್ಳುವ ಯೋಗ್ಯತೆ ಇದ್ದವನು. ಉಳಿದ ಇಬ್ಬರು ತಾವೇ ನಿರ್ಮಿಸಿಕೊಂಡ ಜೇಡರ ಬಲೆಗಳಲ್ಲಿ ಬಂದಿಗಳು. ಅವರ ಬಗ್ಗೆ ಏಕವಚನದಲ್ಲಿ ಮಾತಾಡಲಿಕ್ಕೂ, ಬರೆಯಲಿಕ್ಕೂ ಮುಜುಗರ, ಸಂಕೋಚ, ಭಯ.

●

ರಾಮಣ್ಣ ಇದ್ದದ್ದೇ ಹಾಗೆ.

ಕರ್ನಾಟಕದ ಬೇರೆ ಬೇರೆ ಹಳ್ಳಿಗಳಿಂದ ಬಂದು ಏನೇನೋ ಕಾರಣಗಳಿಂದಾಗಿ ಬೆಂಗಳೂರು ಸೇರಿಕೊಂಡ ನಮ್ಮ ಅನೇಕ ಗ್ರಾಮಾಂತರ ಸಾಹಿತಿಗಳು ರಾಜಧಾನಿಯ ಹೊಗೆ ಬಡಿಸಿಕೊಂಡು ಮಾತಿನಲ್ಲಿ ಮೌನದಲ್ಲಿ ಮುಖದ ಚಹರೆಪಟ್ಟಿಯಲ್ಲಿ ದಿನನಿತ್ಯದ ವ್ಯವಹಾರದಲ್ಲಿ ರಾಜಧಾನಿಯ ಟಿಪಿಕಲ್ ಒನ್-ಬೈ-ಟೂ ತನವನ್ನು ಆವಾಹನೆ ಮಾಡಿಕೊಂಡಿರುವಾಗ, ಮೈಸೂರು-ಬೆಂಗಳೂರುಗಳ ಅಡಕತ್ತಿನಲ್ಲಿ ಸಿಕ್ಕಂತಿರುವ ಮಂಡ್ಯ ಜಿಲ್ಲೆಯ ರಾಮಣ್ಣ ಕೊನೆಯವರೆಗೂ ಮಂಡ್ಯದ ಮಣ್ಣಿನ ಮಗನಾಗಿಯೇ ಬದುಕಿದ. ಮಂಡ್ಯದ ಮಣ್ಣಿನಲ್ಲಿಯೇ ಮಣ್ಣಾದ.

ಸಾರ್ವಜನಿಕ ವೇದಿಕೆ ಇರಲಿ, ಸೆಮಿನಾರಿರಲಿ, ಜೊತೆಗಿನ ಬಸ್ ಪ್ರಯಾಣವಿರಲಿ, ರಾತ್ರಿಗಳ ಗುಂಡು ಪಾರ್ಟಿಗಳಿರಲಿ - ಅದೇ ರಾಮಣ್ಣ. ಮಂಡ್ಯದ ಜವಾರಿ ಕನ್ನಡ, ಬೈಗಳ, ಗಾದೆ ಮಾತು. ಯಾವ ಎಗ್ಗೂ ಇಲ್ಲ. ವೃತ್ತಿಯಲ್ಲಿ ವೈದ್ಯ. ಆದರೆ ಮಾಡಿದ ನೌಕರಿಯೆಲ್ಲ ಹಳ್ಳಿಗಾಡಿನಲ್ಲಿ. ಹೋದಲ್ಲೆಲ್ಲ ದವಾಖಾನೆಯ ಸುತ್ತ ಕಾಡು ಬೆಳೆಸಿದ್ದ ರಾಮಣ್ಣ. ಪ್ರಕೃತಿಯ ಸೆಳೆತ ಬಿಡಲೇ ಇಲ್ಲ ರಾಮಣ್ಣನನ್ನು.

ಸಾಯುವ ಅನೇಕ ತಿಂಗಳು ಮೊದಲು ರಾಮಣ್ಣನಿಗೊಂದು ಮೇಜರ್ ಆಪರೇಶನ್ ಆಗಿತ್ತು. ಪತ್ನಿ ರಾಜಮ್ಮ ಗಂಡನಿಗೆ ಕಿಡ್ನಿ ಕೊಟ್ಟಿದ್ದರು. ಇನ್ನೇನು ಆಪರೇಶನ್ ಥೇಟರಿಗೆ ಹೋಗಬೇಕು. ಗೆಳೆಯನೊಬ್ಬ ನೋಡಲು ಬಂದ. ಆಪರೇಶನ್-ಡ್ರೆಸ್ಸಿನಲ್ಲಿಯೇ ರಾಮಣ್ಣ ನಡಕೊಂಡು ಬಂದನಂತೆ. ಮಾತಾಡಿದನಂತೆ, ಕಿಡಕಿಯ ಆಚೆ ಕಣ್ಣು ಬಿಟ್ಟು ನೋಡಿ ಹೇಳಿದನಂತೆ: ನೋಡಪ್ಪಾ, ಆಪರೇಶನ್ ಅಂದರೆ ಹಾಗೂ ಆಗಬಹುದು ಹೀಗೂ ಆಗಬಹುದು. ಅದಕ್ಕೇ, ಒಳಗೆ ಹೋಗೋ ಮುಂಚೆ, ಕಣ್ತುಂಬ ಈ ಆಕಾಶ ಈ ಮೋಡ ಈ ಗಿಡ ಈ ಮರ ಈ ಹಕ್ಕಿ ತುಂಬಿಕೊಂಡು ಹೋಗ್ತಾ ಇದೀನಿ ಕಣೋ...

ಆಪರೇಶನ್ ಯಶಸ್ವಿಯಾಗಿ ರಾಮಣ್ಣ ಹೊರಬಂದಾಗ ನಮಗೆಲ್ಲ ಸಮಾಧಾನ. ಗಾಡಿ ರಿಪೇರಿ ಆಯಿತು. ಇನ್ನೂ ಜಗ್ಗುತ್ತದೆ - ಅಂತ. ಮತ್ತೆ ಓಡಾಡತೊಡಗಿದ. ಅದು ಬರೆಯಬೇಕು. ಇದು ಬರೆಯಬೇಕು. ಆತ್ಮ ಚರಿತ್ರೆ ಬರೆಯಬೇಕು, ಅಕಾಡೆಮಿ ಅಧ್ಯಕ್ಷನಾಗಬೇಕು.....

ಆದರೆ, ಅನಿರೀಕ್ಷಿತವೆಂಬಂತೆ, ಸಾವು ಎದಿರಾಗಿತ್ತು. 'ಸುಗ್ಗಿ'ಯಿಂದ ಸುರುವಾದ ರಾಮಣ್ಣನ ಸಾಹಿತ್ಯ ಸೃಷ್ಟಿ ಸಮೃದ್ಧವಾಗಿಯೇ ನಡೆಯಿತು. ಟಾಲ್‌ಸ್ಟಾಯ್ ಮತ್ತು ಪ್ರೇಮಚಂದ - ರಾಮಣ್ಣ ಬಹಳ ಮೆಚ್ಚಿಕೊಂಡ ಮತ್ತು ಹಚ್ಚಿಕೊಂಡ ಸಾಹಿತಿಗಳು. ಇದೂ ಸಹಜವೇ ಆಗಿತ್ತು. ರಾಮಣ್ಣ ಸೃಷ್ಟಿಸಿದ ಪಾತ್ರಗಳು, ಸನ್ನಿವೇಶಗಳು, ಸಂಭಾಷಣೆಗಳು, ನಿರೂಪಣೆಯ ರೀತಿ ಎಲ್ಲದಕ್ಕೂ ಹಿನ್ನೆಲೆಯಾಗಿದ್ದು ಮಂಡ್ಯದ ಗ್ರಾಮೀಣ ಪ್ರದೇಶ. ಆ ಬದುಕಿನ ಪದರು ಪದರುಗಳನ್ನು ಕಠೋರ ವಾಸ್ತವ ಪ್ರಜ್ಞೆಯಿಂದ ಬಿಚ್ಚಿಟ್ಟವನು ರಾಮಣ್ಣ. ಸುಗ್ಗಿ, ಅವ್ವ, ಗಾಂಧಿ, ಒಂದು ಹುಡುಗನಿಗೆ ಬಿದ್ದ ಕನಸು, ಪ್ರಜಾಪ್ರಭುತ್ವ ಮತ್ತು ಮೂರು ಮಂಗಗಳು, ಜೀತ - ಮುಂತಾದ ಅನೇಕ ಕತೆಗಳು ರಾಮಣ್ಣನನ್ನು ಕನ್ನಡದ ಶ್ರೇಷ್ಠ ಕತೆಗಾರರಲ್ಲಿ ಒಬ್ಬನನ್ನಾಗಿ ಮಾಡಿವೆ.

'ಗಾಂಧಿ' ಕತೆಯ ಬಗ್ಗೆ ಹೇಳಲೇ ಬೇಕು. ನನ್ನನ್ನು ಕುಂತಲ್ಲಿ ನಿಂತಲ್ಲಿ ಕಾಡಿದ ಕತೆ ಅದು. ದವಾಖಾನೆಗೆ ಬಂದ ನರಪೇತಲ ಹುಡುಗ. ಹೆಸರೇನು ಅಂತ ಕೇಳಿದರೆ ಮಹಾತ್ಮಾಗಾಂಧಿ ಅನ್ನುತ್ತಾನೆ. ಗೋಡೆಯ ಮೇಲೆ ಗಾಂಧಿಯ ಫೋಟೋ ಇದೆ. ಸುತ್ತಲಿನವರೆಲ್ಲ ಘೊಳ್ಳನೇ ನಗುತ್ತಾರೆ. ಕಥಾನಕದ ನೆಲದ ಪಾತಳಿಯನ್ನು ಒಂದಿಷ್ಟೂ ಬಿಟ್ಟುಕೊಡದೆ ಕತೆ ಆಕಾಶಕ್ಕೆ ಜಿಗಿಯುತ್ತದೆ. ಗಾಂಧಿ ಧ್ವನಿಯಾಗಿ, ಸಂಕೇತವಾಗಿ, ಹಳವಂಡವಾಗಿ ಕಾಡುತ್ತಾನೆ.

"ರಾಮಣ್ಣ, ಎಷ್ಟು ಚೆಂದ ಕತೀ ಬರಿದೀಯಲ್ಲ!" - ಎಂಬ ಒಂದೇ ಒಂದು ಸಾಲಿನ ಪತ್ರ ನನ್ನದು ರಾಮಣ್ಣನಿಗೆ. ಅದೇ ಒಂದು ಮಹಾ ವಿಮರ್ಶೆಯ ತುಣುಕೇನೋ ಎನ್ನುವಂತೆ ರಾಮಣ್ಣ ಸಂಕಲನದ ಬೆನ್ನುಪುಟಕ್ಕೆ ಆ ಸಾಲನ್ನು ಅಚ್ಚು ಮಾಡಿಸಿದ್ದಾನೆ. (ಮುಂದೆ ಆ ಕತೆಯನ್ನು

## ಲಂಕೇಶರ 'ಸಣ್ಣ' ರಾಜಕೀಯ ಮತ್ತು ರಾಮಣ್ಣ

ಮೊಟ್ಟ ಮೊದಲು ಇಡೀ ನಾಡು 'ಬೆಸಗರಹಳ್ಳಿ ರಾಮಣ್ಣ' ಎಂಬ ಹೆಸರು ಕೇಳಿದ್ದು, ಪ್ರಜಾವಾಣಿಯ ದೀಪಾವಳಿ ಕಥಾ ಸ್ಪರ್ಧೆಯಲ್ಲಿ ರಾಮಣ್ಣನ 'ಸುಗ್ಗಿ' ಕತೆಗೆ ಪ್ರಥಮ ಬಹುಮಾನ ಬಂದಾಗ. ಆಗ ರಾಮಣ್ಣ ಇನ್ನೂ ವಿದ್ಯಾರ್ಥಿ. ಸಹಜವಾಗಿ ವಿದ್ಯಾರ್ಥಿ-ವಿಭಾಗಕ್ಕೆ ಕತೆ ಹೋಗಿತ್ತು. ಆದರೆ ಆ ವಿಭಾಗದ ಮಿತಿಯನ್ನು ದಾಟಿ, ಸಾರ್ವಜನಿಕ ವಿಭಾಗದಲ್ಲಿ ಗಣಿಸಲ್ಪಟ್ಟು 'ಪ್ರಥಮ' ಬಹುಮಾನ ಗಿಟ್ಟಿಸಿತ್ತು 'ಸುಗ್ಗಿ'.

ಪ್ರಜಾವಾಣಿಯಲ್ಲಿ ಪ್ರತಿ ವರ್ಷ ಬಹುಮಾನಿತ ಕತೆ ಬರುತ್ತವೆ. ಇಂದಿಗೂ ಕನ್ನಡ ಸಾಹಿತಿಗಳಿಗೆ ಅದೊಂದು ಪ್ರತಿಷ್ಠೆ. ಅಲ್ಲಿ ಪುರಸ್ಕೃತರಾದವರೆಲ್ಲ ಮುಂದೆ ಒಳ್ಳೆಯ ಸಾಹಿತಿಗಳಾಗಿಯೇ ಹೆಸರು ಮಾಡಿದ್ದಾರೆ. ....ಆದರೆ ರಾಮಣ್ಣನ 'ಸುಗ್ಗಿ'ಯ ಕತೆಯೇ ಬೇರೆ.

ಪಿ. ಲಂಕೇಶ್ ಆ ಹೊತ್ತಿಗಾಗಲೇ ಪ್ರಖ್ಯಾತ ವ್ಯಕ್ತಿ. ಇಂಗ್ಲಿಷ್ ಪ್ರಾಧ್ಯಾಪಕರಾಗಿ, ಕವಿ-ನಾಟಕಕಾರ-ಕತೆಗಾರರಾಗಿ, ಬಂಡಾಯದ ಸಂಕೇತವಾಗಿ - (ಆ ಕಾಲಕ್ಕೆ ಸ್ವಲ್ಪ 'ಭಿನ್ನ' ವಾಗಿದ್ದರೂ ಸಾಕು, ಬಂಡಾಯ ಅನ್ನಬಹುದಿತ್ತು!) -ಕಂಗೊಳಿಸುತ್ತಿದ್ದ ಲಂಕೇಶರ ಕತೆಗೆ ಅದೇ ಪ್ರಜಾವಾಣಿ ಸ್ಪರ್ಧೆಯಲ್ಲಿ ಸಾರ್ವಜನಿಕ ವಿಭಾಗದಲ್ಲಿ 'ದ್ವಿತೀಯ' ಬಹುಮಾನ ಬಂದಿತು. ಅದ್ವಿತೀಯನಾದ ತನಗೆ ದ್ವಿತೀಯ ಬಹುಮಾನ ಬಂದದ್ದಕ್ಕೆ - (ಅದೂ ಕೇವಲ ವಿದ್ಯಾರ್ಥಿಯೊಬ್ಬನಿಗೆ ಪ್ರಥಮ ಬಹುಮಾನ ಬಂದಿದ್ದಕ್ಕೆ) - ಕಂಗೆಟ್ಟ ಲಂಕೇಶರು ಪ್ರಜಾವಾಣಿಯ ಸಂಪಾದಕರ ಹತ್ತಿರ ಹೋಗಿ, ಕತೆಗಳ ಪ್ರಕಟನೆಯ ಮೊದಲು, ಒಂದು 'ಸಣ್ಣ' ಪ್ರಮಾಣದ ರಾಜಕೀಯ ಮಾಡಿದ್ದರಂತೆ! ಆಗ ಅವರ ವಯಸ್ಸೂ ಸಣ್ಣದಿತ್ತು.

ಈ ಪ್ರಸಂಗವನ್ನು ಒಂದು 'ಕತೆ'ಯನ್ನೇ ಮಾಡಿ ರಾಮಣ್ಣ ತೊಡೆ ಬಡಿದುಕೊಳ್ಳುತ್ತ ಪಾನಗೋಷ್ಠಿಯಲ್ಲಿ ಸಾದರ ಪಡಿಸುತ್ತಿದ್ದ. ಆಗ ಪ್ರೀತಿಯಿಂದ ಅವನು 'ಲಂಕೇಶ'ರನ್ನು 'ಲಂಗೇಶ' ಅಂತ ಕರೆಯುತ್ತಿದ್ದ. 'ಆ ಲಂಗೇಶ ಹಿಂಗೆ ಮಾಡಿಬಿಟ್ಟ ನೋಡಪ್ಪಾ ಬಡ್ಡೀ ಮಗಾ'.

ನಾನೇ ಇಂಗ್ಲೀಷಿಗೆ ಅನುವಾದ ಮಾಡಿದೆ. ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಾತಿನಿಧಿತ ಸಂಕಲನದಲ್ಲಿ ಅದು ಪ್ರಕಟವಾಗಿದೆ).

ಉತ್ತರ ಕರ್ನಾಟಕದ ಧಾರವಾಡದ ನನಗೆ ಮೈಸೂರು ಕರ್ನಾಟಕದ ಮಂಡ್ಯದೊಂದಿಗೆ ಒಂದು ನಮೂನೆಯ ಕರುಳಿನ ಸಂಬಂಧ (ಹೈದ್ರಾಬಾದ ಕರ್ನಾಟಕದ ರಾಯಚೂರಿನೊಂದಿಗೆ ಇದ್ದ ಹಾಗೆ). ಈ ಸಂಬಂಧದ ಕೊಂಡಿಗಳು : ಹಿರಿಯರಾಗಿದ್ದ ಕೆ.ವಿ.ಶಂಕರ ಗೌಡರು, ಸಚ್ಚಿ (ಕೆ.ಎಸ್. ಸಚ್ಚಿದಾನಂದ), ಬೆಸಗರಹಳ್ಳಿ ರಾಮಣ್ಣ, ಕೇಶವಮೂರ್ತಿ, ಜಯಪ್ರಕಾಶಗೌಡ, ಶಿವರಾಮು ಮುಂತಾದವರು. ಕಾವ್ಯ, ನಾಟಕ, ರಂಗಭೂಮಿ, ರೈತ ಚಳುವಳಿ, ಗೋಕಾಕ ಚಳುವಳಿ, ಬಂಡಾಯ ಸಾಹಿತ್ಯ - ಹೀಗೆ ಅನೇಕ ಸುತ್ತುಗಳಲ್ಲಿ ಈ ಸಂಬಂಧ ಹುರಿಗೊಳ್ಳುತ್ತಲೇ ಇದೆ. ಈ ನಂಟಿನ ಮುಖ್ಯ ಎಳೆ ರಾಮಣ್ಣನಾಗಿದ್ದ. ಈಗ ರಾಮಣ್ಣನ ನೆನಪು.

### ಹೀಗೊಂದು ಪ್ರಸಂಗ

ಗೆಳೆಯರು ಒಂದು ಪ್ರಸಂಗ ಹೇಳುತ್ತಾರೆ. ಯಾವುದೋ ಊರು. ಏನೋ ಒಂದು ಸೆಮಿನಾರು. ಡಾ. ಜಿ.ಎಸ್.ಶಿವರುದ್ರಪ್ಪನವರೂ ರಾಮಣ್ಣನೂ ಹೋಟೆಲಿನ ಒಂದೇ ರೂಮಿನಲ್ಲಿ ಉಳಿಯುವ ವ್ಯವಸ್ಥೆಯಾಗಿದೆ. ಒಂದು ಗೋಷ್ಠಿಮುಗಿಸಿಕೊಂಡು ಇಬ್ಬರೂ ಹೋಟೆಲಿಗೆ ಮರಳಿದ್ದಾರೆ. ರಾಮಣ್ಣ ಕೋಟು ತೆಗೆದು ಗೂಟಕ್ಕೆ ತೂಗುಬಿಟ್ಟ. ಬುಶ್‌ಶರ್ಟು ತೆಗೆದ. ಬನಿಯನ್ನೂ ಮೈಬಿಟ್ಟು ಹೊರಬಂತು. ಸಾವಕಾಶ ಪ್ಯಾಂಟೂ ಭೂಮಿಗಿಳಿಯಿತು.

ನೋಡುತ್ತಲೇ ಇದ್ದ ಜಿ.ಎಸ್.ಎಸ್. ಕೇಳಿದರಂತೆ : "ರಾಮಣ್ಣ, ಇಷ್ಟೇ ಅಲ್ಲವೇ ?"

ತಾನು ಕಂಡುಂಡ ಬದುಕನ್ನು ಯಾವ ಸೆಂಟಿಮೆಂಟ್ಯಾಲಿಟಿ ಇಲ್ಲದೆ ಕಲಾವಿದನಾಗಿ ಚಿತ್ರಿಸುತ್ತಿದ್ದ ರಾಮಣ್ಣನಿಗೆ ಆ ಬದುಕಿನ ವಾಸ್ತವತೆಯ ಬಗ್ಗೆ ಬಹಳ ಸಿಟ್ಟಿತ್ತು, ನೋವಿತ್ತು. ಈ ಜನ ಎಂದಾದರೂ ಉದ್ಧಾರವಾಗುವುದು ಸಾಧ್ಯವೇ? - ಅಂತ ವ್ಯಗ್ರನಾಗಿ ಮಾತಾಡುತ್ತಿದ್ದ. 'ಕುವೆಂಪು'ವನ್ನು ಒಂದು ಆರಾಧ್ಯ ದೈವವನ್ನಾಗಿ ಮಾಡಿ, ಕುವೆಂಪು ಕೃತಿಗಳನ್ನು ತಮ್ಮ ಶೋಕೇಸಿನಲ್ಲಿ ಇಡುತ್ತಿದ್ದ, ತನ್ನ ಜನಾಂಗದ 'ಪ್ರತಿಷ್ಠೆ'ಯ ಬಗ್ಗೆ ಬಹಿರಂಗವಾಗಿಯೇ ಜಾಲಾಡಿಸುತ್ತಿದ್ದ. ತಾನು ಎಂದೂ ಪಾಲುಗೊಳ್ಳಲಾಗದ ಸಾಹಿತ್ಯಿಕ ರಾಜಕೀಯದ ಬಗ್ಗೆ ಅವನಿಗಿದ್ದ ಆಕ್ರೋಶ ಅಪಾರ. ಆದರೆ ಸ್ನೇಹಿತರ ಬಗ್ಗೆ ಅಷ್ಟೇ ಕಕ್ಕುಲಾತಿ. ಅವರನ್ನು ಅಪ್ಪಿಕೊಳ್ಳುವುದೇನು, ಅವರಿಗೆ ಮುದ್ದು ಕೊಡುವುದೇನು - ಅದನ್ನು ಅನುಭವಿಸಿದವರೇ ಹೇಳಬೇಕು. ನಾವೆಲ್ಲ ಈ ಜಾತಿ ಪಾತಿ ಎಲ್ಲ ಮರೆತು ಮನುಷ್ಯರಂತೆ, ಕೇವಲ ಮನುಷ್ಯರಂತೆ, ಬದುಕಲು ಯಾಕೆ ಸಾಧ್ಯವಿಲ್ಲ ?

ಇದು ರಾಮಣ್ಣನ ಪ್ರಶ್ನೆ. ಉತ್ತರ ಕೊಡುವವರಾರು ?

●

ರಾಮಣ್ಣನ ಮನೆಯ ಹೆಸರು - 'ನೆಲದ ಒಡಲು'. ಬೆಂಗಳೂರು-ಮೈಸೂರು ದಾರಿಯಲ್ಲಿ ಹಾಯುವವರೆಲ್ಲ ಮನೆಗೆ ಬಂದು ಒಂದು ಕಪ್ಪು ಕಾಫಿ ಕುಡಿಯಬೇಕು. ಇದು ರಾಮಣ್ಣನ ಬಯಕೆ. ಮನೆಯ ಒಳಗೂ ಅಷ್ಟೆ. ಎಲ್ಲಾ ಬಟಾ ಬಯಲು. ಮುಚ್ಚು ಮರೆ ಏನೂ ಇಲ್ಲ.

ಸೋಫಾದ ಮೇಲೆ ರಾಮಣ್ಣನನ್ನು ನೀವು ನೋಡುವುದು ಬರೀ ನಿಕ್ಕರಿನಲ್ಲಿ. ಬಂದವರು ದೊಡ್ಡವರೇ ಇರಲಿ ಸಣ್ಣವರೇ ಇರಲಿ, ರಾಮಣ್ಣನ ಅವತಾರ ಇದೇ. ಏನು ರಾಮಣ್ಣ ಹೀಗೆ - ಅಂತ ಯಾರಾದರೂ ಕೇಳಿದರೆ ರಾಮಣ್ಣ : 'ಮನೇಲಿ ಕೂಡ ನಾವು ಎಲ್ಲಾ ಮುಚಿಕೊಂಡು ಕೂಡ್ರಬೇಕು ಅಂದರೆ ಇದಕ್ಕೆ ಮನೆ ಅಂತ ಯಾಕೆ ಕರಿಬೇಕು ?'.

ಇಂಥಾ ರಾಮಣ್ಣ, ಅವನ ಅರವತ್ತನೆಯ ಹುಟ್ಟುಹಬ್ಬವನ್ನು ಅರ್ಥಪೂರ್ಣವಾಗಿ ಆಚರಿಸಲು ಮಂಡ್ಯದ ಸಂಗಾತಿಗಳೆಲ್ಲ ತಯಾರಿ ಮಾಡುತ್ತಿದ್ದಾಗ ಅನಿರೀಕ್ಷಿತವಾಗಿ ತೀರಿಕೊಂಡ. ಹಿರಿಯ ಮಗ ರವಿಶಂಕರೇಗೌಡ ಡಿ.ಎಸ್.ಪಿ. ಯಾಗಿ ನೋಮಕಗೊಂಡು ಒಂದು ಮಟ್ಟಿಗೆ ಹತ್ತಿದ್ದರೂ, ರಾಮಣ್ಣನನ್ನು ಆಮೂಲಾಗ್ರವಾಗಿ ಅಲುಗಾಡಿಸಿದ್ದು ಪ್ರೀತಿಯ ಕಿರಿಯ ಮಗ ಅಣ್ಣಾದೊರೈ ಅಪಘಾತದಲ್ಲಿ ಮರಣ ಹೊಂದಿದ್ದು. (ದ್ರಾವಿಡ ಚಳುವಳಿಯ ನಾಯಕನ ಹೆಸರನ್ನೇ ಮಗನಿಗಿಟ್ಟಿದ್ದ ರಾಮಣ್ಣ.) ಅವನನ್ನು ಬಹಳ ಹಣ್ಣು ಮಾಡಿದ್ದು ಇದೇ ಪ್ರಸಂಗ.

ರಾಮಣ್ಣ ಮನುಷ್ಯನಾಗಿದ್ದ. ಕೇವಲ ಮನುಷ್ಯನಾಗಿದ್ದ. ಎಲ್ಲರಿಗೂ ಇರುವ ದೌರ್ಬಲ್ಯ ಅವನಿಗೂ ಇದ್ದವು. ಅವನು ತೆಗೆದುಕೊಂಡ ಕೆಲವು ರಾಜಕೀಯ ನೀಲುವುಗಳ ಬಗ್ಗೆ ಮಂಡ್ಯದ ಸ್ಥಳೀಯ ವಲಯಗಳಲ್ಲಿ ಅಸಮಾಧಾನವಿದೆ. ಜಗತ್ತಿನಲ್ಲಿ ಇತರರೆಲ್ಲ ಹಾಳಾಗಿ ಹೋದರೂ, 'ಸಾಹಿತಿ' ಎಂಬ ಪ್ರಾಣಿ ಮಾತ್ರ ಪರಿಶುದ್ಧನಾಗಿರಬೇಕು ಎಂಬ (ಸರಿಯೋ ತಪ್ಪೋ) ನಿರೀಕ್ಷೆಗಳಿಂದಾಗಿ ಹೀಗೆ ಆಗುವುದು ಸಹಜ. ಪ್ರಕೃತಿ ನಾಜೂಕಿದ್ದರೂ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷನಾಗಬೇಕೆಂದು ರಾಮಣ್ಣ ತೀವ್ರ ಬಯಕೆ ಹೊಂದಿದ್ದ. ಅದಾಗದಿದ್ದಾಗ ಸಚಿವ-ಸ್ನೇಹಿತರೊಬ್ಬರಿಗೆ ಖಾರವಾಗಿ ಪತ್ರವನ್ನೂ ಬರೆದಿದ್ದ.

●

ಸ್ವಲ್ಪ ಗಿಡ್ಡ ಆಸಾಮಿ. ದುಂಡುಮೈ, ದುಂಡು ಮುಖ. ಡ್ರೆಸ್ಸಿನ ಬಗ್ಗೆ ಕಾಳಜಿ ಕಡಿಮೆ. ಮಾತಿನಲ್ಲಿ ಪ್ರೀತಿ, ಕಕ್ಕುಲಾತಿ, ಒಮ್ಮೊಮ್ಮೆ ಅಸಾಧ್ಯ ಸಿನಿಕತನ. ರಾಮಣ್ಣನ ಬದುಕಿನಲ್ಲಿ ಮುಚ್ಚಿಕೊಳ್ಳುವುದು ಏನೂ ಇರಲಿಲ್ಲ. ಎಲ್ಲ ಬಿಚ್ಚಿಕೊಳ್ಳುವುದೇ.

ರಾಮಣ್ಣ ಹೋಟೆಲಿನ ಕಾಟಿನ ಮೇಲೆ ಆರಾಮಾಗಿ ಕುಳಿತುಕೊಂಡು ತನ್ನ ಮುಖದ ನಿರಿಗೆಗಳ ತುಂಬ ನಿಧಾನವಾಗಿ ಮೆತ್ತಿಕೊಳ್ಳುತ್ತಿದ್ದುದು ಫೇರ್ ಅಂಡ್ ಲವಲೀ ಕ್ರೀಮನ್ನು. ಚರ್ಮಕ್ಕೆ ಬಹಳ ಒಳ್ಳೇದು ಕಣಯ್ಯ, ಮುಖ ಮಿರಿ ಮಿರಿ ಮಿಂಚಬೇಕು. ಇಂಥ ಕೆಲವು ವ್ಯವಹಾರಗಳನ್ನು ಅನೇಕರು ಗುಪ್ತವಾಗಿ ಮಾಡುವುದೂ ಉಂಟು. ರಾಮಣ್ಣನಿಗೆ ಅದೆಲ್ಲಾ ಇಲ್ಲ. ಅವನ ಬದುಕು ಖುಲ್ಲಾ ಖುಲ್ಲ.

ಹೌದಲ್ಲ! ರಾಮಣ್ಣ ಎಂದೂ 'ಅನ್‌ಫೇರ್' ಆಗಿರಲಿಲ್ಲ. ಯಾವುದಾರಲ್ಲೂ ಎಂದೂ 'ಅಗ್ಲಿ' ಆಗಿರಲಿಲ್ಲ. ಅದಕ್ಕೆಂದೇ ನಮ್ಮ ಕನ್ನಂಬಾಡಿ ರಾಮಣ್ಣ- ಫೇರ್ ಅಂಡ್ ಲವ್ ಲೀ!

ಚಂಪಾಕಾಲಂ : ಸಂಕ್ರಮಣ ಆಗಸ್ಟ್ 1998


ಯೇತಿಯದು ಎಂದು ಹೇಳಲಾದ ಹೆಜ್ಜೆ ಗುರುತು


ಯೇತಿಯ ಬಗ್ಗೆ ಮಾಹಿತಿ ಸಂಗ್ರಹಿಸಿದ ಎರಿಕ್ ಶಿಪ್ಟನ್

# ದೈತ್ಯ ಜೀವಿ ಯೇತಿ ಇದೆಯೇ?

ಡಾರ್ವಿನ್‌ನ ವಿಕಾಸವಾದದಂತೆ ವಾನರನಿಂದ ಮಾನವನ ವಿಕಾಸವಾಯಿತು. ಆದರೆ ವಾನರ ಹಾಗು ಮಾನವ ವಿಕಾಸದ ನಡುವಣ ಕೊಂಡಿಯಂತಿರುವ ಜೀವಿಗಳು, ಅಂದರೆ, ವಾನರ ಹಾಗೂ ಮಾನವ ಇವೆರಡರ ಗುಣ ಲಕ್ಷಣ, ಹಾಗು ದೇಹ ಸ್ವರೂಪ ಹೊಂದಿರುವ ಜೀವಿಗಳೇನಾದರೂ ಇಂದಿಗೂ ಜೀವಿಸುತ್ತಿವೆಯೇ?

ಉತ್ತರ ಕೊಡುವುದು ಬಹಳ ಕಷ್ಟ. ಯಾಕೆಂದರೆ, 'ಯೇತಿ'ಗಳೆಂಬ ನಿಗೂಢ ಜೀವಿಗಳು ಅನೇಕರ ಪ್ರಕಾರ ವಾನರ ಹಾಗು ಮಾನವನ ನಡುವಣ ಮಿಸ್ಸಿಂಗ್ ಲಿಂಕ್ (Missing link) ಆಗಿವೆ.

ಹಾಗಾದರೆ ಈ ಯೇತಿಗಳ ಕಥೆ ಏನು? 'ಯೇತಿ'ಗಳನ್ನು ಅತೀರಂಜಕತೆಯಿಂದ ಬಣ್ಣಿಸುವಲ್ಲಿ ಇಲ್ಲಿಯ ತನಕ ಯಾರೂ ಹಿಂದೆ ಬಿದ್ದಿಲ್ಲ.

'ಯೇತಿ'ಗಳನ್ನು 'ದೈತ್ಯ ಮಾನವ' ನೆಂದು ಅವನ ಆಕಾರವನ್ನು 'ರಾಕ್ಷಸ'ರಿಗೆ ಹೋಲಿಸಿ ಹೇಳುವ ಕತೆಗಳು ಹಿಮಾಲಯದ ತಪ್ಪಲಿನ ಪ್ರದೇಶದಲ್ಲಿ ಜನಜನಿತವಾಗಿವೆ. ಎಂಟರಿಂದ ಒಂಭತ್ತು ಅಡಿ ಎತ್ತರ, ಮೈತುಂಬಾ ಕೂದಲು ಹೊಂದಿರುವ ಈ ಪ್ರಾಣಿಗಳು, ದೊಡ್ಡ ಗಾತ್ರದ ಹಸುಗಳ ಕತ್ತನ್ನು ಸುಲಭವಾಗಿ ಮುರಿದು ಹಾಕುವಷ್ಟು ಬಲಿಷ್ಠ. ಇವುಗಳ ದೇಹ ಗಾತ್ರ ಭಾರಿ ಇದ್ದರೂ, ಅವು ಓಟದಲ್ಲಿ ನಾಯಿಯನ್ನೂ ಹಿಂದೆ ಹಾಕಬಲ್ಲವು. ಮಾನವನ ನೆತ್ತಿಯ ಮೇಲೆ ಪ್ರಹಾರ ಮಾಡಿ ಕ್ಷಣಮಾತ್ರದಲ್ಲಿ ನೆಲಕ್ಕುರುಳಿಸುವ ದೈತ್ಯಶಕ್ತಿ ಇವಕ್ಕೆ ಇದೆ. ಕೆಲವು ಹೆಣ್ಣು ಮಕ್ಕಳಂತೂ 'ಯೇತಿ'ಯ ಹೆಸರು ಕೇಳಿದೊಡನೆಯೇ ಭಯ ಭೀತರಾಗುತ್ತಾರೆ. 'ಯೇತಿ'ಗಳು ಕನ್ಯೆಯರನ್ನು ಅಪಹರಿಸಿ ಅವರ ಮೇಲೆ ಬಲತ್ಕಾರ ಮಾಡಿ ತಮ್ಮ ಕಾಮತೃಷೆಯನ್ನು ಇಂಗಿಸಿಕೊಳ್ಳುತ್ತವೆ ಎನ್ನುವ ವದಂತಿಗಳೂ ದಟ್ಟವಾಗಿವೆ.

ಆದರೆ ನಿಜಕ್ಕೂ 'ಯೇತಿ'ಗಳಿವೆಯೇ? ಇದಕ್ಕೆ ಸಾಕ್ಷಿಗಳೇನು? 'ಯೇತಿ'ಗಳು ಯಾಕೆ ಮಾನವನ ಕಣ್ಣಿಗೆ ಕಾಣದಂತೆ ನಿಗೂಢ ಜೀವನ ಸಾಗಿಸುತ್ತಿವೆ? ಮಾನವ ಜನಾಂಗ ತುಂಬಾ ಗರ್ವದಿಂದ ಹೇಳಿಕೊಳ್ಳುವ 'ನಾಗರೀಕತೆ' ಎಂಬ ಪೊರೆ ಇವುಗಳನ್ನು ಯಾಕೆ ತನ್ನೊಳಗೆ ಸೇರಿಸಿಕೊಳ್ಳಲಿಲ್ಲ? ಅಥವಾ 'ಯೇತಿ'ಗಳೇ ನಾಗರೀಕತೆಯನ್ನು ತಿರಸ್ಕರಿಸಿ ನಿಗೂಢವಾದ ರಾಕ್ಷಸ ಜೀವನ ಕ್ರಮವನ್ನು ಆಯ್ಕೆ ಮಾಡಿಕೊಂಡಿವೆಯೇ?

ಹೀಗೆ ಯೇತಿಗಳ ಬಗ್ಗೆ ಪುಂಖಾನುಪುಂಖ ಪ್ರಶ್ನೆಗಳೇ ಇಲ್ಲಿಯವರೆಗೆ ಎದ್ದಿವೆ.

ನೇಪಾಳ ಹಾಗು ಭಾರತದ ಹಿಮ ಆವೃತ ಪ್ರದೇಶಗಳಲ್ಲಿ ಯೇತಿಗಳನ್ನು ಕಂಡಿರುವುದಾಗಿ ಅನೇಕರು ಹೇಳಿಕೊಂಡಿದ್ದಾರೆ. ಕೆಲವರ ಅನುಭವಗಳು ಭಯಾನಕವಾಗಿವೆ.

### ಯೇತಿಯನ್ನು ಕಂಡ ಬಾಲಕಿ

ಲಕ್ಪಾ ದೋಮನಿ ಹಿಮಾಲಯದಲ್ಲಿರುವ ಮಾಚೆರೆಮಾ ಎಂಬ ಪುಟ್ಟ ಗ್ರಾಮದಲ್ಲಿ ವಾಸಿಸುವ ಹುಡುಗಿ. ಒಂದು ದಿನ ಅವಳು ತನ್ನ ಚಮರೀ ಮೃಗ (Yak)ಗಳನ್ನು ಮೇಯಿಸುತ್ತಾ ತೊರೆಯೊಂದರ ಬಳಿ ಕುಳಿತಿದ್ದಳು. ಆಗ ಅವಳಿಗೆ ಯಾವುದೋ ಶಬ್ದವೊಂದು ಕೇಳಿ ಬರಲು, ತಿರುಗಿ ನೋಡಿದಳು. ಅವಳ ಎದೆ ಧಸಕ್ಕೆಂದಿತು. ಎದುರಿಗೆ ದೊಡ್ಡವಾನರನಂತಿರುವ ಜೀವಿಯೊಂದು ನಿಂತಿದೆ. ಅದರ ದೊಡ್ಡ ದೊಡ್ಡ ಕಣ್ಣುಗಳ ನೋಟವು ತನ್ನನ್ನೇ ನುಂಗುತ್ತಿರುವಂತೆ ಅವಳಿಗೆ ಭಾಸವಾಯಿತು. ದೇಹದ ತುಂಬೆಲ್ಲಾ ಕಪ್ಪು ಹಾಗು ಕಂದು ಮಿಶ್ರಿತ ಕೂದಲಿದೆ. ಆ ದೈತ್ಯ ಪ್ರಾಣಿ ಅವಳನ್ನು ಯಾವುದೇ ಕಷ್ಟವಿಲ್ಲದೆ ಸುಲಭವಾಗಿ ಹೊತ್ತುಕೊಂಡು ನೀರಿನ ಬಳಿ ಹೋಯಿತು. ದೋಮನಿ ಗಾಬರಿಯಿಂದ ಜೋರಾಗಿ ಚೀರಿಕೊಳ್ಳತೊಡಗಿದಳು. ಅವಳಪುಣ್ಯ, ಆ ದೈತ್ಯ ಪ್ರಾಣಿ ವಿಚಲಿತಗೊಂಡು, ಅವಳನ್ನು ಕೆಳಕ್ಕೆ ಎಸೆದುಬಿಟ್ಟಿತು. ಅವಳೇನೊ ಬದುಕಿಕೊಂಡಳು. ಆದರೆ, ಅವಳ ಎರಡು ಚಮರೀಮೃಗಗಳು ದೈತ್ಯನಿಗೆ ಬಲಿಯಾದವು. ಒಂದು ಚಮರೀಮೃಗವನ್ನು ಕತ್ತು ತಿರುಗಿಸಿ ಕೊಂದರೆ ಇನ್ನೊಂದನ್ನು ಬಲವಾಗಿ ಗುದ್ದಿ ಕೊಂದು ಹಾಕಿತ್ತು ಆ ದೈತ್ಯ ಪ್ರಾಣಿ. ಈ ಘಟನೆಯನ್ನು ಸ್ಥಳೀಯ ಪೊಲೀಸರ ಬಳಿ ರಿಪೋರ್ಟ್ ಮಾಡಿಸಲಾಯಿತು. ಘಟನಾ ಸ್ಥಳದ ಪರೀಕ್ಷೆಯ ನಂತರ ಪೊಲೀಸರು ಹೆಜ್ಜೆ ಗುರುತು ಹಾಗು ಸತ್ತ ಚಮರೀಮೃಗಗಳನ್ನು ಸಾಕ್ಷಿಯಾಗಿ ದಾಖಲಿಸಿಕೊಂಡರು. ಈ ಘಟನೆಯನ್ನು

ವಿವರವಾಗಿ ಸಂಗ್ರಹಿಸಿದ ವಿಲಿಯಂ ವೇಬರ್ ಎನ್ನುವವನ ಪ್ರಕಾರ ಇದರಲ್ಲಿ ಹುಡುಗಿ ಸುಳ್ಳು ಹೇಳಿರುವ ಸಾಧ್ಯತೆ ಬಹಳ ಕಮ್ಮಿ. ಯಾಕೆಂದರೆ, ಇದರಿಂದ ಅವಳಿಗೇನು ಲಾಭ? ಆದ್ದರಿಂದ ಆ ಹುಡುಗಿ ಸತ್ಯವನ್ನೇ ನುಡಿದಿರಬೇಕು ಎಂದು ವಿಲಿಯಂ ವೇಬರ್ ತೀರ್ಮಾನಕ್ಕೆ ಬಂದಿದ್ದಾನೆ.

## ನಾಪತ್ತೆಯಾದ ಪರ್ವತಾರೋಹಿಗಳು!

'ಯೇತಿ'ಗಳ ಹೆಜ್ಜೆಯ ಗುರುತನ್ನು ಹಿಡಿದು ಮುಂದೆ ಹೋದ ಹಲವರು ನಾಪತ್ತೆಯಾದರು. ಇದು 'ಯೇತಿ'ಯನ್ನು ಮತ್ತಷ್ಟು ನಿಗೂಢ ವಾಗಿಸುತ್ತದೆ.

'ಯೇತಿ'ಗಳ ಇರುವಿಕೆಯನ್ನು ಹೆಜ್ಜೆ ಗುರುತುಗಳ ಸಾಕ್ಷ್ಯಾಧಾರವಾಗಿ ಫೋಟೋ ತೆಗೆದ ಪ್ರಮುಖರಲ್ಲಿ ಎರಿಕ್ ಶಿಪ್‌ಟನ್ ಒಬ್ಬ. ಆತ ತನ್ನ ಹಿಮಕಡಿಯುವ ಪಿಕಾಸನ್ನು ಹೆಜ್ಜೆಯ ಗುರುತಿನ ಬಳಿ ಇಟ್ಟು ಅಳೆದು ನೋಡಿದಾಗ, ಹೆಜ್ಜೆಗಳು 14 ಇಂಚು ಉದ್ದ ಹಾಗೂ 7 ಇಂಚಿನಷ್ಟು ಅಗಲವಾಗಿದ್ದವು! ಇಂತಹ 'ದೈತ್ಯ ಹೆಜ್ಜೆ'ಗಳು ಇಡೀ ಪ್ರಪಂಚದಲ್ಲಿ ಸಂಚಲನೆಯನ್ನೇ ಸೃಷ್ಟಿ ಮಾಡಿದವು. ಇದು ನಡೆದದ್ದು 1951ರಲ್ಲಿ. ಅನಂತರ ಅದೆಷ್ಟೋ ಜನ 'ಯೇತಿ'ಯ ಹೆಜ್ಜೆ ಗುರುತುಗಳನ್ನು ಕ್ಯಾಮರಾದಲ್ಲಿ ಸೆರೆಹಿಡಿದಿದ್ದಾರೆ.

ಎರಿಕ್ ಶಿಪ್‌ಟನ್ ಅವರೊಂದಿಗೆ ಇದ್ದ ಮೈಕೆಲ್ ವಾರ್ಡ್ ಎಂಬಾತ ಆ ಘಟನಾವಳಿಯನ್ನು ಇಂದಿಗೂ ತುಂಬಾ ತಾಜಾತನದಿಂದ ಹೇಳುತ್ತಾನೆ. ಅವರಿಬ್ಬರು ಟಿಬೇಟಿನ ಹಿಮ ಪರ್ವತ ಪ್ರದೇಶದಲ್ಲಿ ಹಿಂದೆಂದೂ ಯಾರೂ ಹೋಗಲು ಸಾಹಸ ಮಾಡದ ಜಾಗಗಳಲ್ಲಿ ಪಯಣಿಸುತ್ತಿದ್ದರು. ಆಗಲೇ ಅವರಿಗೆ ಈ ಬೃಹತ್ ಹೆಜ್ಜೆಗಳು ಗೋಚರವಾಗಿದ್ದು. ಆ ಹೆಜ್ಜೆ ಗುರುತುಗಳು ನಿರ್ದಿಷ್ಟವಾಗಿದ್ದು ಇತರ ಯಾವುದೇ ಪ್ರಾಣಿಯ ಹೆಜ್ಜೆಯನ್ನು ಹೋಲುತ್ತಿರಲಿಲ್ಲ. ಅವುಗಳ ಗುರುತುಗಳಲ್ಲಿ ಎಲ್ಲಾ ಬೆರಳುಗಳನ್ನು ಸ್ಪಷ್ಟವಾಗಿ ನೋಡಬಹುದಿತ್ತು. ಹಿಮ ಚಪ್ಪಡಿ ಮತ್ತು ಬಂಡೆಗಳ ಮೇಲೆ ಬಹಳ ದೂರದವರೆಗೂ ಅವುಗಳನ್ನು ಗುರುತಿಸಬಹುದಾಗಿತ್ತು. ಹೆಜ್ಜೆಯ ಗುರುತುಗಳು ಆಳವಾಗಿದ್ದರಿಂದ ಪ್ರಾಣಿಯ ದೇಹದ ಗಾತ್ರವೂ 'ದೈತ್ಯಾಕಾರ' ವಾಗಿತ್ತು ಎಂದು ಹೇಳಬಹುದು. ಎರಿಕ್ ಹಾಗು ವಾರ್ಡ್ ಅವರಿಬ್ಬರು, ಈ ಹೆಜ್ಜೆಯ ಗುರುತುಗಳನ್ನು ಅರಸಿಕೊಂಡು ಇನ್ನಷ್ಟು ದೂರ ಹೋಗುವ ಹಾಗು ಅವುಗಳ ಬಗ್ಗೆ ಇನ್ನಷ್ಟು ಹೆಚ್ಚಿನ ಫೋಟೋಗಳನ್ನು ತೆಗೆಯುವ ಹಂಬಲ ಹೊಂದಿದ್ದರೂ, ತಮ್ಮ ಜೊತೆಗೆ ಕೊಂಡೊಯ್ದ ತಿಂಡಿಗಳು ಮುಗಿಯುತ್ತಾ ಬಂದುದರಿಂದ ಅವರು ಪುನಃ ಶಿಬಿರಕ್ಕೆ ಮರಳಲೇಬೇಕಾಯಿತು. ಆದರೆ, ಅವರಿಬ್ಬರು ಶಿಬಿರವನ್ನು ತಲುಪಲೇ ಇಲ್ಲ!

'ಯೇತಿ'ಗಳ ಅನ್ವೇಷಣೆಗೆ ಹೊರಟ ಇವರಿಬ್ಬರು, ಟಿಬೇಟಿಯನ್ ಗಾರ್ಡ್‌ಗಳ ಕಣ್ಣಿಗೆ ಸಂದೇಹಾಸ್ಪದ ವ್ಯಕ್ತಿಗಳಂತೆ ಕಂಡುಬಂದದ್ದರಿಂದ ಅವರಿಬ್ಬರನ್ನು ಬಂಧಿಸಿ ಜೇಲಿಗೆ ತಳ್ಳಲಾಯಿತು!

ಅಂತೂ, ಇಂತೂ ಕೊನೆಗೂ ಅವರ ಕೈಕೆಳಗೆ ಕೆಲಸ ಮಾಡುತ್ತಿದ್ದ ಶೇರ್ಪಾಗಳು (ಪವರ್ತಾರೋಹಿಗಳ ಸಹಾಯಕ್ಕಿರುವ ಪರ್ವತ ಪ್ರದೇಶದ ಜನಾಂಗ) ಟಿಬೇಟಿಯನ್ ಗಾರ್ಡ್‌ಗಳಿಗೆ 1 ಪೌಂಡ್ ಬೆಲೆ ತೆತ್ತು ಜೀವ ಸಹಿತ ಬಿಡಿಸಿಕೊಂಡರು!

■ ನಾರಾಯಣ ಎಂ. ಭಟ್

ಅವಳ ಎದೆ ಧಸಕ್ಕೆಂದಿತು. ಎದುರಿಗೆ ದೊಡ್ಡ ವಾನರ ನಂತಿರುವ ಜೀವಿಯೊಂದು ನಿಂತಿದೆ. ಅದರ ದೊಡ್ಡ ದೊಡ್ಡ ಕಣ್ಣುಗಳ ನೋಟವು ತನ್ನನ್ನೇ ನುಂಗುತ್ತಿರುವಂತೆ ಅವಳಿಗೆ ಭಾಸವಾಯಿತು. ದೇಹದ ತುಂಬೆಲ್ಲಾ ಕಪ್ಪು ಹಾಗು ಕಂದು ಮಿಶ್ರಿತ ಕೂದಲಿದೆ. ಆ ದೈತ್ಯ ಪ್ರಾಣಿ ಅವಳನ್ನು ಯಾವುದೇ ಕಷ್ಟವಿಲ್ಲದೆ ಸುಲಭವಾಗಿ ಹೊತ್ತುಕೊಂಡು ನೀರಿನ ಬಳಿ ಹೋಯಿತು.

ಎರಿಕ್ ಶಿಪ್‌ಟನ್ ತೆಗೆದ ಚಿತ್ರಗಳ ಬಗ್ಗೆ ಅನೇಕ ತರಹದ ಸಂದೇಹಗಳು ಎದ್ದವು. ಈ ಹೆಜ್ಜೆ ಗುರುತುಗಳು ಯಾವುದೋ ಪ್ರಾಣಿಯೊಂದರ ಹೆಜ್ಜೆಗಳಾಗಿದ್ದು 'ಹಿಮ'ದ ಕರಗುವಿಕೆಯಿಂದಲೋ ಅಥವಾ ಇನ್ನಿತರ ಕಾರಣಗಳಿಂದಲೋ, ದೊಡ್ಡ ಆಕಾರ ಹಾಗು ಗಾತ್ರವನ್ನು ಪಡೆದುಕೊಂಡಿವೆ ಎಂದು ಕೆಲವರು ವಾದಿಸಿದರೆ, ಇನ್ನು ಕೆಲವರು ಇವು ಟಿಬೇಟಿಯನ್ ನೀಲಿ ಕರಡಿಯ ಹೆಜ್ಜೆ ಗುರುತುಗಳಿರಬಹುದು ಎಂದರು. ಇನ್ನು ಉಳಿದವರು ಇದು ಲಂಗೂರ್ ಕೋತಿಗಳದ್ದಾಗಿರಬಹುದು ಎಂದು ಸಂದೇಹ ವ್ಯಕ್ತಪಡಿಸಿದರು. ಲಂಗೂರ್ ಕೋತಿಗಳು ಹಿಮ ಪರ್ವತಗಳ ಸಾಕಷ್ಟು ಎತ್ತರದ ಸ್ಥಳಗಳಲ್ಲಿ ಕಂಡು ಬರುವುದು ಇವರ ಮಾತನ್ನು ಪುಷ್ಟೀಕರಿಸುವಂತೆ ಇತ್ತು. ಖ್ಯಾತ ಬ್ರಿಟೀಷ್ ಪತ್ರಿಕೆ ಕಂಟ್ರಿಲೈಫ್ (Country life) ಇದು ಅಲ್‌ಫೈನ್ ಚೌಗ್ ಎನ್ನುವ (Alphine chough) ಪಕ್ಷಿಯ ಹೆಜ್ಜೆ ಗುರುತುಗಳಾಗಿರಬಹುದು ಎಂದು ಪ್ರಕಟಿಸಿತು. ಆದರೆ, ಈ ಎಲ್ಲಾ ಊಹಾಪೋಹಗಳಿಗೆ ತೆರೆ ಬಿದ್ದಿದ್ದು ಅಂದಿನ ಪ್ರಖ್ಯಾತ ಜೀವ ಶಾಸ್ತ್ರಜ್ಞ W.-Tschernelky ಎಂಬಾತ ಈ ದೈತ್ಯ ಹೆಜ್ಜೆಗಳ ಬಗ್ಗೆ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದ ನಂತರವೇ.

ಲಂಡನ್‌ನ ಕ್ವೀನ್ ಮ್ಯಾರಿ ಕಾಲೇಜಿನಲ್ಲಿದ್ದ ಈತ ಎರಿಕ್ ಶಿಪ್‌ಟನ್ ತೆಗೆದ ಚಿತ್ರಗಳ ಬಗ್ಗೆ ಆಳವಾಗಿ ಅಭ್ಯಾಸ ಮಾಡಿದ. ಆ ಹೆಜ್ಜೆಗಳ ಮಾದರಿಗಳನ್ನು ಸಿದ್ಧಪಡಿಸಿ ಅದನ್ನು ಗೋರಿಲ್ಲಾ, ಮಾನವ ಮತ್ತು ಇನ್ನಿತರ ಪಳೆಯುಳಿಕೆಯ ಹೆಜ್ಜೆ ಗುರುತುಗಳೊಂದಿಗೆ ಹೋಲಿಸಿ ನೋಡಿದ. ಅವನಿಗೊಂದು ಆಶ್ಚರ್ಯ ಕಾದಿತ್ತು. ಆ ದೈತ್ಯ ಹೆಜ್ಜೆಗಳು ಯಾವುದರ ಜೊತೆಯೂ ಹೋಲಲಿಲ್ಲ! ಆ ದೈತ್ಯ ಪಾದದಲ್ಲಿ ಎರಡನೆಯ ಬೆರಳು ಅಸಾಮಾನ್ಯವಾಗಿ ಉದ್ದವಿದ್ದುದರಿಂದ ಹಾಗು ಮೆಟಾಟಾರ್‌ಸೆಲ್ ಎನ್ನುವ ಎಲುಬು ಅತಿ ಚಿಕ್ಕದಾಗಿ ಇದ್ದುದರಿಂದ ಇದು ಲಂಗೂರ್‌ಕೋತಿ ಅಥವಾ ನೀಲಿ ಹಿಮ ಕರಡಿಯ ಪಾದಗಳ ಗುರುತುಗಳಲ್ಲ ಎಂದು ಖಚಿತವಾಗಿ ಹೇಳಿಬಿಟ್ಟ. ಆದ್ದರಿಂದ ಈ ಹೆಜ್ಜೆ ಗುರುತುಗಳು ಅತ್ಯಂತ ದೈತ್ಯ ಪ್ರಾಣಿಯೊಂದರದಾಗಿದ್ದು ಅವುಗಳು ಎರಡು ಕಾಲುಗಳ ಮೇಲೆ ನಡೆದಾಡುವ ಪ್ರಾಣಿಗಳೇ ಆಗಿರಬಹುದು ಎಂದು ಆತ ತೀರ್ಮಾನಕ್ಕೆ ಬಂದ.

ಆದರೆ ಇವಿಷ್ಟೇ ಆಧಾರದ ಮೇಲೆ ಯೇತಿಗಳಿವೆ ಎನ್ನುವ ನಿರ್ಧಾರಕ್ಕೆ ಬರಲಾಗುವುದಿಲ್ಲ. ಯೇತಿಗಳ ಇರುವಿಕೆಯ ಬಗ್ಗೆ ಇನ್ನಿತರ ಕುರುಹುಗಳನ್ನು ಅನೇಕರು ಕಂಡಿದ್ದಾರೆ. ಯೇತಿಗಳ ತಲೆಕೂದಲು ಹಾಗು ಚರ್ಮ ಇತ್ಯಾದಿಗಳನ್ನು ಸಂಗ್ರಹಿಸಿಟ್ಟುಕೊಂಡವರು ಹಿಮಾಲಯ ಪ್ರದೇಶದಲ್ಲಿ ಬಹಳ ಜನರಿದ್ದಾರೆ.

ಆದರೆ, ಈ ಬಗ್ಗೆ ಎಷ್ಟು ನಿಜ ಮತ್ತು ಎಷ್ಟು ಸುಳ್ಳು, ಹಾಗು ಇವುಗಳನ್ನು ನಾವು ಯಾವ ಆಧಾರದ ಮೇಲೆ ಸ್ವೀಕರಿಸಬೇಕು ಇತ್ಯಾದಿಗಳ ಬಗ್ಗೆ ಮುಂದಿನ ಬಾರಿ ವಿವರಿಸುವೆ.

ಅದೇ ಅಲ್ಲದೇ, ಯೇತಿಗಳು ಭೇಟಿ ನೀಡುತ್ತವೆ ಎನ್ನಲಾದ ದೇವಾಲಯದ ಬಗ್ಗೆ, ಯೇತಿಯ ಹೆಜ್ಜೆ ಕಂಡ ವೈಮಾನಿಕನೊಬ್ಬ ಇಂದಿನವರೆಗೂ ವಾಪಾಸು ಬರದೇ ಇರುವುದು..... ಇತ್ಯಾದಿ ರೋಚಕ ವಿಷಯಗಳಿಗಾಗಿ ಮುಂದಿನ ಸಂಚಿಕೆ ನಿರೀಕ್ಷಿಸುವಿರಿ ತಾನೇ? ■

ಹೆಜ್ಜೆ - 14

# ಆರೋಗ್ಯವೇ ಆಕರ್ಷಣೆಯ ಮೂಲ

**ಹಸಿವೆಯಾಗದೇ ಊಟಮಾಡಿದರೆ 'ಮೊಸರಿನಲ್ಲಿ ಕಲ್ಲು ಕಾಣವುದು' ನಿಶ್ಚಿತ. ಹಸಿವೆಯಾಗಿದೆಯೆಂದು ಹೊಟ್ಟೆಗೆ ಸ್ವಾತಂತ್ರ್ಯ ನೀಡಿದರೆ ಆಸ್ಪತ್ರೆ ದರ್ಶನ ಖಚಿತ.**

**ಕೆ**ಲವರನ್ನು ಕಂಡ ಕೂಡಲೇ ಅವರತ್ತ ಆಕರ್ಷಿತರಾಗುತ್ತೇವಲ್ಲವೇ? ಹಾಗಾದರೆ ಇಂಥ ಆಕರ್ಷಣೆಯ ಮೂಲಗಳನ್ನು ಕುರಿತು ಕೊಂಚ ಆಲೋಚಿಸುವಾ.

ಆರೋಗ್ಯ ಸೂಸುವ ವ್ಯಕ್ತಿಯನ್ನು ಕಾಣುವುದೇ ಒಂದು ಸಂತೋಷಕರ ಅನುಭವ. ವ್ಯಕ್ತಿತ್ವದ ಎಲ್ಲ ಅಪೇಕ್ಷಣೀಯ ಗುಣಗಳನ್ನು ಎತ್ತಿ ಹಿಡಿಯುವುದೂ, ಸುಧಾರಿಸುವುದೂ ಆರೋಗ್ಯ. ಉತ್ತಮ ಆರೋಗ್ಯ ಹೊಂದಿದವ ಉತ್ತಮ ಸಾಮಾಜಿಕ ಹೊಂದಾಣಿಕೆ ಸಾಧಿಸಬಲ್ಲ. ಏಕೆಂದರೆ ಅದು ಆತನನ್ನು ಮಾನಸಿಕ ಮತ್ತು ಭಾವನಾತ್ಮಕ ಕುಸಿತದಿಂದ ರಕ್ಷಿಸುತ್ತದೆ. ಉತ್ತಮ ಸಾಮಾಜಿಕ ಹೊಂದಾಣಿಕೆ ದೈಹಿಕ, ಮಾನಸಿಕ ಆರೋಗ್ಯದ ಉತ್ತಮಿಕೆಗೆ ಸಹಾಯ ಮಾಡುತ್ತದೆ.

ಅನಾರೋಗ್ಯವನ್ನು ಅನುಭವಿಸದವರಾರೂ ಇಲ್ಲ. ಕೆಲವರು ಹೆಚ್ಚು ಸಲ ಮತ್ತು ಮೇಲಿಂದ ಮೇಲೆ ಅನಾರೋಗ್ಯಪೀಡಿತರಾಗುವುದು ಅನುವಂಶಿಕತೆ, ಜನನ ಪೂರ್ವದ ಪರಿಸರ, ದೈನಂದಿನ ಜೀವನದ ಸ್ಥಿತಿಗತಿಗಳು ಇತ್ಯಾದಿಗಳನ್ನವಲಂಬಿಸಿದೆ.

ಸಮಾಜದೊಡನೆ ಸಾಮರಸ್ಯ ಸಾಧಿಸಿದವರು ಅನಾರೋಗ್ಯಕ್ಕೆ ಅಂಜುತ್ತಾರೆ. ವೈದ್ಯರ ಸಲಹೆ ಪಡೆದು ಮುಂಜಾಗರೂಕತೆಯ ಕ್ರಮಗಳನ್ನು ಕೈಕೊಳ್ಳುತ್ತಾರೆ. ಆದರೆ ಸಮಾಜದಿಂದ ದೂರ ವಿರುವವರು ಅನಾರೋಗ್ಯವನ್ನು ಸ್ವಾಗತಿಸುತ್ತಾರೆ! ಅದು ಅವರಿಗೆ ಪ್ರಚಾರ ಕೊಡುವ ಸಾಧನ. ತಮಗೆ ಮಾಡಲಸಾಧ್ಯವಾದ ಹಾಗೂ ಬೇಡವಾದ ಕೆಲಸಗಳನ್ನು ತಪ್ಪಿಸಿಕೊಳ್ಳಲೂ ಸಹ ಅನಾರೋಗ್ಯ ಅವರಿಗೆ ಸಹಾಯ ಮಾಡುತ್ತದೆ.

ಅಂಗಾಂಗಗಳ ನೈಸರ್ಗಿಕ ಸೌಂದರ್ಯದ ಮೂಲ, ನಿರೋಗಿತ್ವ, ಕಳೆಕಳೆಯಾದ ಆರೋಗ್ಯ ವ್ಯಕ್ತಿಗೆ ಸಮಚಿತ್ತ, ಉತ್ಸಾಹಗಳನ್ನು ಕೊಡುವ ಮೂಲಕ ಸಮಾಜದ ಮೆಚ್ಚಿಗೆ ಗಳಿಸಲು ಸಹಾಯ ಮಾಡುತ್ತದೆ. ಇಂಥ ಆರೋಗ್ಯ ಪಡೆಯಲು, ಅದನ್ನು ಉಳಿಸಿಕೊಳ್ಳಲು ಇರುವ ಸುವರ್ಣೋಪಾಯ; ಊಟ, ವ್ಯಾಯಾಮ, ನಿದ್ರೆ ಮುಂತಾದವುಗಳ ಬಗೆಗೆ ಸದಭ್ಯಾಸಗಳನ್ನು ನಿತ್ಯ ಜೀವನದಲ್ಲಿ ಬೇರೂರುವಂತೆ ಪ್ರಯತ್ನಿಸುವುದು. ಇಂಥ ಒಳ್ಳೆಯ ಅಭ್ಯಾಸಗಳನ್ನು ನಾವು ನಿತ್ಯವೂ ಪಾಲಿಸುತ್ತಿದ್ದರೆ 'ಆರೋಗ್ಯ ಕಾಯ್ದುಕೊಳ್ಳುವ ಅಗತ್ಯ' ವನ್ನು ಮರೆತುಬಿಡಬಹುದು!

ಹಸಿವೆಯಾಗದೇ ಊಟಮಾಡಿದರೆ 'ಮೊಸರಿನಲ್ಲಿ ಕಲ್ಲು ಕಾಣವುದು' ನಿಶ್ಚಿತ. ಹಸಿವೆಯಾಗಿದೆಯೆಂದು ಹೊಟ್ಟೆಗೆ ಸ್ವಾತಂತ್ರ್ಯ ನೀಡಿದರೆ ಆಸ್ಪತ್ರೆ ದರ್ಶನ ಖಚಿತ. ಕೆಲವರಿಗೆ ಬೇಸರ ನಿವಾರಿಸುವ ಸಾಧನ - ಏನನ್ನಾದರೂ ಆಗಾಗ ತಿನ್ನುವುದು. 'ಯಾಕೋ ಬೇಜಾರು, ಕಾಫೀನಾದರೂ ಹೀರಿ ಬರೋಣ' ಎಂದ ಹಾಗೆ. ತಮಗೆ ರುಚಿಸಿದ ಕೆಲಸದಲ್ಲಿ ಮುಳುಗಿ ಊಟವನ್ನೇ ಮರೆತವರು ಶಾಶ್ವತವಾಗಿ ಆದರ ಕೈಬಿಡಬೇಕಾಗಬಹುದು. ಊಟ ಮಾಡುತ್ತಿರುವಾಗ ಎಚ್ಚರವಿರಲಿ. ಒಂದು ಭಾಗ ಖಾಲಿ, ಇನ್ನೊಂದು ಭಾಗ ನೀರು, ಕೊನೆಯದೊಂದು ಭಾಗ ಆಹಾರ ಹೀಗೆ ನಿಮ್ಮ ತಿನ್ನುವಿಕೆಯನ್ನು ವ್ಯವಸ್ಥೆಗೊಳಿಸಿ.

ಊಟ ಪೂರೈಸಿತು. ಆದುದರಿಂದ ವ್ಯಾಯಾಮ ಅವಶ್ಯಕ. ದೈಹಿಕ ವ್ಯಾಯಾಮವನ್ನು ಒಂದು ಆನಂದದಾಯಕ ಕ್ರಿಯೆಯೆಂದು ತಿಳಿದು ಅದರಲ್ಲಿ ತೊಡಗಿದರೆ ಅದರ ಪರೋಕ್ಷ ಪರಿಣಾಮ ಆರೋಗ್ಯದ ಮೇಲೆ ಖಂಡಿತ ಉಂಟಾಗುವುದು. ಆದರೆ ಒಳ್ಳೆಯ ಆರೋಗ್ಯ ಹೊಂದುವ ಗುರಿಯನ್ನು ತಲುಪುತ್ತೇನೆಯೋ ಇಲ್ಲವೋ ಎಂದು ಅಳುಕುತ್ತ ಕೈಕೊಳ್ಳುವ ದೈಹಿಕ ವ್ಯಾಯಾಮ ನಿರರ್ಥಕವಾಗಬಹುದು.

'ನನಗೆ ನಿದ್ರೆ ಬರುವುದಿಲ್ಲ' ಎಂಬ ಚಿಂತೆ ನಿಮ್ಮನ್ನು ಕಾಡುತ್ತಿದೆಯೇ? ಅದೇ ನಿಮ್ಮ ನಿದ್ರಾಹೀನತೆಯ ಪ್ರಮುಖ ಕಾರಣವಾಗಿರಬಹುದು. 'ನಾನು ಸಾಕಷ್ಟು ನಿದ್ರೆ ಮಾಡಲಾರೆ' ಎಂಬ ಭಯ ನಿಮ್ಮ ಕಿವಿಗಳಲ್ಲಿ ರಿಂಗಣಿಸುತ್ತಿದ್ದರೆ ಕಾಲಾಂತರದಲ್ಲಿ ಅದು ನಿಮ್ಮ ಭಾವೋದ್ರೇಕಕ್ಕೆ ಕಾರಣವಾಗಬಹುದು. ನಮ್ಮಲ್ಲಿ ಬಹಳ ಜನಕ್ಕೆ ಬೇಕಾದುದು ಮೈ-ಮನಸ್ಸುಗಳನ್ನು ಸಡಿಲುಗೊಳಿಸುವ ವಿಶ್ರಾಂತಿ. ಇಂಥ 'ವಿಶ್ರಾಂತಿ' ಪಡೆಯುವುದನ್ನು ನೀವು ಸಾಧಿಸಿದರೆ ಅರ್ಧ ನಿದ್ರೆಯನ್ನು ಪೂರೈಸಿದ್ದಂತೆಯೇ. ಕೆಲವರು ಅತ್ಯಂತ ಕಡಿಮೆ ಅವಧಿಯ ನಿದ್ರೆ ಮಾಡುತ್ತಾರೆ; ಆ ನಿದ್ರೆ ಅತ್ಯಂತ ಗಾಢವಾದುದು; ಅವರು ಉಲ್ಲಸಿತರಾಗಿರುತ್ತಾರೆ. ಆದರೆ ಅವರು ಬೇರೊಂದನ್ನು ಸಾಧಿಸಿದ್ದಾರೆ; ಅವರು ನಿನ್ನಿನ ವಿಜಯಗಳ ಬಗೆಗೆ ಮೆಲುಕುಹಾಕುವುದಿಲ್ಲ; ಇಂದಿನ ಬವಣೆಗಳು ಅವರ ತಲೆ ಕಾಯಿಸುವುದಿಲ್ಲ; ನಾಳಿನ ಸೋಲಿನ ಬಗೆಗೆ ಅವರಿಗೆ ವ್ಯಗ್ರತೆಯಿಲ್ಲ.

ಒಟ್ಟಿನಲ್ಲಿ, ತಿನ್ನುವುದು, ಮಲಗುವುದು, ವ್ಯಾಯಾಮ, ವಿಶ್ರಾಂತಿ ಸ್ನಾನ ಇತ್ಯಾದಿಗಳ ಬಗೆಗೆ ಸದಭ್ಯಾಸಗಳನ್ನು ಬಾಲ್ಯದಲ್ಲಿ, ಇಲ್ಲವಾದರೆ ತಾರುಣ್ಯದಲ್ಲಾದರೂ ಚೆನ್ನಾಗಿ ರೂಢಿಸಿಕೊಳ್ಳುವು

ದುತ್ತಮ. ನಮ್ಮ ಆರೋಗ್ಯ ಯಾವ ಗುಣಮಟ್ಟದಲ್ಲಿದೆ ಎಂಬುದರ ಪರೀಕ್ಷೆ ಈ ಅಭ್ಯಾಸಗಳ ಮೂಲಕ ಸಾಧ್ಯವೆಂಬುದು ನೆನಪಿರಲಿ. ಉತ್ತಮ ಆರೋಗ್ಯ ಇಂಥ ಅಭ್ಯಾಸಗಳ ಉಪೋತ್ಪತ್ತಿ.

ಕೆಲವರ ಮುಖ ನೋಡಿ ಮಣೆ ಹಾಕುತ್ತೇವಲ್ಲವೇ?' ಏಕೆ ಆ ವ್ಯಕ್ತಿಯಮುಖ ಚೈತನ್ಯಪೂರ್ಣವಾಗಿದೆ! ಇಂಥ ಚೈತನ್ಯದ ಕಾರಣ? ಆ ವ್ಯಕ್ತಿಯ ಅನುಕರಣೀಯ ಸ್ವಾಸ್ಥ್ಯ-ಸ್ಥಿತಿ. ಅಂದರೆ ವ್ಯಕ್ತಿಯ ಆರೋಗ್ಯದ ಸ್ವರೂಪವು ಆಕೆಯ ದೈಹಿಕ ಚರ್ಯೆ ಹಾಗೂ ನಡತೆ ಇವು ಎರಡರ ಮುಖಾಂತರವೂ ವ್ಯಕ್ತಗೊಳ್ಳುತ್ತದೆಂದಾಯಿತು. ಚೈತನ್ಯಪೂರ್ಣ ನಡತೆಯ ವ್ಯಕ್ತಿ ಎಲ್ಲರ ಕಣ್ಮಣಿಯಾಗುತ್ತಾನೆ. ಶಕ್ತಿವಂತರು ಆತನ ಸಹಕಾರಕ್ಕಾಗಿ ಹಾತೊರೆದರೆ ಅಶಕ್ತರು, ಅಂಜುಗುಳಿಗಳು ಆತನ ಬೆಂಬಲ, ನೇತೃತ್ವಗಳನ್ನು ಬಯಸುತ್ತಾರೆ. ಆದರೆ ಚೈತನ್ಯಪೂರ್ಣರಾದ ಹಲವರು ತಮ್ಮ ಚೈತನ್ಯವನ್ನು ಸಮಾಜೋಪಯೋಗಿ ಕಾರ್ಯಗಳಲ್ಲಿ ತೊಡಗಿಸದೆ ವ್ಯರ್ಥಗೊಳಿಸುತ್ತಾರೆ. ಆಲಸ್ಯದ, ಅಜ್ಞಾನದ ಮುದ್ದೆಗಳಾಗಿರುವುದರ ಮೂಲಕ, ಅವರ ದೈಹಿಕ ಹಾವಭಾವ, ಚಲನೆಗಳು ನಕಾರಾತ್ಮಕವೂ, ನಿರಾಶಾದಾಯಕವೂ ಆಗಿರುತ್ತವೆ. ಇವರಿಗಾಗಿಯೇ 'ಎಚ್ಚರಗೊಳ್ಳು, ಎದ್ದೇಳು' ಎಂದಿರುವುದು. ಬಾಲ್ಯದಿಂದ ನೇರವಾಗಿ ವೃದ್ಧಾಪ್ಯದಲ್ಲಿ ಕಾಲಿರಿಸುವವರಿವರು! ನಮ್ಮ ಸುತ್ತಲಿನ ಜನ ಮಿಂಚುಗಣ್ಣುಗಳನ್ನೂ, ಪರಿಸರದತ್ತ ಜಾಗೃತವಾದ ಮುಖ-ಮನಸ್ಸು ಹೊಂದಿದವರನ್ನು ನೋಡಬಯಸುತ್ತಾರೆ. ಅಂಥವರಲ್ಲಿ ಅವರ ವಿಶ್ವಾಸ ಕುದುರುತ್ತದೆ. ಇಲ್ಲಿ ಇನ್ನೊಂದು ಮಾತು. ಚೈತನ್ಯಪೂರ್ಣ ವ್ಯಕ್ತಿ ತನ್ನ ಚೈತನ್ಯದ ಪೂರ್ಣ ಲಾಭ ಪಡೆಯಬೇಕಿದ್ದರೆ ಆಕೆ ಸ್ನೇಹಪರಳೂ ಆಗಿರಬೇಕಾದುದು ಅತ್ಯಗತ್ಯ.

ಶಕ್ತಿವಂತನೊಬ್ಬ ನಿಮ್ಮ ನೆರೆಯಲ್ಲಿದ್ದಾನೆಂದುಕೊಳ್ಳಿ. ಆತ ನಿಮ್ಮೊಡನೆ ಸ್ನೇಹಪರನಿರದಿದ್ದಲ್ಲಿ ಆತನ ಬಗೆಗೆ ನಿಮಗೆ ಭಯವುಂಟಾಗುತ್ತದೆ. ಆತನಿರುವು ನಿಮಗೆ ಅಸಹನೀಯವೂ ಆಗಬಹುದು. ಬೇರೆಯವರ ಸಹಾಯ, ಸಹಕಾರ, ವಿಶ್ವಾಸಗಳನ್ನು ನೀವು ಪಡೆಯಬೇಕಾದರೆ 'ಅದಲು-ಬದಲು ವ್ಯಾಪಾರದಲ್ಲಿ' ತೊಡಗಬೇಕು. ಹಣಕ್ಕೆ ಸಿಗುವ ವಸ್ತುಗಳಲ್ಲ ಅವು. ನಿಮ್ಮ ಸ್ನೇಹಪರತೆಯನ್ನು ಅವುಗಳ ಬದಲಿಗೆ ನೀವು ನೀಡಬೇಕು. ನಿಮ್ಮ ವೈಶಿಷ್ಟ್ಯಪೂರ್ಣ ವ್ಯಕ್ತಿತ್ವವೆಂಬ ಬತ್ತಳಿಕೆಯಿಂದ ಬಾಯಿಯೆಂಬ ಬಿಲ್ಲಿಗೆ, ಮೊದಲು ಸಂತೋಷಜನಕ ಮುಗುಳ್ನಗೆ ನಂತರ ಸ್ನೇಹಪರ ಶಬ್ದಗಳು ಎಂಬ ಬಾಣಗಳನ್ನು ಹೂಡಿ ಬೇರೆಯವರ ಮೇಲೆ ಪ್ರಯೋಗಿಸಿ ನೋಡಿ. ಎಂಥ ಸಮ್ಮೋಹನಾಸ್ತ್ರಗಳಿವು!

ಜನರೊಡನೆ ಬೆರೆಯುವಾಗ ನಮ್ಮ ಮನಸ್ಸು ನಿರ್ಮಲವಾಗಿರುವದಗತ್ಯ. ಆಗ ಮಾತ್ರ ನಮ್ಮ ನಡವಳಿಕೆಯಲ್ಲಿ ಮುಗ್ಧತೆ ಕಾಣುವುದು ಸಾಧ್ಯ. ಮುಗ್ಧತೆಯ ನೇರ ವೈರಿ ಬೂಟಾಟಿಕೆ, ಠಕ್ಕತನ. ಈ ಮುಸುಕು ಬಹಳ ಕಾಲ ಉಳಿಯುವುದಸಾಧ್ಯ. ಎಲ್ಲರನ್ನೂ ಎಲ್ಲ ಕಾಲಕ್ಕೂ ಮೋಸಗೊಳಿಸಲು ಸಾಧ್ಯವಿಲ್ಲ-ಕಪಟಿಗಳು ಅಶಕ್ತ ವ್ಯಕ್ತಿತ್ವದವರಾಗಿರುತ್ತಾರೆ.

ಸ್ನೇಹಪರತೆಯನ್ನು ಬೆಳೆಯಿಸಿಕೊಳ್ಳುವುದು ಹೇಗೆ? ನೀವು ಹದಿಹರೆಯದವಳೆಂದುಕೊಳ್ಳಿ, ಆದುದರಿಂದ ಒಂಟಿಯಾಗಿರುವಾಗಲೆಲ್ಲ ಹಗಲುಗನಸುಗಳಲ್ಲಿ ಮುಳುಗಿರುವುದು ಸ್ವಾಭಾವಿಕ. ಆಗ ನಿಮ್ಮ ಸ್ನೇಹಿತೆ ನಿಮ್ಮನ್ನು ಕಾಣಲು ಬಂದಳು. ಸ್ನೇಹಿತೆಯ ಜೊತೆಗೆ ಸಂವಾದಿಸುವಾಗ ನಿಮ್ಮ ಹಗಲುಗನಸು ಮುಂದುವರೆದರೆ ಅದು ಅಸಂಸ್ಕೃತ ನಡಾವಳಿ ಅಲ್ಲವೇ? ಕನಸನ್ನು ತುಂಡರಿಸಿ ಮಾತುಕತೆಯಲ್ಲಿ ತೊಡಗಿ. ಆದರೆ ನಿಮ್ಮ ಮಾತುಕತೆ ನಿಮ್ಮ ದೈಹಿಕ, ಮಾನಸಿಕ ತಕರಾರುಗಳ ಸುತ್ತ ಗಿರಕಿಹೊಡೆಯದಿರಲಿ; ಅವುಗಳನ್ನು ಚರ್ಚಿಸಬೇಕಾದ ಸ್ಥಳ 'ಡಾಕ್ಟರ್ ಶಾಪ್'.

ಬೇರೆಯವರು ಮಾತನಾಡುವಾಗ ನಿಮ್ಮ ನಾಲಿಗೆಗಿಂತ ಕಿವಿಗಳನ್ನು ಹೆಚ್ಚು ಬಳಸಿಕೊಳ್ಳಿ, ಅವರ ಮಾತುಗಳನ್ನು ಗಮನವಿಟ್ಟು ಕೇಳಿ. ಪರರ ವಿಚಾರ, ಅನುಭವಗಳಲ್ಲಿ ಆಸಕ್ತಿ ವಹಿಸಿ. ಬೇರೆಯವರ ತಪ್ಪುಗಳನ್ನು ನೀವು ಕಾಣಲೇ ಇಲ್ಲ, ಕೇಳಲೇ ಇಲ್ಲ ಎಂಬಂತೆ ನಟಿಸಿ. ಇದು ಲಾಭದಾಯಕ ನಟನೆ! ಎರಡೂ ಪಕ್ಷದವರಿಗೂ ಇದು ಮೆಚ್ಚಿಕೆಯದಾಗುತ್ತದೆ.

ಸ್ನೇಹಪರತೆಯನ್ನು ನೀವು ಅನುಭವಿಸಿ ಸ್ನೇಹಿತರೊಡನೆ ನಡೆದುಕೊಳ್ಳಬೇಕು. ಇಲ್ಲಿ ಕೃತ್ರಿಮತೆಗೆ ಸ್ಥಾನವಿಲ್ಲ. ಆತ್ಮೀಯತೆಯ ಪ್ರದರ್ಶನ ಎಷ್ಟು ರಕ್ತಗತವಾಗಿರಬೇಕೆಂದರೆ ಇದೇ ಈಗ ಪರಿಚಿತರಾಗಿರುವವರಿಗೂ ಅದರ ಕಲ್ಪನೆ ಬರಬೇಕು. ಯಾರು ಬಲ್ಲರು? ಇದೀಗ ಮೊಳಕೆಯೊಡೆದ ಪರಿಚಯ ಮುಂಬರುವ ದಿನಗಳಲ್ಲಿ ತ್ಯಾಗ-ಪ್ರೇಮಗಳ ಹೊಳೆ ಹರಿಸಬಲ್ಲದು. ಜೀವನವೆಂಬ ಪಂದ್ಯಾಟದಲ್ಲಿ ನೀವು ಜಯ ಗಳಿಸಲು ಇಂಥ ಎಷ್ಟೋ ಸಹಾಯಹಸ್ತಗಳ ಆವಶ್ಯಕತೆ ಇಲ್ಲದಿಲ್ಲ, ಅಲ್ಲವೇ?

ನೀವು ಸಂಧಿಸುವ ವ್ಯಕ್ತಿಯನ್ನು ಆತನ ಪೋಷಾಕು, ಕೈಯಲ್ಲಿಯ ವಸ್ತುಗಳು, ಒಂದೆರಡು ಪ್ರಾರಂಭಿಕ ಶಬ್ದಗಳು - ಒಟ್ಟಿನಲ್ಲಿ ಮೊದಲ ನೋಟದ ಪರಿಣಾಮದ ಆಧಾರದ ಮೇಲೆ ಅಳೆಯಬೇಡಿ. ಕೆಲವರನ್ನು ನೋಡಿದೊಡನೆ ನಿಮ್ಮಲ್ಲಿ 'ನನಗಿರುವಷ್ಟು ಜ್ಞಾನ ಇವಳಲ್ಲಿರುವುದು ಅಸಾಧ್ಯ' ಎಂಬ 'ಅಹಂ' ಉಗಮಿಸಬಹುದು. ಅದನ್ನು ಮೊಳಕೆಯಲ್ಲಿಯೇ ಚಿವುಟಿ ಹಾಕಿ. ತದ್ವಿರುದ್ಧವಾಗಿ, ನಿಮಗೆ ಎದುರಾಗುವ ಪ್ರತಿಯೊಬ್ಬನ ಬಗೆಗೂ 'ಈತನಿಂದ ನಾನು ಕಲಿಯಲು ಏನುಂಟು?' ಎಂದು ಚಿಂತಿಸಬಲ್ಲಿರಾದರೆ ಅದರಿಂದ ನಿಮ್ಮ ವ್ಯಕ್ತಿತ್ವಕ್ಕೆ ಎರಡು ಬಗೆಯ ಲಾಭಗಳಿವೆ; ಒಂದು, ನಿಮ್ಮ ಚರ್ಯೆ ಆಕರ್ಷಕವೂ, ಆನಂದಜನಕವೂ ಆಗುತ್ತದೆ; ಎರಡು ಈ ಅಭ್ಯಾಸ ನಿಮ್ಮನ್ನು ವಿಶಾಲ ಹೃದಯಿಗಳನ್ನಾಗಿಸುತ್ತದೆ.

- ಕೃಶಾಂಗ



## ಧಾರವಾಡದ ಓಟದ ರಾಣಿ

# ಮಹೇಶ್ವರಿ ಉದಗಟ್ಟಿ

ಅಪರಿಮಿತ ಕವಿ ಸಾಹಿತಿಗಳ ನಾಡಾದ್ದರ ಹಿನ್ನೆಲೆಯಲ್ಲಿ ಧಾರವಾಡ, ರಾಜ್ಯದ 'ಸಾಂಸ್ಕೃತಿಕ ರಾಜಧಾನಿ' ಯೆಂದೇ ಗುರುತಿಸಿಕೊಂಡಿದ್ದಿದೆ. ಆದರೆ ಇತ್ತೀಚಿಗೆ ಅದು ವೃತ್ತ ಪತ್ರಿಕೆಗಳ ಕ್ರೀಡಾಪುಟದಲ್ಲೂ ಸುದ್ದಿ ಮಾಡಿತು. ಇದಕ್ಕೆ ಕಾರಣ ಈ ನಾಡಿನ ಇಬ್ಬರು ಅತ್ಯಂತ ಪ್ರತಿಭಾನ್ವಿತ ಕಿರಿಯ ಅಥ್ಲೀಟ್‌ಗಳು ರಾಷ್ಟ್ರೀಯ ಕಿರಿಯರ ಅಥ್ಲೆಟಿಕ್ ತರಬೇತಿ ಶಿಬಿರಕ್ಕೆ ಆಯ್ಕೆಯಾದದ್ದು. ಮುಂದಿನ ವರ್ಷ ನಡೆಯಲಿರುವ ಕಿರಿಯರ ಏಷ್ಯನ್ ಅಥ್ಲೆಟಿಕ್ ಕೂಟಕ್ಕಾಗಿ ಭಾರತೀಯ ತಂಡವನ್ನು ಸಿದ್ಧ ಪಡಿಸುವ ದಿಸೆಯಲ್ಲಿ ಪಾಟಿಯಾಲಾ ಹಾಗೂ ಸಿಮ್ಲಾಗಳಲ್ಲಿ ನಡೆಸಲ್ಪಟ್ಟ



ಎರಡು ತಿಂಗಳ ಅವಧಿಯ ಈ ಶಿಬಿರಕ್ಕೆ 'ಅಕ್ಕ' ರೇಣುಕಾ ಹೆಡೆ ಅವಳೊಡನೆ ಆಯ್ಕೆಯಾದಳು. ಭಾರತೀಯ ಕ್ರೀಡಾ ಪ್ರಾಧಿಕಾರದ (ಸಾಯ್) ಧಾರವಾಡ ತರಬೇತಿ ಕೇಂದ್ರದ ಮಹೇಶ್ವರಿ ಎಲ್ ಉದಗಟ್ಟಿ, ಸದ್ಯ ಪ್ರಕಟಿಸಲ್ಪಟ್ಟಿರುವ ಎರಡನೇ ತರಬೇತಿ ಶಿಬಿರಕ್ಕೂ ಆಯ್ಕೆಯಾಗಿರುವ ಇವರಿಬ್ಬರ 'ಐಟಂ' ಗಳೂ ವಿಪರ್ಯಾಸದ್ದವುಗಳೇ. ರೇಣುಕಾ ಹೆಡೆ 3000 ಮೀ. 5000 ಮೀ. ಹಾಗೂ 10,000 ಮೀ. ಓಟಗಳಲ್ಲಿ ತನ್ನ ಹಿರಿಮೆ ಮೆರೆದರೆ, ನೀಳಕಾಯ ಓಟಗಾರ್ತಿ ಮಹೇಶ್ವರಿ 400 ಹಾಗೂ 800 ಮೀ. ಮಧ್ಯಾಂತರದ ಓಟದಲ್ಲಿ ಅದ್ಭುತ ಸಾಧನೆ ಗೈದಿದ್ದಾಳೆ.

ಮಹೇಶ್ವರಿ ಎಲ್ಲರ ಗಮನ ಸೆಳೆದಿದ್ದು ಕೇರಳದ ಎರ್ನಾಕುಲಂನಲ್ಲಿ ನಡೆದ ಜ್ಯೂನಿಯರ್ ರಾಷ್ಟ್ರೀಯ ಅಥ್ಲೆಟಿಕ್ ಕೂಟದಲ್ಲಿ 800 ಮೀ. ಓಟದ ಸ್ಪರ್ಧೆಯ ಚಿನ್ನದ ಪದಕ ಜಯಿಸಿದಾಗ. ಕೇವಲ 2 ನಿಮಿಷ 17 ಸೆಕೆಂಡುಗಳಲ್ಲಿ ಗುರಿ-ತಲುಪಿದ್ದು ಕಡಿಮೆ ಸಾಧನೆಯೇನಾಗಿರಲಿಲ್ಲ. ಪಾಟಿಯಾಲಾದಲ್ಲಿ ನಡೆದ ಕಿರಿಯ ರಾಷ್ಟ್ರೀಯ ಕ್ಯಾಂಪಿಗೆ ಆಕೆಯ ಸೀಟ್ 'ರಿಸರ್ವ್' ಮಾಡಿಸಲು ಆ ಸಾಧನೆ ಸಾಕಷ್ಟಾಯಿತು. ಶಿಬಿರದಲ್ಲಿ ಎರಡು ತಿಂಗಳು ಮಹೇಶ್ವರಿ ಪಡೆದ ತರಬೇತಿ, ಆಕೆಗೆ ಹಲವು ಮಹತ್ವದ ಅಂಶಗಳನ್ನು ಕಲಿಸಿಕೊಟ್ಟದಲ್ಲದೇ, ಆಕೆಯಲ್ಲಿದ್ದ ಆತ್ಮವಿಶ್ವಾಸಕ್ಕೆ ನೂರಾನೆ ಬಲ ತಂದಿತ್ತಿವೆ.

ಮಹೇಶ್ವರಿ ಓಡಲು ಟ್ರ್ಯಾಕ್‌ಗಳಿಗಿಳಿದಿದ್ದು ಹತ್ತರ ಹದಿವಯಸ್ಸಿನಲ್ಲಿ. ಆಗ ಆರನೇ ತರಗತಿಯ ಬಾಲೆಯಾಕೆ. ಕೋಲಾರದಲ್ಲಿ ನಡೆದ ರಾಜ್ಯಮಟ್ಟದ ಶಾಲಾ ಕ್ರೀಡಾಕೂಟದ 400 ಮೀ. ಓಟದ ಸ್ಪರ್ಧೆಯಲ್ಲಿ ಮೂರನೇ ಸ್ಥಾನ ಗಿಟ್ಟಿಸಿದ್ದು, ಆಕೆಗೆ ತಾನೀ ಕ್ಷೇತ್ರದಲ್ಲಿ ಸಾಕಷ್ಟನ್ನು ಸಾಧಿಸಬಲ್ಲೆನೆಂಬ ಆತ್ಮವಿಶ್ವಾಸ ತುಂಬಿಸಿತು. ಜೆ.ಪಿ. ಅಳಗೂರ ಅವರ ಮಾರ್ಗದರ್ಶನದಲ್ಲಿ ಆಕೆಯ ಓಟದ ಅಭ್ಯಾಸ ಪ್ರಾರಂಭವಾಗಿಯೇ ಬಿಟ್ಟಿತು. ಸ್ವಲ್ಪ ಸಮಯದಲ್ಲೇ ಮಹೇಶ್ವರಿ 'ಗೆಲ್ಲುವ ಕುದುರೆ' ಯಾದಳು. ಬೀದರ್‌ನಲ್ಲಿ ನಡೆದ ರಾಜ್ಯಮಟ್ಟದ ಶಾಲಾ ಕ್ರೀಡಾಕೂಟ ಅವಳ ಅಥ್ಲೆಟಿಕ್ ಜೀವನದ ದಿಕ್ಕನ್ನೇ ಬದಲಿಸಿತು. 400 ಮೀಟರ್ ಹಾಗೂ 800 ಮೀಟರ್ ಓಟಗಳೆರಡರಲ್ಲೂ ಚಿನ್ನಕ್ಕೇ ಗುರಿಯಿಟ್ಟ ಈ 'ಚಿಗರೆ' 200 ಮೀಟರ್‌ನ ಬೆಳ್ಳಿ ಪದಕವನ್ನೂ ಗಿಟ್ಟಿಸಿ ಕೂಟದ ವೈಯಕ್ತಿಕ ಪ್ರಶಸ್ತಿಗೆ ಲಗ್ಗೆ ಹಾಕಿದಳು. ನಂತರ ನಡೆದ ಶಾಲೆಗಳ ರಾಷ್ಟ್ರೀಯ ಕ್ರೀಡಾಕೂಟದ 800 ಮೀಟರ್ ಓಟದಲ್ಲಿ ಗಳಿಸಿದ 4 ನೇ ಸ್ಥಾನ ಆಕೆಯ ಸಾಧನೆಯನ್ನು ರಾಜ್ಯದ ಗಡಿಯಾಚೆಯವರೂ ಅಚ್ಚರಿಯಿಂದ ನೋಡುವಂತೆ ಮಾಡಿತು.

ಭಾರತೀಯ ಕ್ರೀಡಾ ಪ್ರಾಧಿಕಾರದ (ಸಾಯ್) ಧಾರವಾಡದ ತರಬೇತಿ ಕೇಂದ್ರದಲ್ಲಿ ಪ್ರವೇಶ ದೊರಕಿಸಿಕೊಂಡ ನಂತರ ಎಸ್.ಎಸ್. ಅಗಡಿ, ಮಹೇಶ್ವರಿಯ ಜವಾಬ್ದಾರಿ ವಹಿಸಿಕೊಂಡರು. ಒಂಭತ್ತನೇ ತರಗತಿಯಲ್ಲಿ



ಇನ್ನೂ ಹದಿವಯದ ಮಹೇಶ್ವರಿಗೆ ತಾನು ಕಂಡಿರುವ ಕನಸನ್ನು ಸಾಕಾರಗೊಳಿಸಲು ಸಾಕಷ್ಟು ಸಮಯವಿದೆ. ಬೇಕಿರುವುದು ಸಾಧಿಸಿಯೇ ತೀರುತ್ತೇನೆಂಬ ಛಲ ಮಾತ್ರ. ಅದನ್ನು ತೊಟ್ಟಿದ್ದಾದರೆ 'ಪಯ್ಯೋಳಿ ಎಕ್ಸ್‌ಪ್ರೆಸ್', ಪಿ.ಟಿ. ಉಷಾರಂತೆ ಮುಂದೊಂದು ದಿನ ಹೊನ್ನಿಗೇ ಗುರಿಯಿಡುವ ಸಾಮರ್ಥ್ಯ ಈ ನಮ್ಮ 'ಕಿತ್ತೂರ ಎಕ್ಸ್‌ಪ್ರೆಸ್' ಗೂ ದೊರಕೀತು

ಓದುತ್ತಿದ್ದಾಗ ರಾಜ್ಯ ಮಟ್ಟದ ಶಾಲಾ ಕ್ರೀಡಾ ಕೂಟದಲ್ಲಿ ಮತ್ತೆ 400 ಮೀಟರ್ ಓಟದಲ್ಲಿ ಎರಡನೇ ಹಾಗೂ 800 ಮೀಟರ್ ಓಟದಲ್ಲಿ ಮೂರನೇ ಸ್ಥಾನ ಪಡೆದ ಮಹೇಶ್ವರಿ ನಂತರ ರಾಷ್ಟ್ರೀಯ ಶಾಲಾ ಕ್ರೀಡಾಕೂಟದ 800 ಮೀಟರ್ ಓಟದಲ್ಲಿ ಮತ್ತೆ ನಾಲ್ಕನೇಯವರಾದಳು. ಚಂಡೀಗಢದಲ್ಲಿ ನಡೆದ ರಾಷ್ಟ್ರೀಯ ಮಹಿಳಾ ಕ್ರೀಡಾಕೂಟದ 800 ಮೀಟರ್ ಓಟದಲ್ಲೂ ಮಹೇಶ್ವರಿ ಅದೇ ಸಾಧನೆಗೈದಳು.

ಮುಂದಿನ ವರ್ಷ ಮಹೇಶ್ವರಿ ಜೀವನದಲ್ಲಿ ಅತ್ಯಂತ ಮಹತ್ವದ್ದು. ರಾಜ್ಯಶಾಲಾ ಕ್ರೀಡಾಕೂಟದ 400 ಹಾಗೂ 800 ಮೀಟರ್ ಸ್ಪರ್ಧೆಗಳೆರಡರಲ್ಲೂ ಚಿನ್ನದ ಪದಕ ಗೆದ್ದಿದ್ದಲ್ಲದೇ 400 ಮೀಟರ್ ಓಟದಲ್ಲಿ ಹೊಸ ರಾಜ್ಯ ದಾಖಲೆಯನ್ನು ಬರೆದ ಕೀರ್ತಿಗೂ ಅವಳು ಪಾತ್ರರಾದರು. ಈ ಸಾಧನೆ ಅವಳಿಗೆ ಏರ್ನಾಕುಲಂನ ರಾಷ್ಟ್ರೀಯ ಜ್ಯೂನಿಯರ್ ಅಥ್ಲೆಟಿಕ್ಸ್ ಕೂಟದಲ್ಲಿ ಪಾಲ್ಗೊಳ್ಳಲಿದ್ದ ರಾಜ್ಯ ತಂಡದಲ್ಲಿ ಆಯ್ಕೆಯಾಗಲೂ ಸಹ ನೆರವಾಯಿತು.

ಮಹೇಶ್ವರಿ ಹಲವು ಕ್ರಾಸ್ ಕಂಟ್ರಿ (ಗುಡ್ಡಗಾಡು) ಓಟದ ಸ್ಪರ್ಧೆಗಳಲ್ಲೂ ಪಾಲ್ಗೊಂಡು ಎಲ್ಲದರಲ್ಲೂ ಬಹುಮಾನ ಗೆದ್ದಿದ್ದಾಳೆ. ಪ್ರಸಕ್ತ ವರ್ಷದ ಪ್ರಾರಂಭದಲ್ಲಿ ಧಾರವಾಡದಲ್ಲೇ ನಡೆದ ರಾಜ್ಯ ಕ್ರಾಸ್‌ಕಂಟ್ರಿ ಚಾಂಪಿಯನ್‌ಶಿಪ್‌ನ ತನ್ನ ವಯೋಮಿತಿ ಗುಂಪಿನಲ್ಲಿ ಚಿನ್ನದ ಪದಕ ಗೆದ್ದಿದ್ದು ಬಹುಶಃ ಅವಳ ಇದುವರೆಗಿನ ಅತ್ಯುತ್ತಮ ಸಾಧನೆ.

ಜಮಖಂಡಿಯಲ್ಲಿ ಹುಟ್ಟಿ ಬೆಳೆದ ಮಹೇಶ್ವರಿ ಅದ್ಭುತ ಪ್ರಯತ್ನ ಶೀಲೆ. ತನ್ನ ಗುರಿಯನ್ನಾಗಲೇ ನಿರ್ಧರಿಸಿಕೊಂಡಿರುವ ಈ ಓಟಗಾರ್ತಿ ಈಗ ಅದರ ಸಾಧನೆಯ ಬೆನ್ನು ಹತ್ತಿದ್ದಾಳೆ. ತಂದೆ ಲಕ್ಷ್ಮಣ, ತಾಯಿ ಸುಮಿತ್ರಾ ಅವರ ಅಪರಿಮಿತ ಪ್ರೋತ್ಸಾಹದ ಜೊತೆಗೆ ಭಾರತೀಯ ಕ್ರೀಡಾ ಪ್ರಾಧಿಕಾರದ ಧಾರವಾಡದ ಸಹಾಯಕ ನಿರ್ದೇಶಕ ಎಂ.ಎ. ಪಾಟೀಲ ಅವರ ಮಾರ್ಗದರ್ಶನದಲ್ಲಿ ಅವಳೀಗ ತನ್ನ ಜೀವನದ 'ಅಗ್ನಿಪರೀಕ್ಷೆ'ಗೆ ಸಜ್ಜಾಗಿದ್ದಾಳೆ.

ತರಬೇತುದಾರ ಎಸ್. ಎಸ್. ಅಗಡಿ ಹೇಳುವಂತೆ ಮಹೇಶ್ವರಿ ಓರ್ವ ಅತ್ಯಂತ ಶಿಸ್ತಿನ, ಪ್ರಾಮಾಣಿಕ ಹಾಗೂ ಪ್ರಯತ್ನ ಶೀಲ ಅಥ್ಲೀಟ್. ಸದ್ಯ ಅವಳಿಗೆ ಬೇಡಿರುವುದು ಇನ್ನಷ್ಟು ಶಕ್ತಿ, ಪ್ರಮುಖ ಕೂಟಗಳಲ್ಲಿ ಪಾಲ್ಗೊಳ್ಳುವ ಅವಕಾಶ ಹಾಗೂ ಇವೆಲ್ಲಕ್ಕೂ ಮಿಗಿಲಾಗಿ ಆ ಅದೃಷ್ಟ ದೇವತೆಯ ಸಹಾಯ ಹಸ್ತ.

ಹಿಂದೊಮ್ಮೆ ಬೆಳಗಾವಿಯಲ್ಲಿ ಓಡುವಾಗ (ಬರಿಗಾಲಲ್ಲಿ) ಕಾಲಿಗೆ ನೆಟ್ಟಿದ್ದ ಗಾಜಿನ ಪರಿಣಾಮವಾಗಿ ಇತ್ತೀಚೆಗಷ್ಟೇ ಕಿರು ಶಸ್ತ್ರ ಚಿಕಿತ್ಸೆಗೂ ಒಳಗಾಗಬೇಕಾಗಿ ಬಂದ ಮಹೇಶ್ವರಿ ಆ ಹರ್ಡಲ್ ದಾಟಿ ತನ್ನ ಎಂದಿನ ಓಟಕ್ಕೆ ಸಜ್ಜಾಗಿದ್ದಾಳೆ. ತನ್ನ ಸಾಮರ್ಥ್ಯ ಮಗದೊಮ್ಮೆ ಸಿದ್ಧಪಡಿಸಲು ಸೂಕ್ತ ಅವಕಾಶಕ್ಕೆ ತುದಿಗಾಲಲ್ಲೇ ಕಾಯುತ್ತಿದ್ದಾಳೆ. ಪಾಟಿಯಾಲಾದಲ್ಲಿ ಸಧ್ಯ ನಡೆದಿರುವ ರಾಷ್ಟ್ರೀಯ ಜ್ಯೂನಿಯರ್ 2ನೇ ಹಂತದ ತರಬೇತಿ ಶಿಬಿರಕ್ಕೆ ಈ ತಿಂಗಳ ಕೊನೆಯಲ್ಲಿ ಸೇರಿಕೊಳ್ಳಲಿರುವ ಅವಳು ಅಕ್ಟೋಬರ್‌ನಲ್ಲಿ ಮಣಿಪುರದಲ್ಲಿ ನಡೆಯಲಿರುವ 5ನೇ ರಾಷ್ಟ್ರೀಯ ಕ್ರೀಡಾಕೂಟದಲ್ಲಿ ಪಾಲ್ಗೊಳ್ಳಲಿರುವ ಕರ್ನಾಟಕ ರಾಜ್ಯ ತಂಡದಲ್ಲಿ ಸೇರ್ಪಡೆಯಾಗುವ ಗುರಿ ಹೊಂದಿದ್ದಾಳೆ.

ಇನ್ನೂ ಹದಿವಯದ ಮಹೇಶ್ವರಿಗೆ ತಾನು ಕಂಡಿರುವ ಕನಸನ್ನು ಸಾಕಾರಗೊಳಿಸಲು ಸಾಕಷ್ಟು ಸಮಯವಿದೆ. ಬೇಕಿರುವುದು ಸಾಧಿಸಿಯೇ ತೀರುತ್ತೇನೆಂಬ ಛಲ ಮಾತ್ರ. ಅದನ್ನು ತೊಟ್ಟಿದ್ದಾದರೆ 'ಪಯ್ಯೋಳಿ ಎಕ್ಸ್‌ಪ್ರೆಸ್', ಪಿ.ಟಿ. ಉಷಾರಂತೆ ಮುಂದೊಂದು ದಿನ ಹೊನ್ನಿಗೇ ಗುರಿಯಿಡುವ ಸಾಮರ್ಥ್ಯ ಈ ನಮ್ಮ 'ಕಿತ್ತೂರ ಎಕ್ಸ್‌ಪ್ರೆಸ್' ಗೂ ದೊರಕೀತು.

■ ವಸಂತ ಮುರ್ಡೇಶ್ವರ

# ಸಹರಾ ಕಪ್ ರೋಚಕ ಪೈಪೋಟಿಗೆ ಸಜ್ಜು

ಏಷ್ಯಾ ಉಪಖಂಡದ ಎರಡು ಪ್ರಬಲ ವಿರೋಧಿ ರಾಷ್ಟ್ರಗಳೆಂದರೆ ಒಂದು ಭಾರತ ಮತ್ತೊಂದು ಪಾಕಿಸ್ತಾನ. ಎಲ್ಲ ರಂಗಗಳಲ್ಲು ಒಂದು ಮತ್ತೊಂದಕ್ಕೆ ಪೈಪೋಟಿ ನೀಡುತ್ತಲೇ ಇರುತ್ತವೆ. ಎಷ್ಟೋ ಬಾರಿ ಇವು ಅಹಿತಕರ ಪೈಪೋಟಿಗಳಿಗೆ ಕೈ ಹಾಕುವುದೇ ಹೆಚ್ಚು. ಇದಕ್ಕೆ ಸ್ಪಷ್ಟ ಉದಾಹರಣೆಯೆಂದರೆ ಕಳೆದ ಮೇ ತಿಂಗಳಲ್ಲಿ ಎರಡೂ ರಾಷ್ಟ್ರಗಳು ನಡೆಸಿದ ಅಣ್ವಸ್ತ್ರ ಪರೀಕ್ಷೆ. ಭಾರತ ಪೋಖ್ರಾನ್‌ನಲ್ಲಿ ಅಣುಬಾಂಬ್ ಪರೀಕ್ಷೆ ನಡೆಸಿದ ಕೂಡಲೇ ಪಾಕಿಸ್ತಾನ ಕೂಡ ಅದಕ್ಕೆ ಪ್ರತಿಕ್ರಿಯಿಸಿತು. ಭಾರತ ಪಾಕಿಸ್ತಾನಗಳಿಗೆ ಇನ್ನಷ್ಟು ಸ್ಪರ್ಧಾ ಸ್ಫೂರ್ತಿ ದೊರೆತಿರುವುದೇ ಕ್ರೀಡಾರಂಗದಲ್ಲಿ, ಅದರಲ್ಲೂ ಕ್ರಿಕೆಟ್‌ನಲ್ಲಿ.

ಭಾರತ್-ಪಾಕ್ ನಡುವೆ ಕ್ರಿಕೆಟ್ ಪಂದ್ಯ ನಡೆಯುತ್ತಿದೆ ಎಂದರೆ ಅಲ್ಲಿ ತೀವ್ರತರ ಹೋರಾಟದ ಮನೋಭಾವಗಳು, ಕುತೂಹಲಕರವಾಗಿಯೇ ಮುಂದುವರಿಯುವ ಪ್ರಸಂಗಗಳು, ಇದಲ್ಲದೆ ಘರ್ಷಣಾತ್ಮಕ ಸನ್ನಿವೇಶಗಳು ಕೂಡ ಒಂದಲ್ಲಾ ಒಂದು ರೀತಿಯಲ್ಲಿ ನೆಲೆಯೂರಿರುತ್ತವೆ. ಅದು ಕೇವಲ ಪಂದ್ಯವಾಗಿರದೆ ಅಘೋಷಿತ ಯುದ್ಧವಾಗಿರುತ್ತದೆ. ಇಂತಹ ಇನ್ನೊಂದು ಸಮರಕ್ಕೆ ಈಗ ಎರಡೂ ರಾಷ್ಟ್ರಗಳು ಸಜ್ಜಾಗುತ್ತಿವೆ. ಅದೇ ಬರುವ ಸೆಪ್ಟಂಬರ್ 12 ರಿಂದ 20ರ ವರೆಗೆ ನಡೆಯಲಿರುವ 'ಸಹರಾ ಕಪ್' ಕ್ರಿಕೆಟ್ ಟೂರ್ನಿ.

ಭಾರತ ಪಾಕಿಸ್ತಾನಗಳ ನಡುವೆ ರಾಜಕೀಯವಾಗಿ ಬಾಂಧವ್ಯಗಳು ಹಳಸಿದ್ದಾಗ ಅವುಗಳ ಕ್ರೀಡಾ ನಂಟು ಕೂಡ ಅಷ್ಟಕ್ಕಷ್ಟೇ ಆಗಿತ್ತು. ಉಭಯ ರಾಷ್ಟ್ರಗಳಲ್ಲಿ ಪಂದ್ಯಗಳನ್ನಾಡುವಾಗ ಅಲ್ಲಿ ನಿರ್ಭಯ ವಾತಾವರಣ ಬಲು ಕಡಿಮೆ. ಅದರಲ್ಲೂ ಪಾಕಿಸ್ತಾನದ ಕರಾಚಿಯಲ್ಲಿ ಪಂದ್ಯವನ್ನಾಡುವುದು ಸಾಧ್ಯವೇ ಇಲ್ಲ ಎಂಬಷ್ಟು ಮಟ್ಟಿಗೆ ಪರಿಸ್ಥಿತಿ ನಿರ್ಮಾಣವಾಗಿದೆ. ಭಾರತದಲ್ಲೂ ಪಾಕಿಸ್ತಾನ ಕ್ರಿಕೆಟ್ ಆಡಲು ಹೆಚ್ಚಾಗಿ ಅಸಮ್ಮತಿಯನ್ನೇ ತೋರುತ್ತದೆ. 80ರ ದಶಕದಲ್ಲಿ ಈ ಎರಡು ರಾಷ್ಟ್ರಗಳನ್ನು ಕ್ರೀಡೆಯಲ್ಲಾದರೂ ಒಂದುಗೂಡಿಸುವ ಪ್ರಯತ್ನಕ್ಕೆ ಕಂಕಣಬದ್ಧವಾಗಿ ನಿಂತಿದ್ದು ಮರಳುಗಾಡಿನ ಕ್ರಿಕೆಟ್ ತಾಣವಾಗಿದ್ದ 'ಶಾರ್ಜಾ'. ಆದರೆ ಬರಬರುತ್ತಾ ಇದೂ ಕೂಡ




**ಭಾರತ ಪಾಕಿಸ್ತಾನಗಳ ನಡುವಿನ ಕ್ರಿಕೆಟ್ ಆಟವೆಂದರೆ ಸಾಕ್ಷಾತ್ ಸಮರ ಸ್ವರೂಪವೇ. ಸೆಪ್ಟಂಬರ್ 12 ರಿಂದ ನಡೆಯಲಿರುವ 'ಸಹರಾಕಪ್' ಟೂರ್ನಿಯಲ್ಲಿ ಇಂಥ ಇನ್ನೊಂದು ಸೆಣಸಾಟಕ್ಕೆ ಅವಕಾಶ ಉಂಟಾಗಿದೆ.**

ಶತ್ರುತ್ವದ ಭಾವನೆಯನ್ನು ಕಲ್ಪಿಸಿತು. ಪಾಕಿಸ್ತಾನ ಈ ಮೈದಾನದಲ್ಲಿ ಶಾಂತಿ ತೃಪ್ತಿಯನ್ನು ಪಡೆದರೆ ಭಾರತ ಸಹಿಸಲಾರದಂತಹ ಬೇನೆಯನ್ನು ಪಡೆಯಿತು. ಆದರೂ ಇವೆರಡರ ನಡುವೆ ಆರೋಗ್ಯ ಪೂರ್ಣವಾದ ಕ್ರೀಡಾ ಸಂಬಂಧವನ್ನು ಬೆಳೆಸುವಲ್ಲಿ ಮುಂದೆ ಬಂದ ಮತ್ತೊಂದು ಸ್ಥಳವೇ ಕೆನಡಾ ದೇಶದ ಟೊರಾಂಟೊ.

1996ರ ಸೆಪ್ಟಂಬರ್ ತಿಂಗಳಲ್ಲಿ ಭಾರತ -ಪಾಕ್ ನಡುವಿನ ಪ್ರಥಮ ಟೂರ್ನಿ ಇಲ್ಲಿ ನಡೆಯಿತು. ಐದು ಪಂದ್ಯಗಳ ಈ ಸರಣಿಯಲ್ಲಿ ಮೊದಲ ನಾಲ್ಕು ಪಂದ್ಯಗಳು ಸಮಬಲ ಕಾದಾಟದಲ್ಲಿ ಮುಕ್ತಾಯಗೊಂಡು ಕೊನೆಯ ಪಂದ್ಯವನ್ನು ಪಾಕಿಸ್ತಾನ ಕಸಿದುಕೊಂಡಿತು. ಆಗ ಭಾರತದ ಪರ ಸಚಿನ್ ತೆಂಡೂಲ್ಕರ್ ಹಾಗು ಪಾಕಿಸ್ತಾನದ ಪರ ವಾಸಿಂ ಅಕ್ರಂ ನಾಯಕರಾಗಿದ್ದರು.

ದ್ವಿತೀಯ ಟೂರ್ನಿ 1997 ರ ಸೆಪ್ಟಂಬರ್ 13ರಿಂದ 21ರ ವರೆಗೆ ನಡೆಯಿತು. ತೆಂಡೂಲ್ಕರ್ ನೇತೃತ್ವದ ಭಾರತ ತಂಡ ರಮೀಜ್ ರಾಜಾ ನೇತೃತ್ವದ ಪಾಕ್ ತಂಡವನ್ನು ಏಕಪಕ್ಷೀಯವಾಗಿ ಸೋಲಿಸಿತು. 5 ಪಂದ್ಯಗಳಲ್ಲಿ ಮೊದಲ ನಾಲ್ಕರಲ್ಲಿ ಗೆದ್ದು ಪಾಕಿಸ್ತಾನಕ್ಕೆ ಹೀನಾಯ ಸೋಲುಣಿಸಿತು. ಭಾರತದ ಸೌರವ್ ಗಂಗೂಲಿ ಸತತ ನಾಲ್ಕು ಪಂದ್ಯಗಳಲ್ಲಿ ಪಂದ್ಯಶ್ರೇಷ್ಠನಾಗುವ ಮೂಲಕ ವಿಶ್ವದಾಖಲೆ ನಿರ್ಮಿಸಿದರು. ಅಲ್ಲದೆ ಅವರು ಸರಣಿಯ ಸರ್ವೋತ್ತಮರೂ ಆದರು.

ಇದೀಗ ಈ ಮೈದಾನದಲ್ಲಿ ಸಾಂಪ್ರದಾಯಿಕ ವಿರೋಧಿಗಳ ಹೋರಾಟದ ಮೂರನೆಯ ವರ್ಷ. ಭಾರತ ತಂಡದ ಪ್ರಸಕ್ತ ಸ್ಥಿತಿಯನ್ನು ಗಮನಿಸಿದಾಗ ಮಾನಸಿಕವಾಗಿ ಹಾಗು ದೈಹಿಕವಾಗಿ ಸುಸ್ಥಿತಿಯಲ್ಲಿದೆ. 1998ರ ವರ್ಷಾರಂಭದಿಂದ ಇದುವರೆಗೆ ಆಡಿದ ಐದು ಏಕದಿನ ಸರಣಿಗಳಲ್ಲಿ ನಾಲ್ಕನ್ನು ಗೆಲ್ಲುವ ಮೂಲಕ ಇತರ ತಂಡಗಳಿಗೆ ತನ್ನ ಶಕ್ತಿಯ ಮನವರಿಕೆ ಮಾಡಿಕೊಟ್ಟಿದೆ. ವಿಶ್ವವಿಖ್ಯಾತ ಬೌಲರ್‌ಗಳನ್ನು ಬೆವರಿಳಿಸುವ ಸೌರವ್ - ಸಚಿನ್‌ರ ಶ್ರೇಷ್ಠ ಓಪನಿಂಗ್ ಜೊತೆಯಾಟ, ಅಜರುದ್ದೀನ್‌ರವರ ಯಶಸ್ವಿ ನಾಯಕತ್ವ, ಜಡೇಜಾ- ರಾಬಿನ್‌ಸಿಂಗ್‌ರ ಉಪಯುಕ್ತ ಮಧ್ಯಮಕ್ರಮಾಂಕ, ಅಗರ್ಕರ್ ಕಾನಿಟ್ಕರ್‌ರವರ ಆಲ್‌ರೌಂಡ್ ಆಟಗಳು ಭಾರತೀಯ ತಂಡದಲ್ಲಿ ಎದ್ದು ಕಾಣುವ ಅಂಶಗಳಾಗಿವೆ.

ಇದೇ ವೇಳೆ ಪಾಕಿಸ್ತಾನ ತಂಡದಲ್ಲಿ ಸಮತೋಲನವಿಲ್ಲ, ಅಲ್ಲಿ ನಾಯಕತ್ವದ ಸಮಸ್ಯೆ ಕಾಡುತ್ತಿದೆ. ವಾಸಿಂ ಅಕ್ರಂರವರ ರಾಜೀನಾಮೆಯ ಬಳಿಕ ನಾಯಕತ್ವ ಪಡೆದ ರಶೀದ್ ಲತೀಫ್ ತಂಡ ಕೂಡ ಕಳಪೆ ಪ್ರದರ್ಶನಗಳನ್ನು ನೀಡುವುದರೊಂದಿಗೆ ನಾಯಕ ಪಟ್ಟವನ್ನು ತೂಗುಯ್ಯಾಲೆಯಾಗಿರಿಸಿದೆ. ಸಯೀದ್ ಅನ್ವರ್, ಇಜಾಜ್ ಅಹಮದ್, ಇಂಜಾಮಾಮ್ ಅವರು ತಮ್ಮ ಎಂದಿನ ಫಾರ್ಮ್ ಕಂಡುಕೊಂಡಿದ್ದೇ ಆದಲ್ಲಿ ಹೋರಾಟದ ಕಾವು ಮತ್ತಷ್ಟು ಏರುವುದರಲ್ಲಿ ಸಂಶಯವೇ ಇಲ್ಲ.

ಇದುವರೆಗೆ ಭಾರತ-ಪಾಕಿಸ್ತಾನಗಳು 66 ಏಕದಿನ ಪಂದ್ಯಗಳನ್ನಾಡಿವೆ. ಭಾರತ 28ರಲ್ಲಿ ಜಯ ಪಡೆದಿದ್ದರೆ ಪಾಕಿಸ್ತಾನ 38 ಪಂದ್ಯಗಳಲ್ಲಿ ಗೆಲುವು ಸಾಧಿಸಿದೆ. 4 ಪಂದ್ಯಗಳು ರದ್ದಾಗಿವೆ. ದಾಖಲೆಗಳ ಲೆಕ್ಕಾಚಾರದಲ್ಲಿ ಪಾಕಿಸ್ತಾನ ಮೇಲುಗೈ ಸಾಧಿಸಿದ್ದರೂ ಕೂಡ ಇತ್ತೀಚಿನ ದಿನಗಳಲ್ಲಿ ಭಾರತಕ್ಕೆ ಸವಾಲು ಹಾಕುವುದು ಅದಕ್ಕೆ ಅಷ್ಟು ಸುಲಭವಲ್ಲ. ಗೆಲುವಿನ ಕುದುರೆಯನ್ನೇರಿ ಕುಳಿತಿರುವ ಭಾರತಕ್ಕೆ ಸೋಲಿನ ಕಹಿಯನ್ನು ಪಾಕಿಸ್ತಾನ ನೀಡುವುದೇ ಎಂಬುದಕ್ಕೆ ಈ ಬಾರಿಯ ಸಹರಾ ಕಪ್ ವೇದಿಕೆಯಾಗಲಿದೆ.

**-ಗರ್ತಿಕೆರೆ ವಿ. ಪ್ರಕಾಶ್**

---

### ಮೊಡವೆ

'ಮೊಡವೆ ಮೊಡವೆ' ಎಂದು
ಬ್ಯೂಟಿ ಕ್ರೀಂ ಬಳಿದಾಗಲೂ ಕನ್ಯೆಯ
ಕೆನ್ನೆಯಾಕಾಶದಿ
ಸದಾ ಮಿನುಗುತ್ತಲೇ ಇರುವ ತಾರೆಗಳು.

- ಶ್ರೀ ಶೈಲ

---

### ದುಷ್ಕಾಲ

ಎಂಥ ದುಷ್ಕಾಲ ಬಂತಪ್ಪ ಕೊನೆಗೆ
ಭೀಕರ ಬರಗಾಲ ಬಿಹಾರದೊಳಗೆ
ಕುರಿಕತ್ತೆ, ದನಕರು, ತಿಂಬಂಥ ಮೇವು
ಮಂದಿ ತಿನ್ನುವರು ಬಲ್ಲಿರಾ ನೀವು?

-ವಿ.ಜಿ ಭಂಡಾರಿ

# ಪದಬಂಧ

## ಪದ ಬಂಧ 8

### ಪದಬಂಧ 7 ರ ಸರಿಯುತ್ತರ

***ಎಡದಿಂದ ಬಲಕ್ಕೆ:***

೧. ಭೀಮಸೇನ ೪. ಸಪ್ತಪದಿ ೬. ಯಹ ೮. ದರ್ಪ ೯. ತತ್ತಿ ೧೦. ಮಸಣ ೧೨. ವೀರ ೧೫. ರಾಜಕುಮಾರ ೧೮. ರತ್ನ ೧೯. ಕಡಿತ ೨೧. ಬಲೆ ೨೨. ಕರಿ ೨೩. ಕಸ ೨೫. ನಮಸ್ಕಾರ ೨೬. ತಿರುಪತಿ.

***ಮೇಲಿನಿಂದ ಕೆಳಕ್ಕೆ :***

೨. ಮನೋಯಾತನೆ ೩. ನಯ ೪. ಸರ್ಪ ೫. ಪರಿಚಾರಕ ೭. ಹನುಮ ೮. ದರ್ಪಣ ೧೧. ಸರಕು ಬಂಡಿ ೧೩. ವಿರಾಮ ೧೪. ಗರತಿ ೧೬. ಮಾರಣ ಹೋಮ ೧೭. ಕೊಲೆ ಆರೋಪ ೧೯. ಕತ್ತರಿ ೨೦. ತವಕ ೨೨. ಕರ ೨೪. ಸತಿ.

***ಎಡದಿಂದ ಬಲಕ್ಕೆ***

೧. ಹವನ ಮಾಡುವಾಗ ಕೊಡಬೇಕಾದ ಭಾಗ.......................... (೪)
೪. ನೂರಾರು ಸಾವಿರಗಳ ಒಡೆಯ.................................... (೪)
೬. ಸನ್ಯಾಸಿಯು ತೊಟ್ಟ ಕಫನಿಯ ಬಣ್ಣ ತಿರುಗಿದೆ ..................... (೨)
೮. ನಿರಂಜನರು ನುಡಿದ ಸತ್ಯ........................................ (೨)
೯. ಅರ್ಥವಿಲ್ಲದೆ ಮಾಡಿದ್ದೆಲ್ಲವೂ ಹಾಳು ................................ (೨)
೧೦. ಕೆಸರಿನಲ್ಲಿ ಹುಟ್ಟಿದ ತಾವರೆ........................................ (೩)
೧೨. ಸಕಲರು ಬಡಿದಾಡಲು ಕಾರಣವಾದ ಜಾತಿ .......................... (೨)
೧೫. ಸಹೋದರನ ಮುಂಗೈಗೆ ನೂಲು ಕಟ್ಟಿ ಆಚರಿಸಿದ ಹಬ್ಬ.......... (೫)
೧೮. ಅಡ್ಡಾದಿಡ್ಡಿಯಾಗಿ ಬೆಳೆದ ಮರ ತಿರುಗಿದೆ ........................ (೨)
೧೯. ಪಾಸದ ನಡುವೆ ಮಾಡಿದ ಸಿಹಿ........................................ (೩)
೨೧. ಮರುಕ ಪಡುವ ಸುಪುತ್ರ ............................................. (೨)
೨೨. ಬಣ್ಣ ಬಣ್ಣದ ಹೂಗಳಿಂದ ಕಂಗೊಳಿಸುವ ತೋಟ................ (೨)
೨೩. ಆಯುಷ್ಯ ಕೊನೆಗೂ ಸಿಕ್ಕ ಜಯ ...................................... (೨)
೨೫. ಸರದ ನಡುವೆ ದಾರ ಹಿಡಿದು ಕೊಂಡು ಬಂದ ನಾಯಕ.......... (೪)
೨೬. ನಿಜವಾಗಿಯೂ ಯಾರಿಗೂ ಮೋಸ ಮಾಡದಂಥವ............ (೪)

***ಮೇಲಿನಿಂದ ಕೆಳಕ್ಕೆ***

೨. ವಿಚಾರಣೆಯಲ್ಲಿ ಆಶ್ಚರ್ಯಕರ ರೂಪದಿಂದ ಕಾಣುವ ಮನುಷ್ಯ..(೫)
೩. ಭವಿಯು ವಾಸಿಸುವ ಗುಹೆ ........................................... (೨)
೪. ಜಲಪಾತದಲ್ಲಿ ಸಿಕ್ಕ ನೀರು ತಿರುಗಿದೆ ............................... (೨)
೫. ಎಳೆಯ ವಯಸ್ಸಿನಲ್ಲಿ ಸಾಹಸ ಮಾಡಿದ ಶೂರ ಹುಡುಗ.......... (೫)
೭. ಕಾಕ ಬುದ್ಧಿಯನ್ನು ಬಿಟ್ಟು ಮಾಡಿದ ಕೆಲಸ........................ (೩)
೮. ನೀಲ ಆಗಸದಲ್ಲಿ ಕಂಡ ಸ್ವಚ್ಛತೆ...................................... (೩)
೧೧. ಸ್ವಾತಂತ್ರ್ಯಕ್ಕೆ ನಡೆಸಿದ ಅತೀ ದೊಡ್ಡ ದಂಗೆ........................ (೫)
೧೩. ಧಣಿ-ಬಿಕ್ಷುಕ ಎನ್ನದೇ ಎಲ್ಲರಿಗೂ ಬಾಳಲು ಸ್ಥಳ ಕೊಟ್ಟ ಭೂಮಿ. (೩)
೧೪. ಅನನ್ಯ ಗಿಡ ಮರಗಳನ್ನು ಒಳಗೊಂಡ ಕಾಡು ..................... (೩)
೧೬. ಕುಳಿತು ಕಡಲೆಕಾಯಿ ತಿನ್ನಲು ಯೋಗ್ಯವಾದ ಸಾಗರ ದಡ........... (೫)
೧೭. ರಂಪ ಮಾಡುತ್ತಲೇ ಆರಂಭಗೊಂಡ ನಾಟ್ಯ ಸಜ್ಜಿಕೆ.............. (೫)
೧೯. ಪಾಪ ಕಳೆದುಕೊಳ್ಳಲು ಗಂಗೆಯಲ್ಲಿ ಸ್ನಾನ ಮಾಡಿದಾಗ ಸಿಕ್ಕ ಪವಿತ್ರ............................................................ (೩)
೨೦. ಸಾಧಿಸುವವನಿಗೆ ಸಿಕ್ಕ ವೇಳೆ ......................................... (೩)
೨೨. ತಬರನು ಕಂಡ ಕ್ಷಾಮ.................................................. (೨)
೨೪. ಅನಿಷ್ಟ ಉಂಟಾದಾಗ ಅಪವಾದ ಹೊರುವ ಗ್ರಹ ................ (೨)

■ ಜವಳಿ ವೀರಣ್ಣ

(ಉತ್ತರ : ಮುಂದಿನ ಸಂಚಿಕೆಯಲ್ಲಿ)

# ಮುದ್ದು ಮಕ್ಕಳೇ

ಹೇಗಿದ್ದೀರಾ ? ಆರೋಗ್ಯವಾಗಿದ್ದೀರಿ ತಾನೇ ? ಅಂತೂ ಶಾಲೆ ಶುರು ಆಗಿ ಮೂರು ತಿಂಗಳು ಕಳೀತಾ ಬಂತು. ಈಗಾಗಲೇ ಬಹಳಷ್ಟು ಪಾಠ ಮುಗಿದ್ಹೋಗಿರ್ಬ್ಹೋದು ಅಲ್ವಾ? ಕೆಲವ ರಂತೂ ಮಧ್ಯಕಾಲಿಕ ಅಂದರೆ ಅರ್ಧವಾರ್ಷಿಕ ಪರೀಕ್ಷೆಗೆ ತಯಾರಿ ನಡೆಸ್ತಾ ಇರಬಹುದು. ಪರೀಕ್ಷೆ ಮುಗೀತಾ ಇದ್ದಂತೆ ದಸರಾ ರಜೆ. ಅಜ್ಜನ ಅಥವಾ ಅಜ್ಜಿ ಮನೆಗೋಗಿ ಕುಣದಾಡ್ಕೊಂಡು ಮಜಾ ಮಾಡ್ಕೊಂಡು ಬರೋದು ಅಷ್ಟೇ ತಾನೇ? ನೋಡಿ ಪುಟಾಣಿಗಳೇ, ಮೊನ್ನೆಯಿಂದ ನಮ್ಮ ಮನೇ ಹತ್ತಿರ ಅಂದ್ರೆ ನಮ್ಮೂರಲ್ಲಿ ಸಿಕ್ಕಾಪಟ್ಟೆ ಮಳೆ. ಎಷ್ಟು ಅಂದ್ರೆ ಹೇಳಲಿಕ್ಕೆ ಕಷ್ಟ. ನಿಮ್ಮೂರಲ್ಲಿ ಮಳೆಯಿದೆ ತಾನೇ? ಅದೇ ಮುಖ್ಯ. ಈ ಮಳೆ, ಬೆಳೆ ಎಲ್ಲಾ ಒಂದಕ್ಕೊಂದು ಕೊಂಡಿಯಿದ್ದ ಹಾಗೇ, ಒಂದು ಭಾಗ ಕಳಚಿ ಕೊಂಡ್ರೆ ಈ ವ್ಯವಸ್ಥೆನೇ ಬಿದ್ದು ಹೋಗುತ್ತೆ. ಮುಖ್ಯವಾಗಿ ಮರ, ಮರವಿದ್ದರೆ ಮಳೆ, ಮಳೆಯಿದ್ದರೆ ಬೆಳೆ, ಬೆಳೆ ಚೆನ್ನಾಗಿ ಬಂದರೆ ತಾನೇ ಸುಖವಾಗಿರೋದು. ನೋಡಿದ್ರಾ ಒಂದಕ್ಕೊಂದು ಹೇಗೆ ಸಹಕರಿಸಿ ಕೊಂಡು ಇದ್ದಾವಂತ. ಹಾಗಾಗಿಯೇ ದೊಡ್ಡವರು ಮರ ಉಳಿಸಿ, ಮರ ಬೆಳೆಸಿ ಅನ್ನೋದು ಮಕ್ಕಳೇ, ನಮ್ಮ ನಗರದಲ್ಲಂತೂ ನೋಡಿ, ಎಲ್ಲಾ ಕಡೆ ಈ ಡಾಂಬರು ರಸ್ತೆ ಮಾಡಿ ಮಳೆ ನೀರನ್ನು ಈ ಭೂಮಿ ಹೀರಿಕೊಳ್ಳೋದಿಕ್ಕೆ ಸಾಧ್ಯನೇ ಇಲ್ಲಾ. ಬಿದ್ದ ಮಳೆ ನೀರು ನೇರವಾಗಿ ಹರ್ಕೊಂಡು ದೊಡ್ಡ ಡ್ರೈನೇಜ್‌ಗೆ ಅಂದ್ರೆ ಚರಂಡಿಗೆ ಸೇರಿ ಸುಮ್ನೆ ವೇಸ್ಟ್ (waste). ಅದೇ ಮರಗಳು ಇದ್ದರೆ ಆ ಮಳೆಯ ಹನಿ ಬೀಳುವಾಗ ಎಲೆಗಳ ಮೇಲೆ ಬಿದ್ದು ಎಲೆಯಿಂದ ಎಲೆಗೆ ಬಿದ್ದು ನಿಧಾನಕ್ಕೆ ಭೂಮಿಗೆ ಬಿದ್ದಾಗ ಭೂಮಿಯ ಮೇಲಿನ ಹುಲ್ಲುಗಳು ಅದನ್ನು ಹೀರಿಕೊಳ್ತಾವೆ. ಇನ್ನೂ ನೀರಿನ ಕೆಲವು ಅಂಶ ಮತ್ತೆ ಆವಿಯಾಗಿ ಮೋಡ ಸೇರಿಕೊಳ್ತಾವೆ. ಈ ಹುಲ್ಲುಗಳ ಮೇಲಿನ ನೀರನ್ನು ಭೂಮಿ ಹೀರ್ಕೊಂಡು ಅಂತರ್ಜಲವನ್ನಾಗಿ ಕಾಪಾಡಿ ಕೊಳ್ಳುತ್ತಿತ್ತು. ಹಾಗಾಗಿನೇ ಈ ಕಾಡುಗಳು ನಿತ್ಯ ಹರಿದ್ವರ್ಣ ಅಥವಾ ಯಾವಾಗಲೂ ಹಸಿರಾಗಿರುತ್ತೆ ಅನ್ನೋದು. ಈ ಅಂತರ್ಜಲದ ಮೂಲಕ ಮಳೆ ಇಲ್ಲದ ಬೇಸಿಗೆ ಕಾಲದಲ್ಲೂ ಗಿಡಮರಗಳು ಹಸಿರಾಗಿ ಬದುಕ್ತಾ ಇದ್ವು, ಈಗ ನಗರದಲ್ಲಿ ಬೇಸಿಗೆ ಕಾಲದಲ್ಲಿ ಮರವೆಲ್ಲಾ ಒಣಗಿ ಹೋಗಿರುತ್ತೆ ಅಲ್ಲಾ. ಹಾಗಾಗಿ ಈ ಅಂತರ್ಜಲ ಒಂದು ರೀತಿಯಲ್ಲಿ ಆಪತ್ಕಾಲಕ್ಕೆ ಸಹಾಯ ಬರುವ ನಿಧಿ ಇದ್ದ ಹಾಗೇ. ಅರ್ಥವಾಗ್ಲಿಲ್ವಾ ನೋಡಿ ಪ್ರತಿ ದಿವಸ ಒಂದೊಂದು ರೂಪಾಯಿ ಅಂತಾ ಕೂಡಿಟ್ಟಿದ್ದೀರಾ ಅಂತಾ ಇಟ್ಕೊಳ್ಳಿ, ನೂರು ದಿನ ಕಳೆವಾಗ ಆ ಹಣದ ಡಬ್ಬಿಯಲ್ಲಿ ನೂರು ರೂಪಾಯಿ ಆಗಿರುತ್ತೆ. ಅರ್ಜೆಂಟಾಗಿ ನಿಮಗೆ ಅರವತ್ತು ರೂಪಾಯಿ ಬೇಕಾದಾಗ ನೀವು ನಿಮ್ಮಪ್ಪನತ್ರ ಹೋಗಿ ಕೇಳೋದೆ ಬೇಡ. ಕೂಡಿಟ್ಟ ಹಣದಲ್ಲಿ ಖರ್ಚು ಮಾಡಬಹುದು. ಈಗ ನೀವು ಕೂಡಿಟ್ಟಿದ್ದು ನಿಮಗೆ ಸಹಾಯ ಮಾಡಲಿಲ್ವಾ ಹಾಗೇ ಈ ಅಂತರ್ಜಲನೂ ಅಷ್ಟೇ ಮಳೆ ಇಲ್ಲದೇ ಬೇಸಿಗೆ ಕಾಲದಲ್ಲಿ ಮರ-ಗಿಡ ಒಣಗಿರುವಾಗ ಭೂಮಿ ತಾನು ಕೂಡಿಟ್ಟ ಅಂತರ್ಜಲ ಅಂದ್ರೆ ನೀರನ್ನು ಗಿಡಗಳಿಗೆ ಕೊಟ್ಟು ಮರಗಳ ಬಾಯಾರಿಕೆಯನ್ನು ತಣಿಸ್ತಾವೆ. ಆದ್ದರಿಂದ ಅವು ಹಸಿರಾಗಿರ್ತಾವೆ. ಮಕ್ಕಳೇ ನೀವು ಅಷ್ಟೇ ಹಣವನ್ನು ಕೂಡಿಡಬೇಕು. ಸುಮ್ನೆ ಸುಮ್ನೆ ಹಣವನ್ನು ಖರ್ಚುಮಾಡಿ ಹಾಳುಮಾಡಬಾರದು. ಈ ಹಣವನ್ನೇ ನಿಧಿ ಅನ್ನೋದು. ಇಷ್ಟೇ ಅಲ್ಲಾ ಈ ಮರಗಳಿಂದ ಇನ್ನೂ ಎಷ್ಟೊಂದು ಉಪಯೋಗ ಇದೆ ಗೊತ್ತಾ ? ಇನ್ನೊಮ್ಮೆ ಹೇಳೋಣಾ ಅಲ್ವಾ ? ಒಂದೇ ವಿಷಯದ ಬಗ್ಗೆ ಬಹಳಷ್ಟು ಹೇಳಿಬಿಟ್ರೆ ಪುಟಾಣಿಗಳಾದ ನಿಮಗೆ ನೆನಪಿನಲ್ಲಿಟ್ಟುಕೊಳ್ಳೋಕೆ ಕಷ್ಟವಾಗುತ್ತೆ ಜೊತೆಗೆ ಯಾವುದಾದ್ರೂ ತಿಂಡಿ ಚೆನ್ನಾಗಿದೆ ಅಂತಾ ಜಾಸ್ತಿ ತಿಂದು ಬಿಟ್ರೆ ಏನಾಗುತ್ತೆ ಹೇಳಿ ಹೊಟ್ಟೆ ಕೆಟ್ಟು ಅಜೀರ್ಣ, ಮತ್ತೆ ಆಸ್ಪತ್ರೆ, ಸೂಜಿ ಅವೆಲ್ಲಾ ಯಾಕೆ ಅಲ್ವಾ ?

ಕೆಲವರಿಗೆ ಹೊಸ ಸ್ನೇಹಿತರು, ಹೊಸ ಮೇಷ್ಟ್ರು, ಹೊಸ ಶಾಲೆ ಅನ್ನೋ ಖುಷಿ. ಇನ್ನೂ ಕೆಲವರಿಗೆ ಹಳೇ ಶಾಲೆ, ಹಳೇ ಸ್ನೇಹಿತರು ಅದೇ ಮೇಷ್ಟ್ರು ಅನ್ನೋ ಬೇಸರಾನೂ ಇರಬಹುದಲ್ವಾ, ಇನ್ನೂ ಕೆಲವರು ಯಾವುದಕ್ಕೂ ಹೊಂದಿಕೊಳ್ಳದೇ ಉದಾಸೀನದಿಂದ ಇರೋರು ಇದ್ದಾರೆ. ಆದರೆ ಮಕ್ಕಳೇ ಮನುಷ್ಯನಿಗೆ 'ಆಲಸ್ಯ ಅಥವಾ ಉದಾಸೀನ ಇದೆಯೆಲ್ಲ ಅದು ದೊಡ್ಡ ಶಾಪ, ಅಂತಾ ನಮ್ಮ ಹಿರಿಯರು ಹೇಳಿದ್ದಾರೆ. ಅದೂ ನಿಜಾ ಅಲ್ವಾ ಉದಾಹರಣೆ ತಗೊಳ್ಳಿ ಈಗ ನೀವು ಶಾಲೇಲಿ ಕಲಿಸಿದ ಪಾಠವನ್ನು ಮನೆಗೆ ಬಂದು ಮತ್ತೊಮ್ಮೆ ಅದನ್ನು ಓದಿಕೊಂಡು ಯಾವುದಾದರೂ ಬಗ್ಗೆ ಅನುಮಾನ ಬಂದ್ರೆ ಮಾರನೇ ದಿನ ಶಾಲೇಲಿ ಮೇಷ್ಟ್ರು ಬಳಿ ಕೇಳಿದರೇ ಎಷ್ಟು ಚೆನ್ನಾಗಿರುತ್ತೆ ಅಲ್ವಾ, ನಿಮ್ಗೆ ಅನುಮಾನ ಬಗೆಹರಿದಂತಾಯ್ತು ಜೊತೆಗೆ ಹೊಸ ವಿಷಯ ತಿಳಿದು ನಿಮ್ಮ ಬುದ್ಧಿವಂತಿಕೆ ಜಾಸ್ತಿ ಆದಂತಾಗಲಿಲ್ವಾ, ನೀವು ಕಷ್ಟಪಟ್ಟು ಓದಿ ಒಳ್ಳೆ ಅಂಕಗಳಿಸಿ ಪಾಸಾದ್ರೆ ಒಳ್ಳೇದೇ ತಾನೇ? ಒಳ್ಳೆ ಅಂಕ ಗಳಿಸಬೇಕಂದ್ರೆ ಕಷ್ಟ ನೀವೇ ಪಡಬೇಕಲ್ವಾ ಅದು ಕಷ್ಟ ಅಲ್ಲ ಮಕ್ಕಳೇ ಪರಿಶ್ರಮ ಅಂತ ಹೇಳ್ತಾರೆ. ಅದು ಬಿಟ್ಟು ಏನ್ ಓದೋದು? ಪರೀಕ್ಷೆ ಹತ್ರ ಬಂದಾಗ ಓದಿದರೆ ಸಾಕು ಅಂತಾ ಉದಾಸೀನ ಮಾಡಿದ್ರೆ 'ಮಿಂಚಿ ಹೋದ ಕಾಲಕ್ಕೆ ಚಿಂತಿಸಿ ಫಲವಿಲ್ಲ' ಅನ್ನೋ ಮಾತು ನಿಮ್ಮ ಪಾಲಿಗೆ ನಿಜವಾಗುತ್ತೆ. ಆಗ ಪರೀಕ್ಷೆಯಲ್ಲಿ ಪಾಸು ಆಗೋದಿಲ್ಲ ಮನೆಗೆ, ಊರಿಗೆ ಕೊನೆಗೆ ದೇಶಕ್ಕೆ ಭಾರವಾಗಿ ಬದುಕಬೇಕಾಗುತ್ತೆ. ಅದೂ ನಿಜಾನೇ ಅಲ್ವೇ. ಈ ದಿನದ ಮಧ್ಯಾಹ್ನದ ಹನ್ನೆರಡು ಗಂಟೆ ಕಳೆದ ಮೇಲೆ ಅದೇ ನಾಳೆ ಮಧ್ಯಾಹ್ನದ ಹನ್ನೆರಡು ಗಂಟೆ ಬರುತ್ತೇ ವಿನಾ ಅದು ನಾಳೆದಲ್ವಾ, ಈ ದಿನದಂತೂ ಮುಗೀತಲ್ಲ ಆಮೇಲೆ ಅದ್ರ ಬಗ್ಗೆ ಕಾಲಕಳೀತಲ್ಲಾ ಅಂತಾ ಸುಮ್ಮೆ ಯೋಚಿಸುತ್ತಾ ಕುಳಿತುಕೊಂಡ್ರೆ ಮತ್ತಷ್ಟು ಕಾಲ ಕಳೆಯುತ್ತೆ ವಿನಾ ಉಪಯೋಗವಿಲ್ಲವಲ್ಲಾ. ಹಾಗಾಗಿ ಮಕ್ಕಳೇ ಆದಷ್ಟು ಕಾಲ ಕಳೆಯೋಕ್ಕಿಂತ ಮೊದಲೇ ಜಾಗರೂಕರಾಗಿರಬೇಕು. ಇನ್ನೂ ಅರ್ಥವಾಗಲಿಲ್ವಾ ಮಕ್ಕಳೇ.

ಬೇಸರ ಪಟ್ಟುಕೊಳ್ಳಬೇಡಿ, ಇನ್ನೊಂದು ಕಥೆ ಹೇಳ್ತೀನಿ. ಗಡ್ಡಕ್ಕೆ ಬೆಂಕಿ ಹತ್ತಿ ಕೊಂಡಿದ್ದ ಕಥೆ. ಕೆಲವರಿಗೆ ಗೊತ್ತಿರಬಹುದು. ಇನ್ನೂ ಕೆಲವರಿಗೆ ತಿಳಿದಿಲ್ಲ ಅಂತಾ ಈ ಕಥೆ. ಒಮ್ಮೆ ತನ್ನ ಉದ್ದವಾದ ಗಡ್ಡವನ್ನು ನೀವಿಕೊಳ್ತಾ ಬೀಡಿ ಹಚ್ಚಿಕೊಳ್ಳೋದಿಕ್ಕೆ ಹೋದ. ಅಕಸ್ಮಾತಾಗಿ ಗಡ್ಡಕ್ಕೆ ಬೆಂಕಿ ಹತ್ತಿ ಕೊಂಡಿತಂತೆ. ಸರಿ ಬೆಂಕಿ ಹಾರಿಸಿಕೊಳ್ಳೋದಿಕ್ಕೆ ನೀರಿಗಾಗಿ ಮೂಲೆ ಮೂಲೆ ತಿರುಗಾಡಿದ್ರೂ ನೀರು ಸಿಗಲೇ ಇಲ್ಲ. ನೀರಿಗಾಗಿ ಬಾವಿ ತೋಡೋದಿಕ್ಕೆ ಶುರುಮಾಡಿದ್ನಂತೆ. ಅಲ್ಲಾ

ಮಕ್ಕಳೇ ನಗ್ತಾ ಇದ್ದೀರಾ. ನೀರು ಸಿಗೋವಾಗ ಇವನ ಒಂದು ಗಡ್ಡದ ಕೂದಲಾದ್ರೂ ಉಳಿಯುತ್ತಾ ಇಲ್ವಲ್ಲಾ, ಈ ಕಥೆ ಸುಳ್ಳೇ ಇರಬಹುದು ಆದ್ರೆ ಇದ್ರಲ್ಲಿ ಸಾರಾಂಶನಾ ತಿಳ್ಕೊಂಡ್ರಲ್ಲಾ ಅದೇ ಮುಖ್ಯ. ಆದ್ದರಿಂದ ಕಾಲದ ಬಗ್ಗೆ ಹೆಚ್ಚು ಗಮನವನ್ನು ನೀಡಬೇಕು. ಒಂದೊಂದು ನಿಮಿಷವನ್ನು ಬಹಳ ಜಾಣತನದಿಂದ ಉಪಯೋಗಿಸಬೇಕು. ಆಗ ಏನನ್ನಾದರೂ ಸಾಧಿಸೋಕೆ ಸಾಧ್ಯ. ತಿಳೀತಾ ಮಕ್ಕಳೇ, ಇನ್ನೂ ಮುಂದಿನ ತಿಂಗಳು ಬೇರೆ ವಿಷಯದ ಬಗ್ಗೆ ತಿಳಿಸ್ತೀನಿ ಆಗುತ್ತಲ್ಲಾ, ಅಮ್ಮ ಮಾಡಿದ ಅಡುಗೆ ಊಟ ಮಾಡಿ ಮಲಗ್ತೀರಲ್ಲಾ, ಬೆಳಿಗ್ಗೆ ಎದ್ದು ಸ್ನಾನ ಮಾಡ್ಕೊಂಡು ಶಾಲೆಗೆ ಹೊರಡ್ತೀರಲ್ಲಾ. ಮಕ್ಕಳೇ ಅರ್ಥವಾಗುತ್ತಾ ಇಲ್ಲಾ ಅಂದ್ರೆ, ಹೇಳ್ತೀರಾ ತಾನೇ ? ನಮ್ಮ ದೇಶ, ಸಂಸ್ಕೃತಿ ಬಗ್ಗೆನೂ ಹೇಳ್ತೀನಿ ಬರೋಣ ಮಕ್ಕಳೇ.

■ ಅಡಗೂಲಜ್ಜಿ.

# ನೀವು ಕಥೆಗಾರರಾಗಬೇಕೆ?

## ಕಳೆದ ತಿಂಗಳ ಅಪೂರ್ಣ ಕಥೆಯ ಮುಕ್ತಾಯ

**1**

ನಿರ್ಮಲತ್ತೆ ಮಲ್ಲಿ ಕಳೆದಿದ್ದಕ್ಕಾಗಿ ಗಾಬರಿಗೊಂಡಳು. ಆಗ ನಿರ್ಮಲತ್ತೆಯ ಕೈ-ಕಾಲುಗಳು ನಡುಗತೊಡಗಿದವು. ಈಗ ನಾನೇನು ಮಾಡಲಿ, ದಿಕ್ಕೇ ತೋಚಲಿಲ್ಲ. ಮಲ್ಲಿಯ ಅಜ್ಜಿ, ಅಮ್ಮನಿಗೆ ನಾನೇನು ಹೇಳಲಿ ಅವರಿಗೆ ಮಲ್ಲಿಯ ಮೇಲೆ ಬಹಳ ಅಘಾದ ವಾದ ಪ್ರೀತಿ ಇತ್ತು. ಅವನು ಕಳೆದನೆಂದು ಹೇಳಿದರೆ ಅವನ ಅಜ್ಜಿ-ಅಮ್ಮ- ಗಾಬರಿಗೊಂಡು ದುಃಖಪಡುತ್ತಾರೆ, ಎಂದು ಆಲೋಚಿಸಿ ನಿರ್ಮಲತ್ತೆ ಮನೆಗೆ ಹೋಗಲಿಲ್ಲ. ಆ ಹೊತ್ತಿನಲ್ಲೇ ಮಲ್ಲಿಯ ಉಂಗುರ ಹಗರಿಯಲ್ಲಿ ಕಳೆದಿತ್ತು. ಮಲ್ಲಿಯು ಹಗರಿಯಲ್ಲಿ ಹುಡುಕಿ ಸಾಕಾಯಿತು. ಒಬ್ಬ ವ್ಯಕ್ತಿಗೆ ಆ ಉಂಗುರ ಸಿಕ್ಕಿತು. ಆಗ ಅವನು ಈ ಉಂಗುರ ಯಾರದು ಎಂದು ಕೇಳಿದಾಗ ಅಲ್ಲಿಯೇ ಇದ್ದ ಮಲ್ಲಿಗೆ ಅವನ ಮಾತು ಕೇಳಿಸಿತು.

ಆಗ ಮಲ್ಲಿ ಈ ಉಂಗುರ ನನ್ನದೇ ಎಂದು ಹೇಳಿದಾಗ ಆ ವ್ಯಕ್ತಿಯು ಉಂಗುರವನ್ನು ಮಲ್ಲಿಗೆ ಕೊಟ್ಟನು. ಆಗ ಮಲ್ಲಿ ಬಹಳ ಸಂತೋಷಪಟ್ಟನು. ಮಲ್ಲಿಯು ಆ ವ್ಯಕ್ತಿಗೆ ಧನ್ಯವಾದಗಳನ್ನು ಹೇಳಿ ಉಂಗುರ ತೆಗೆದುಕೊಂಡು ನಿರ್ಮಲತ್ತೆ ಇದ್ದ ಜಾಗಕ್ಕೆ ಹೋದನು. ಆಗ ಇವನನ್ನು ಕಂಡು ನಿರ್ಮಲತ್ತೆಯು ಸಂತೋಷಗೊಂಡಳು. ನಂತರ ಅವರಿಬ್ಬರೂ ಕೂಡಿ ಮನೆಗೆ ಬಂದರು.

■ಪ್ರವೀಣ ಮೋ. ಬಡಿಗೇರ
ರಾಣೆಬೆನ್ನೂರು.

**2**

ಆದರೆ ಎಲ್ಲಿಯೂ ಕಾಣಲಿಲ್ಲ. ಮಲ್ಲಿ ನಿರ್ಮಲಾಳ ಕಣ್ಣು ತಪ್ಪಿಸಿ ಮರದ ಕೆಳಗೆ ಅವಿತು ಕುಳಿತಿದ್ದಳು. ನಿರ್ಮಲಾ ಗಾಬರಿಯಿಂದ ನೀರಲ್ಲಿ ಮುಳುಗಿರಬೇಕೆಂದು ಅಲ್ಲಿದ್ದ ಜನಕ್ಕೆ ತಿಳಿಸಿದಳು. ನೀರಿನಲ್ಲಿ ಹುಡುಕಿದರೂ ಸಿಗಲಿಲ್ಲವಾದ್ದರಿಂದ ಅವಳು ದುಃಖದಿಂದ ಹಿಂತಿರುಗಿದಳು. ಅಜ್ಜಿ ಮಲ್ಲಿ ಎಲ್ಲಿ ಎಂದು ಕೇಳಿದಾಗ ಅವಳು ನನ್ನ ಜೊತೆಯಲ್ಲಿ ಬರಲಿಲ್ಲ. ಅರ್ಧ ದಾರಿಯಲ್ಲಿಯೇ ಮನೆಗೆ ಬರುವುದಾಗಿ ವಾಪಸ್ಸು ಹೋದಳೆಂದು ಸುಳ್ಳು ಹೇಳಿದಳು. ಮಲ್ಲಿ ಸಂಜೆಯವರೆಗೂ ಹಗರಿಯಲ್ಲಿ ಕುಣಿದಾಡಿ ಮನೆಗೆ ಬಂದಳು. ಅಜ್ಜಿ ಗಾಬರಿಯಿಂದ ಕೇಳಿದಾಗ ನಿರ್ಮಲತ್ತೆ ನನ್ನನ್ನು ಅಲ್ಲಿಯೇ ಬಿಟ್ಟು ಬಂದಳೆಂದು ಸುಳ್ಳು ಹೇಳಿದಳು. ಅವಳಿಗಾಗಿ ಕಾಯುತ್ತಾ ಈಗ ಬಂದೆನೆಂದು ಅಜ್ಜಿಗೆ ಹೇಳಿದಳು. ಅಜ್ಜಿ ಬೇಸರಗೊಂಡು ಇನ್ನು ಮೇಲೆ ನಿರ್ಮಲತ್ತೆ ಜೊತೆ ಕಳುಹಿಸುವುದಿಲ್ಲ ಎಂದಳು. ಇದನ್ನು ಕೇಳಿ ನಿರ್ಮಲ ಅಜ್ಜಿಗೆ ನಡೆದ ಸಂಗತಿಯನ್ನು ಪೂರ್ಣವಾಗಿ ವಿವರಿಸಿದಳು. ಆಗ ಮಲ್ಲಿ ತನಗೆ ಇರುವ ಆಸೆಯ ಬಗ್ಗೆ ತಿಳಿಸಿದಳು. ಅಜ್ಜಿ ದಿನವೂ ಸಂಜೆ ಮಲ್ಲಿಯನ್ನು ಹರಿಯುವ ಹಗರಿಯಲ್ಲಿ ಕುಣಿದಾಡಿಸಿ ಸಂತೋಷಪಡಿಸಿ ಕರೆದುಕೊಂಡು ಬರುತ್ತಿದ್ದಳು.

■ ಎ.ಯು. ಸೌಮ್ಯ, ಅರಸೀಕೆರೆ

**3**

ಹೊಳೆಯ ದಂಡೆಯನ್ನು ಏರಿ ಅತ್ತಿತ್ತ ಹುಡುಕಾಡತೊಡಗಿದಳು. ಜನರ ಗದ್ದಲದಲ್ಲಿ ಮಲ್ಲಿ ಎಲ್ಲೂ ಕಾಣಲಿಲ್ಲ. ನಿರ್ಮಲಾಗೆ ಅಳುಬಂದಂತಾಗಿ ತಾನು ಏಕಾದರೂ ಮಲ್ಲಿಯನ್ನು ಕರೆದುಕೊಂಡು ಬಂದೆನೋ ಎಂದು ಚಡಪಡಿಸತೊಡಗಿದಳು. ಡಬ ಡಬ ಎಂದು ಹೊಡೆದುಕೊಳ್ಳುತ್ತಿರುವ ಎದೆಯನ್ನು ಹಿಡಿದುಕೊಂಡು ಮುಂದೆ ಸಾಗಿದಳು. ದೂರದ ಮರದ ಕೆಳಗೆ ಮಗುವೊಂದು ಕಾಣಿಸಿತು. ಅತ್ತ ಕಡೆ ಹೆಜ್ಜೆ ಹಾಕತೊಡಗಿದಳು. ಮಲ್ಲಿ ಅಳುತ್ತಾ ಕುಳಿತಿದ್ದ. ಅವನ ಸುತ್ತಲೂ ಶಂಖ, ಕವಡೆಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ನಿರ್ಮಲಾ ಮಲ್ಲಿಯನ್ನು ಎತ್ತಿಕೊಂಡು ಅಳುತ್ತಿರುವುದೇಕೆಂದು ಕೇಳಿದಳು. ಅವನ ಅಳು ಮತ್ತಷ್ಟು ಜೋರಾಯಿತು. ಅಳುತ್ತಲೇ ಕೈಯನ್ನು ತೋರಿಸಿದ. ನಿರ್ಮಲಾಗೆ ತಟ್ಟನೆ ನೆನಪಾಯಿತು. ಮಲ್ಲಿಯ ಕೆನ್ನೆಗೆ ಮುತ್ತನೀಡುತ್ತಾ, ತಾನು ಮನೆಯಿಂದ ಮಲ್ಲಿಯ ಕೈಹಿಡಿದು ಕೊಂಡು ಬರುವಾಗ ಅವನ ಕೈಯಿಂದ ಉಂಗುರ ಜಾರಿ ಅವಳ ಕೈಗೆ ಬಂದಿತು. ಅಜ್ಜಿಯ ಮಾತು ನೆನಪಾಗಿ ತನ್ನ ಸೆರಗಿನಲ್ಲಿ ಕಟ್ಟಿಕೊಂಡಿದ್ದಳು. ಅದನ್ನು ಅವನ ಕೈಗೆ ಇಟ್ಟಳು. ಆಗ ಮಲ್ಲಿಯ ಮುಖದಲ್ಲಿ ನಗು ಮೂಡಿತು. ಕವಡೆ, ಶಂಖಗಳನ್ನು ಆರಿಸಿ ಜೇಬಿನಲ್ಲಿ ಹಾಕಿಕೊಂಡು ನಿರ್ಮಲಾಳ ಕೈಹಿಡಿದು ಖುಷಿಯಿಂದ ಮನೆಯ ಕಡೆ ನಡೆದನು.

■ ಸೌಮ್ಯ ಸಾಲಿಮಠ, ದಾವಣಗೆರೆ

**4**

ಆಗ ಮಲ್ಲು ಹಗರಿಯಲ್ಲಿ ಈಜು ಬಡಿಯಲಾಗದೆ ಮೇಲೆ ತೇಲಲಾರದೆ ಹಗರಿಯಲ್ಲಿ ಮುಳುಗಿ ಹೋದನು. ಹಗರಿಯು ಬಹಳ ಆಳ ಇದ್ದುದ್ದರಿಂದ ಮಲ್ಲಿಯು ಹಗರಿಯ ತಳವನ್ನು ಮುಟ್ಟಿದ. ಅವನ ಕಣ್ಣಿಗೆ ಅಲ್ಲಿಯೇ ಇದ್ದ ವಜ್ರದ ಹರಳುಗಳು ಕಾಣಿಸಿದವು. ಮಲ್ಲಿಯು ಅವನ್ನು ತೆಗೆದುಕೊಂಡು ಹಾಗೆ ಹೀಗೆ ಕಾಲನ್ನು, ಕೈಯನ್ನು ಬಡಿಯುತ್ತ ಮೇಲೆ ತೇಲಿದ ನಂತರ ತವಕದಿಂದ ಬದುಕಿದೆನೋ, ಇಲ್ಲವೋ ಎಂದು ಮನೆಗೆ ಓಡಿಬಂದ. ಗಾಬರಿಗೊಂಡಿದ್ದ ಅವನ ಮನೆಯವರು ಮಲ್ಲಿಯನ್ನು ಕಂಡು ಸಂತೋಷಪಟ್ಟರು. ಮಲ್ಲಿ ತಂದಿದ್ದ ವಜ್ರದ ಹರಳನ್ನು ನೋಡಿ ಆಶ್ಚರ್ಯದಿಂದ ಖುಷಿಪಟ್ಟರು.

■ ಪ್ರವೀಣಕುಮಾರ, ಗಂಗಾವತಿ

## ನೀವು ಕಥೆಗಾರರಾಗಬೇಕೆ?

*ನಿಮಗೂ ಕಥೆಗಾರರಾಗಬೇಕೆಂಬ ಆಸೆ ಇರಬಹುದಲ್ಲವೆ? ನಿಮ್ಮಂತಹ ಚಿಗುರು ಪ್ರತಿಭೆಗಳಿಗೆ ಪ್ರೋತ್ಸಾಹ ನೀಡಲಿಕ್ಕಾಗಿಯೇ ಈ ಅಂಕಣ ಮೀಸಲು. ನೀವು ಮಾಡಬೇಕಾದುದಿಷ್ಟೇ; ಈ ಕೆಳಗೆ ನಾವೊಂದು ಕಥೆ ನೀಡಿದ್ದೇವೆ. ಆದರೆ ಅದು ಅಪೂರ್ಣ. ಅದನ್ನು ಪೂರ್ಣಗೊಳಿಸಬೇಕಾದವರು ನೀವೇ!*

### ಅಪೂರ್ಣ ಕತೆ

ಗಣೇಶೋತ್ಸವ ಬಂತೆಂದರೆ ಸಿದ್ದಾಪುರದ ಶಾಲೆಯಲ್ಲಿ ಸಂಭ್ರಮವೋ ಸಂಭ್ರಮ. ಹಬ್ಬದ ಪ್ರಾರಂಭದಿಂದ ಕೊನೆಯವರೆಗೆ ಎಲ್ಲಾ ಕೆಲಸಗಳನ್ನು ಸ್ವತಃ ಶಾಲೆಯ ಗುರುಗಳು ಮತ್ತು ವಿದ್ಯಾರ್ಥಿಗಳು ನಿರ್ವಹಿಸುವುದು ಇಲ್ಲಿನ ವಿಶೇಷ.

ಗಣೇಶಮೂರ್ತಿಯನ್ನು ನಿರ್ಮಿಸುವುದರಲ್ಲಿ ಕಾಳಾಚಾರಿ ಮಾಸ್ತರು ಸಿದ್ಧಹಸ್ತರಾದರೆ, ಜೋಸೆಫ್ ಮಾಸ್ತರು ಅದಕ್ಕೆ ತರಹೇವಾರಿ ಬಣ್ಣ ಹಚ್ಚಿ ಕಳೆಕಟ್ಟುವಂತೆ ಮಾಡುವುದರಲ್ಲಿ ನಿಸ್ಸೀಮರು. ವಿಶ್ವನಾಥ ಮಾಸ್ತರಂತೂ ತಿಂಗಳ ಮುಂಚೆಯೇ ನಾಟಕದ ತಾಲೀಮು ಪ್ರಾರಂಭಿಸಿರುತ್ತಾರೆ.

ಈ ವರ್ಷದ ವಿಘ್ನೇಶ್ವರನು ಭಕ್ತರಿಗೆ ಲಾಡು ನೀಡುವನೆಂಬ ವಾರ್ತೆ ಹರಡಿ ಸುತ್ತಮುತ್ತಲ ಹಳ್ಳಿಗರೆಲ್ಲ ತಂಡೋಪತಂಡವಾಗಿ ಸಿದ್ದಾಪುರಕ್ಕೆ ಬರತೊಡಗಿದರು. ದುರುಗಣ್ಣ ಮಾಸ್ತರು ಎರಡುವಾರ ಕಾಲ ಶ್ರಮಪಟ್ಟು ಸ್ಪ್ರಿಂಗು, ತಗಡು, ತಂತಿ, ಮೊಳೆ, ಕೊಳವೆ ಇತ್ಯಾದಿ ವಸ್ತುಗಳನ್ನೆಲ್ಲ ಸೇರಿಸಿ ಈ ತಂತ್ರ ಮಾಡಿದ್ದರು. ಭಕ್ತರು ಗಣೇಶನ ಕೈಯಲ್ಲಿನ ಕಳಸದಲ್ಲಿ ಒಂದು ರೂಪಾಯಿ ನಾಣ್ಯ ಹಾಕಿದರೆ ಸೊಂಡಿಲಿನಿಂದ ಒಂದು ಲಾಡು ನೀಡುತ್ತಿದ್ದ ಗಣೇಶ.

ಹೀಗೆ ಮೂರು ದಿನ ನೂರಾರು ಲಾಡು ನೀಡಿದ ಗಣೇಶನನ್ನು ವಿಸರ್ಜಿಸಲು ಮೆರವಣಿಗೆಯಲ್ಲಿ ಕೊಂಡೊಯ್ಯಲಾಯಿತು. ಈ ಸಲದ ನವೀನ ತಂತ್ರದ ಕೇಂದ್ರ ಬಿಂದುವಾದ ದುರುಗಣ್ಣ ಮಾಸ್ತರು ಮೆರವಣಿಗೆಯಲ್ಲಿ ಇಲ್ಲದ್ದರಿಂದ ವಿದ್ಯಾರ್ಥಿಗಳು ಏನೋ ಕಳಕೊಂಡಂತಿದ್ದರು. ತೀವ್ರ ಅಸ್ವಸ್ಥರಾಗಿದ್ದ ತಮ್ಮ ತಂದೆಯನ್ನು ಆಸ್ಪತ್ರೆಗೆ ಸೇರಿಸಲು ಅವರು ನಗರಕ್ಕೆ ಹೋಗಿದ್ದರು.

'ಗಣೇಶನಿಗೆ ಜಯವಾಗಲಿ' ಎಂದು ಎಲ್ಲರೂ ಘೋಷಣೆ ಮಾಡಿ ಬಾವಿಯಲ್ಲಿ ಮೂರ್ತಿಯನ್ನು ವಿಸರ್ಜಿಸಬೇಕೆನ್ನುವಷ್ಟರಲ್ಲಿ ದುರುಗಣ್ಣ ಮಾಸ್ತರು 'ತಡೀರಿ! ಹಾಕಬ್ಯಾಡ್ರಿ!' ಎಂದು ಏದುಸಿರು ಬಿಡುತ್ತಾ ಓಡಿಬಂದರು.

**ಸೂಚನೆಗಳು :**

- ಹತ್ತನೆಯ ತರಗತಿಯವರೆಗಿನ ವಿದ್ಯಾರ್ಥಿಗಳು ಮಾತ್ರ ಈ ಕಥೆಯನ್ನು ಪೂರ್ಣಗೊಳಿಸಿ ಕಳುಹಿಸಲು ಅರ್ಹರು.
- ನಿಮ್ಮ ಬರವಣಿಗೆ ಅರ್ಧ ಫೂಲ್‌ಸ್ಕೇಪ್ ಹಾಳೆ ಮೀರದಿರಲಿ.
- ಆ ಹಾಳೆಯ ಹಿಂಬದಿಯಲ್ಲಿ 'ಕಿಲ ಕಿಲ ಕೂಪನ್' ಅಂಟಿಸಿರಬೇಕು.
- ಮುಂದಿನ ಸಂಚಿಕೆಯಲ್ಲಿ ಫಲಿತಾಂಶ.
- ನಿಮ್ಮ ಬರವಣಿಗೆ ನಮಗೆ ತಲುಪಲು ಅಂತಿಮ ದಿನಾಂಕ 15.9.98

### ಎಂಟೆದೆ ಬಂಟರು!

ಚಿಲಿಪಿಲಿ ಕಿಲಕಿಲ ಮಕ್ಕಳು ನಾವು
ಮಲ್ಲಿಗೆ ಪರಿಮಳ ಬೀರುವೆವು!
ಎಳ್ಳು ಜೀರಿಗೆ ಬೆಳೆಯುವ ತಾಯಿಯ
ನಿರ್ಮಲ ಕೀರ್ತಿಯ ಸಾರುವೆವು!

ಭರತ ವರ್ಷದ ರಸಋಷಿ ಕವಿಗಳ
ಪಾವನ ಚರಿತೆಯ ಹಾಡುವೆವು!
ಹಸಿರಿನ ಉಸಿರಿನ ಪರಿಸರದಲ್ಲಿ
ಹಸನಾಗಿ ಬಾಳುವೆವು!

ವಿಸ್ಮಯ ತೋರುವ ಅನಂತಲೋಕದ
ಪಯಣಿಗರಾಗಿ ಸಾಗುವೆವು!
ಜ್ಞಾನ-ವಿಜ್ಞಾನದ ಸೀಮೆಯ ಮುಟ್ಟಿ
ಬೆಳಕಿನ ಪಥದಲ್ಲಿ ನುಗ್ಗುವೆವು!

ಹಾರುವ ತಟ್ಟೆಯ ಕಿನ್ನರಿ ಮನುಜರ
ಅಂತರಿಕ್ಷಕೆ ಹಾರುವೆವು!
ಜಗ್ಗಾ-ಸಿಗ್ಗಾ ಚಿತ್ರ-ವಿಚಿತ್ರದ
ಅದ್ಭುತ ಒಗಟನು ಬಿಡಿಸುವೆವು!

ಸದೃಢ ಮನಸಿನ ಚಿಣ್ಣರು ನಾವು
ಸಾರ್ಥಕ ಬದುಕನು ಪಡೆಯುವೆವು!
ಏನೇ ಬರಲಿ, ಎಂಥದೇ ಇರಲಿ
ಎಂಟೆದೆ ಬಂಟರೆ ಆಗುವೆವು!

**- ಚಂದ್ರಗೌಡ ಕುಲಕರ್ಣಿ**

### ಕಿಲ ಕಿಲ ಕೂಪನ್ – (ಸೆಪ್ಟಂಬರ್ 98)

ಹೆಸರು......................................................

ತರಗತಿ.............................. ವಯಸ್ಸು.....................

ತಂದೆ........................................................

ತಾಯಿ........................................................

ವಿಳಾಸ.......................................................

.............................................................

.............................................................

.............................................................

ದೇವರು ಮೆಚ್ಚುವ ಕೆಲಸ ಮಾಡ್ಬೇಕು ಅಂತಾರೆ ಹಿರೀರು. ಆದರೆ ಮೆಚ್ಚುವ ದೇವರನ್ನೇ ಚಚ್ಚಿದರೆ ಲಾಭ ಗ್ಯಾರಂಟಿ ಎನ್ನುತ್ತಾರೆ ಸಿನಿಮಾ ಮಂದಿ. ಕಾಯುವ ದೇವನನ್ನೇ ಕಿವಿಹಿಡಿದು ಧರೆಗೆಳೆದು, ಆತನಿಗೆ ಮಾನವರೂಪ ನೀಡಿ, ಒಂದಿಷ್ಟು ಗೇಲಿಮಾಡಿ ನಿರ್ಮಿಸಿದ ಸಿನಿಮಾಗಳೆಲ್ಲವೂ ಗಲ್ಲಾಪೆಟ್ಟಿಗೆಯಲ್ಲಿ ಹಣ ಮಾಡಿವೆ.

ಕೇವಲ 25 ಲಕ್ಷದಲ್ಲಿ ನಿರ್ಮಾಣವಾಗಿರುವ 'ಹಲೋ ಯಮ'ದ ಮೊದಲವಾರದ ಕಲೆಕ್ಷನ್ನೇ (ಬೆಂಗಳೂರು, ತುಮಕೂರಿನಲ್ಲಿ) 15 ಲಕ್ಷ ದಾಟಿತ್ತು. ಎರಡನೇ ವಾರದಲ್ಲಿ ಬಂದ ಲಾಭವನ್ನು ಸೇರಿಸಿದರೆ ಚಿತ್ರದ ಒಟ್ಟಾರೆ ಬಂಡವಾಳ ವಾಪಸಾದಂತಾಗಿದೆ. ಚಿತ್ರದ ಓಟವನ್ನು ಗಮನಿಸಿದರೆ ನಿರ್ಮಾಪಕರ ಜೋಬಿಗೆ ಕನಿಷ್ಠವೆಂದರೂ 60

# ಭೂಮಿಗೆ ಬಂದ ಯಮ



ಈ ಪೈಕಿ ನಿರ್ಮಾಪಕರ ಪ್ರೀತಿಪಾತ್ರ ದೇವನೆಂದರೆ ಯಮ. ಈತನಷ್ಟು ಲೇವಡಿಗೊಳಗಾದ ದೇವರು ಇನ್ನೊಬ್ಬರಿಲ್ಲ. ತೆಲುಗಿನ ಸೂಪರ್‌ಸ್ಟಾರ್ ಆಗಿದ್ದ ಎನ್‌ಟಿಆರ್ 'ಯಮಗೋಲ'ದಲ್ಲಿ ಸಾಕ್ಷಾತ್ ಯಮನಾಗಿ ರಂಜಿಸಿದ್ದು ನಿಮಗೆ ನೆನಪಿರಬಹುದು. ಇತ್ತೀಚೆಗೆ ಬಂದ ಇನ್ನೊಂದು ಚಿತ್ರ 'ಯಮಲೀಲಾ' ಕೂಡಾ ಹಿಟ್ ಆಯಿತು. ಪೌರಾಣಿಕ ಚಿತ್ರಗಳಲ್ಲಿ ತೆಲುಗಿನವರನ್ನು ಮೀರಿಸುವವರಿಲ್ಲ. ಕನ್ನಡದಲ್ಲೂ ಯಮನ ಮಹಿಮೆಯನ್ನು ಸಾರುವ ಭೂಲೋಕದಲ್ಲಿ ಯಮರಾಜ, ಯಮಕಿಂಕರ, ಇಂದ್ರನಗೆದ್ದ ನರೇಂದ್ರ, ಮೊದಲಾದ ಚಿತ್ರಗಳು ಕ್ಲಿಕ್ ಆಗಿವೆ. ಇದೇ ಸರಣಿಗೆ ಇದೀಗ ಜಮೆಯಾಗಿರುವ ಚಿತ್ರವೆಂದರೆ 'ಹಲೋ ಯಮ'.

ಲಕ್ಷ ಇಳಿಯೋದು ಗ್ಯಾರಂಟಿ. ಬೆಂಗಳೂರಲ್ಲಷ್ಟೆ ಅಲ್ಲ, ಬಿಡುಗಡೆಯಾದ ಎಲ್ಲಾ ಕೇಂದ್ರಗಳಲ್ಲೂ ಈ ಚಿತ್ರ ಸೂಪರ್ ಹಿಟ್.

ಶಿವರಾಜ್ ನಾಯಕರಾಗಿರುವ 'ಮಿಸ್ಟರ್ ಪುಟ್ಸಾಮಿ' ಮತ್ತು ರಮೇಶ್ ನಾಯಕರಾಗಿರುವ 'ಹೂಮಳೆ'ಯಂಥ ಸ್ಟಾರ್ ಚಿತ್ರಗಳ ಪೈಪೋಟಿಗೂ ಕ್ಯಾರೇ ಎನ್ನದ ಈ 'ಯಮ' ಕನ್ನಡ ಚಿತ್ರರಂಗದ ಲೇಟೆಸ್ಟ್ ಅಚ್ಚರಿ.

ಅಷ್ಟಕ್ಕೂ ಈ ಚಿತ್ರದಲ್ಲಿ ಏನಿದೆ ? ಯಾವುದೇ ಸ್ಟಾರ್ ಇಲ್ಲ, ಕಾಶಿನಾಥರಂಥ ಮಾಜಿ ಹಾಸ್ಯ ನಟರಿದ್ದಾರೆ. ಅವರ ಜೊತೆಗೆ ದೊಡ್ಡಣ್ಣ, ಸಾಧು ಕೋಕಿಲರಂಥ ಜೋಕರ್‌ಗಳ ಪಟಾಲಂ ಇದೆ. ನೆಂಜಿಕೊಳ್ಳೋದಿಕ್ಕೆ ಒಂದಿಷ್ಟು ಹಳೇಜೋಕ್ಸ್ ಇವೆ. ಪಡ್ಡೆ ಹುಡುಗರನ್ನು ರಂಜಿಸಲು ಕೆಳಮಟ್ಟದ ಡೈಲಾಗ್, ಪ್ರಚೋದಕ ಡ್ಯಾನ್ಸ್ ಇವೆ. ಇವಿಷ್ಟು ಸರಕುಗಳ ಸಂಗಮವಾಗಿರುವ ಈ ಚಿತ್ರದ ಕಥೆ ನಿಮ್ಮ ಊಹೆಗೆ ತಕ್ಕಂತೇ ಸಾಗುತ್ತದೆ.

ಸತ್ತು ಯಮಲೋಕ ಸೇರುವ ನಾಯಕ ಯಮನನ್ನೇ ಯಾಮಾರಿಸುತ್ತಾನೆ. ಭೂಲೋಕದಲ್ಲಿ ಯಮನಿಗೆ ದೇವಾಲಯಗಳೇ ಇಲ್ಲ, ಆತನ ಬಗ್ಗೆ ಒಂದು ಚಿತ್ರ ನಿರ್ಮಿಸಿದರೆ ಜನಪ್ರಿಯತೆಯನ್ನು ಮರಳಿ ಪಡೆಯಬಹುದು ಎಂದು ಆಮಿಷ ಒಡ್ಡುತ್ತಾನೆ. ನಾಯಕನ ಮಾತಿಗೆ ಮರುಳಾಗುವ ಯಮ, ತನ್ನ ಸಹಾಯಕ ಚಿತ್ರಗುಪ್ತನೊಂದಿಗೆ ಭೂಲೋಕಕ್ಕೆ ಬರುತ್ತಾನೆ. ಆರಂಭದಲ್ಲಿ ಇಲ್ಲಿನ

> **ದೇವರು ಮೆಚ್ಚುವ ಕೆಲಸ ಮಾಡ್ಬೇಕು ಅಂತಾರೆ ಹಿರೀರು. ಆದರೆ ಮೆಚ್ಚುವ ದೇವರನ್ನೇ ಚಚ್ಚಿದರೆ ಲಾಭ ಗ್ಯಾರಂಟಿ ಎನ್ನುತ್ತಾರೆ ಸಿನಿಮಾಮಂದಿ. ಕಾಯುವ ದೇವನನ್ನೇ ಕಿವಿಹಿಡಿದು ಧರೆಗೆಳೆದು, ಆತನಿಗೆ ಮಾನವ ರೂಪ ನೀಡಿ, ಒಂದಿಷ್ಟು ಗೇಲಿ ಮಾಡಿ ನಿರ್ಮಿಸಿದ ಸಿನಿಮಾಗಳೆಲ್ಲವೂ ಗಲ್ಲಾಪೆಟ್ಟಿಗೆಯಲ್ಲಿ ಹಣ ಮಾಡಿವೆ.**

ವ್ಯವಹಾರಗಳನ್ನು ಕಂಡು ಬೆರಗಾದರೂ, ನಂತರ ಹುಲುಮಾನವನಂತೆ ವೇಷತೊಟ್ಟು ಹತ್ತಾರು ಎಡವಟ್ಟುಗಳನ್ನು ಮಾಡುತ್ತಾನೆ.

ಕೇವಲ 15 ದಿನಗಳಲ್ಲಿ ಚಿತ್ರೀಕರಣ ಮುಗಿಸಿರುವುದು ಹಾಗೂ ಚಿತ್ರಕ್ಕೆ ದೊರೆತ ಪ್ರಚಾರ-ಇವೆರಡೂ ಚಿತ್ರದ ಯಶಸ್ಸಿಗೆ ಕಾರಣವಾಗಿರಬಹುದು ಎಂದು ವಿತರಕರು ಹೇಳಿದರೂ, ನಿಜವಾದ ಕಾರಣ ಚಿತ್ರದ ಅಗ್ಗದ ಅಭಿರುಚಿಯಲ್ಲೇ ಅಡಗಿದೆ ಎನ್ನುವುದು ಮೇಲ್ನೋಟಕ್ಕೇ ಸಾಬೀತಾಗುತ್ತದೆ. ಯಮನ ಬಾಯಲ್ಲಿ 'ಅಮ್ಮ..ಅಕ್ಕ..'ದಂಥ ಕೊಳಕು ಮಾತುಗಳನ್ನಾಡಿಸಿರುವ ನಿರ್ದೇಶಕರು, ಚಿತ್ರಗುಪ್ತನಿಗೆ ಒಬ್ಬ ಅರೆಬೆತ್ತಲೆ ನಟಿಯನ್ನು ಗಂಟುಹಾಕಿ, ಅವರಿಬ್ಬರ ರಾಸಲೀಲೆಯನ್ನು ತೋರಿದ್ದಾರೆ.

ಈ ವಿಪರ್ಯಾಸ ಗಮನಿಸಿ ಪೌರಾಣಿಕ ಕಥೆಗಳು ಸೃಷ್ಟಿಸಿರುವ ಕಲ್ಪನೆ ಪ್ರಕಾರ ಯಮನೆಂದರೆ ಸಾವಿಗೆ ಸಂಕೇತ, ಆಯಸ್ಸು ಮುಗಿದವರನ್ನು ಮೇಲೆ ಕರೆದೊಯ್ಯುವ ಜವರಾಯ. ಯಮಲೋಕ

ದಲ್ಲಿರುವ ವೈವಿಧ್ಯಮಯ ಶಿಕ್ಷೆಗಳ ಬಗ್ಗೆಯೇ ಹತ್ತಾರು ಕಥೆಗಳಿವೆ. ನಮ್ಮ ಸಿನಿಮಾಗಳಲ್ಲಿ ಮಾತ್ರ ಈತ ಬಫೂನ್. ಆಕಾರದಲ್ಲಷ್ಟೆ ಕಲ್ಪನೆಯ ಯಮನನ್ನು ಹೋಲುತ್ತಾನೆ.

ಕನ್ನಡದಲ್ಲೀಗ ಯಮನ ಪಾತ್ರಕ್ಕೆಂದೇ ಹೇಳಿಮಾಡಿಸಿದಂಥ ದಢೂತಿ ದೇಹ ಹೊಂದಿರುವವರು ದೊಡ್ಡಣ್ಣ. ಇವರು ಮೂಲತಃ ಹಾಸ್ಯ ನಟರಾಗಿದ್ದರಿಂದ ಹೆಚ್ಚಿನ ರಿಹರ್ಸಲ್ ಬೇಕಿಲ್ಲ. 'ಹಲೋ ಯಮ' ಚಿತ್ರದಲ್ಲಿ ಇವರೊಂದಿಗೆ ಚಿತ್ರಗುಪ್ತನಾಗಿ ನಟಿಸಿರುವವರು ಸಾಧು ಕೋಕಿಲ. ಇವರು ಮೂಲತಃ ಸಂಗೀತ ನಿರ್ದೇಶಕ. ಇತ್ತೀಚೆಗೆ ನಟನೆಯ ಶೋಕಿಯನ್ನು ಅಂಟಿಸಿಕೊಂಡು ಸ್ವಯಂಘೋಷಿತ ಹಾಸ್ಯನಟನಾದವರು.

ಅದೇನೇ ಇರಲಿ, ಹಲೋಯಮದ ಯಶಸ್ಸು ಗಾಂಧಿನಗರಕ್ಕೆ ಹೊಸ ಟಾನಿಕ್ ನೀಡಿದೆ. ದೇವರು ಧರೆಗಿಳಿಯುವ ಕಲ್ಪನೆಯನ್ನೇ ಹಿಡಿದುಕೊಂಡು ನಾಲ್ಕು ಚಿತ್ರಗಳು ಸಿದ್ಧವಾಗುತ್ತಿವೆ. ಸಂತೆಗೆ ಮೂರು ಮೊಳ ನೇಯುವಂತೆ, ಯಮನ ಕ್ರೇಜ್ ಚಾಲ್ತಿಯಲ್ಲಿರುವಾಗಲೇ ಕಾಸು ಸಂಪಾದಿಸಬೇಕು ಎಂಬ ಅವಸರ ಈ ಪ್ರಯತ್ನಗಳ ಹಿಂದಿದೆ. ಕಥೆಗಳು ರೆಡಿಯಾಗುತ್ತಿರುವ ವೇಗವನ್ನು ಗಮನಿಸಿದರೆ ಇನ್ನು ನಾಲ್ಕು ತಿಂಗಳಲ್ಲಿ ನಾಲ್ಕು ದೇವರ ಚಿತ್ರಗಳು ಅಪ್ಪಳಿಸಲಿವೆ. ಈ ಪೈಕಿ ಒಂದು ಚಿತ್ರದ ಹೆಸರು 'ಜಂಜಂ ಜೂಂ'.

ನೆನಪಿಡಿ. ಇವೆಲ್ಲವೂ ಕಡಿಮೆ ಬಜೆಟ್ ಚಿತ್ರಗಳೇ ಇಲ್ಲಿ ನಾಯಕರಿಲ್ಲ. ಹಾಸ್ಯ ನಟರೇ ಕೇಂದ್ರ ಪಾತ್ರಗಳಾಗಿರುತ್ತಾರೆ. ಹಾಗಾಗಿ ಇವುಗಳಿಂದ ಬೇರಾರಿಗೂ ಲಾಭವಾಗದಿದ್ದರೂ ಹಾಸ್ಯನಟರಿಗಂತೂ ಕೈತುಂಬಾ ಕೆಲಸ ಸಿಗಲಿದೆ.

'ಹಲೋ ಯಮ' ಚಿತ್ರ ನಿರ್ಮಾಪಕರಿಗಷ್ಟೆ ಅಲ್ಲ, ಈ ಚಿತ್ರದ ನಿರ್ದೇಶಕರ ಭಾಗ್ಯದ ಬಾಗಿಲನ್ನೂ ತೆರೆದಿದೆ. ಕಳೆದ 17 ವರ್ಷಗಳಿಂದ, ಸಹಾಯಕ ನಿರ್ದೇಶಕರಾಗಿ, ಅನಂತರ ನಿರ್ದೇಶಕರಾಗಿ ದುಡಿದಿರುವ ಮಹಮ್ಮದ್ ಗೌಸ್, ಯಮನಿಗೆ ಹಲೋ ಎನ್ನುವ ಮುನ್ನ ಮೂರು ಹೊತ್ತಿನ ಊಟಕ್ಕೂ ಒದ್ದಾಡಬೇಕಾದ ಹಂತ ತಲುಪಿದ್ದರು. ಕೆಲವು ದಿನಗಳ ಹಿಂದೆ ಅವರ ಸಂಸಾರ ವಿಷ ತೆಗೆದುಕೊಳ್ಳುವ ತೀರ್ಮಾನ ಮಾಡಿದ್ದೂ ಉಂಟು. ಆಗ ಹೊಡೆಯಿತು ಲಕ್. ಗೌಸ್ ಹೆಸರು ಬದಲಾಯಿಸಿ ಬಾಬು ಆದರು, ಹಲೋ ಯಮನಿಗೆ ಸಹಿ ಹಾಕಿದರು. ಅಭಿರುಚಿ, ಆದರ್ಶ ಮೊದಲಾದ ಪದಗಳಿಗೆ ತಿಲಾಂಜಲಿಯಿತ್ತರು. ಅವರು ಬದುಕಿದರು, ಅಭಿರುಚಿ ಸತ್ತುಹೋಯಿತು.

ದೇವರನ್ನು ಗೇಲಿಮಾಡುವ ಚಿತ್ರಗಳು ಒಂದು ವರ್ಗದ ಜನರ ಭಾವನೆಗಳನ್ನು ನೋಯಿಸೋದಿಲ್ಲವೇ? ಎನ್ನೋದು ಸದ್ಯದ ಪ್ರಶ್ನೆ. ಅಪ್ಪಿತಪ್ಪಿ ಯಾವುದೇ ಜಾತಿಯ ಪ್ರಸ್ತಾಪ ಬಂದರೇ ಸಿಡಿಮಿಡಿಗೊಳ್ಳುವ ನಮ್ಮ ಜನ, ದೈವವೆಂಬ ನಂಬಿಕೆಯ ಬುಡಕ್ಕೆ ಕೊಡಲಿಯೇಟು ಬಿದ್ದಾಗಲೂ ಯಾಕೆ ಸುಮ್ಮನಿರುತ್ತಾರೆ?

ಇದು ಇನ್ನೊಂದು ವಿಚಾರ ಸಂಕಿರಣಕ್ಕೆ ವಸ್ತು. ■

# 'ಜೋಕಾಲಿ' ಯಾರದು?





ಕನ್ನಡ ಚಿತ್ರರಂಗ ಅಪರೂಪಕ್ಕೆ ಕಂಡ ಒಳ್ಳೆ ನಟ ಅನಂತ್ ರಾಜಕೀಯಕ್ಕೆ ಬಂದ ನಂತರ ತಮ್ಮ ಹೆಸರಿನ ಮೇಲೆ ತಾವೇ ಕೆಸರು ಸಿಡಿಸಿಕೊಂಡಿದ್ದು ನಿತ್ಯಸುದ್ದಿ. ಅವರೀಗ ಅವರದೇ ಹಾಸ್ಯ ಚಿತ್ರವೊಂದರ ನಕಲಿ ಶಾಮಣ್ಣನ ಥರಾ ಹಲವರ ಕಣ್ಣಿಗೆ ಕಾಣಿಸುತ್ತಿರುವ ಹೊತ್ತಿಗೇ ಅನಂತ್ ತಮ್ಮ ಪೂರ್ವಾಶ್ರಮದತ್ತ ಮುಖಮಾಡಿದ್ದಾರೆ.

ಅದುವೇ 'ನಂದನವನ ಜೋಕಾಲಿ'. ಈ ಚಿತ್ರದ ಕಥೆಯೂ ತನ್ನದೇ ಎಂದು ಘೋಷಿಸಿಕೊಳ್ಳುವ ಮೂಲಕ ಅನಂತ್ ತಾನೆಂಥ ಅವಕಾಶವಾದಿ ಎನ್ನುವುದನ್ನು ರುಜುವಾತು ಮಾಡಿದ್ದಾರೆ. ಗೊತ್ತಿರುವವರಿಗಷ್ಟೆ ಗೊತ್ತು, ಈ ಕಥೆಯ ಕಲ್ಪನೆ ಸುನಿಲ್‌ಕುಮಾರ್ ದೇಸಾಯಿ ಅವರದು ಎನ್ನೋದು. ಅವರು ಮಾಡಿದ ಏಕೈಕ ತಪ್ಪೆಂದರೆ ಕಥೆಯನ್ನು ಅನಂತ್ ಮುಂದೆ ಸವಿವರವಾಗಿ ಹೇಳಿದ್ದು. ಹಾಗೆ ನೋಡಿದರೆ ದೇಸಾಯಿಗೂ ಸ್ಫೂರ್ತಿಯಾಗಿದ್ದು ಕುರೋಸೋವಾನ 'ಇಕಿರು' ಚಿತ್ರ. ಒಬ್ಬ ಜಿಪುಣ, ಸಾವಿನ ಸಮ್ಮುಖದಲ್ಲಿ ತನ್ನ ಬದುಕಿನ ಧೋರಣೆಯನ್ನೇ ಬದಲಾಯಿಸಿಕೊಂಡು, ಮಕ್ಕಳಿಗೊಂದು ಪಾರ್ಕ್ ನಿರ್ಮಿಸುತ್ತಾನೆ. ಇದರೊಳಗೆ ರಾಜಕೀಯ, ಭ್ರಷ್ಟಾಚಾರ, ನಗರ ಬದುಕಿನ ಕ್ರೌರ್ಯಗಳೆಲ್ಲಾ ಹಾಜರಾಗುತ್ತವೆ.

ಈ ಕಥೆಯನ್ನು ಅನಂತ್ ತಮ್ಮ ರಾಜಕೀಯ ಬದುಕಿನ ಜೀರ್ಣೋದ್ಧಾರಕ್ಕಾಗಿ ಬಳಸಿಕೊಳ್ಳುತ್ತಿದ್ದಾರೆ ಎಂಬ ಸಂದೇಹ ಯಾರಿಗಾದರೂ ಬಾರದೇ ಇರದು. ಆದರೆ ಅದಕ್ಕಾಗಿ ಅವರು ಇನ್ನೊಬ್ಬ ಸೃಜನಶೀಲ ನಿರ್ದೇಶಕರ ಕಥೆಯನ್ನು ಮತ್ತು ಕನಸನ್ನು ಕದಿಯಬಾರದಾಗಿತ್ತು. ಇದು ಅನಂತ್ ಸಲುವಾಗಿಯೇ ಬರೆದ ಕಥೆ ಎಂದು ದೇಸಾಯಿ ಮೂರು ವರ್ಷಗಳಿಂದ ಹೇಳುತ್ತಲೇ ಬಂದಿದ್ದಾರೆ. ತಾನು ಸದ್ಯಕ್ಕೆ ಬಿಜಿ ಎಂದು ಅನಂತ್ ಆ ಯೋಜನೆಯನ್ನು ಮುಂದೂಡುತ್ತಲೇ ಬಂದಿದ್ದಾರೆ. ಈಗ ಇದ್ದಕ್ಕಿದ್ದಂತೆ ಅನಂತ್‌ಗೆ ಉಮೇದು ಬಂದಿದೆ, ಆದರೆ ನಿರ್ದೇಶಕ ಬದಲಾಗಿದ್ದಾನೆ. ಈ ಬಗ್ಗೆ ದೇಸಾಯಿಗೆ ಒಂದು ಮಾತು ತಿಳಿಸುವ ಸೌಜನ್ಯವನ್ನೂ ಅನಂತ್ ತೋರಿಲ್ಲ. ಅದರ ಬದಲಾಗಿ ದೇಸಾಯಿ ಬಗ್ಗೆ ಹಗುರವಾದ ಮಾತನ್ನಾಡಿದ್ದಾರೆ.

'ಅವರು ದೇವಸ್ಥಾನ, ಮಠ ಅಂತ ಓಡಾಡುತ್ತಿದ್ದಾರೆ ಹೊರತು ಸಿನಿಮಾ ಮಾಡುವ ಸೂಚನೆಯನ್ನೇ ತೋರುತ್ತಿಲ್ಲ. ಅವರನ್ನು ನೆಚ್ಚಿಕೊಂಡರೆ ಈ ಸಿನಿಮಾ ಆಗುವುದೇ ಇಲ್ಲ' ಎಂದಿದ್ದಾರೆ.

ನಂದನವವ ಜೋಕಾಲಿ ಚಿತ್ರದ ನಿರ್ಮಾಪಕ ಕೂಡ್ಲು ರಾಮಕೃಷ್ಣ ಎಂದಿದ್ದರೂ, ಒಂದು ಮೂಲದ ಪ್ರಕಾರ ಚಿತ್ರಕ್ಕೆ ಹಣ ಹಾಕುತ್ತಿರುವವರು ಅನಂತ್ ಅಲ್ಲದೆ ಇನ್ನಾರೂ ಅಲ್ಲ. ಆ ಹಣ ಎಲ್ಲಿಂದ ಬಂತು ಅಂತ ಕೇಳುವವರು ಯಾರು?

ಅಂತೂ ಒಂದು ಒಳ್ಳೆಯ ಕಥೆ, ವ್ಯಕ್ತಿಯೊಬ್ಬನ ವರ್ಚಸ್ಸು ಬೆಳೆಸುವುದಕ್ಕೆ ಹಾಗೂ ಸ್ವಾರ್ಥ ಸಾಧನೆಗಾಗಿ ಬಳಕೆಯಾಗುತ್ತಿದೆ. ■

# ಅವರವರ ಭಾವಕ್ಕೆ

ಸ.N.ಪೋಲೇಶಿ

## ರಾಜಕಾರಣಿ



ದೇಶ ಹಾಳಾದರೆ ನನಗೇನಂತೆ
ನನಗೆ ನನ್ನ ಖುರ್ಚಿ ಚಿಂತೆ

## ಉದ್ಯಮಿ



ಬರಿ ಪರಿಸರ ಚಿಂತೆ ಮಾಡಿದರೆ
ನಾನು ಉದ್ಧಾರವಾದಂತೆಯೇ !

## ನೌಕರ



ಸರಕಾರದ ಕೆಲಸ ದೇವರ ಕೆಲಸ
ನನ್ದೇನಿದ್ದರೂ ಸಂಬಳಕ್ಕೆ ಸೀಮಿತ

## ಪೋಲೀಸ್



ನಡೆದಷ್ಟೂ ಕೊಲೆಸುಲಿಗೆ
ನಮಗಂತೂ ಕೈ ಬೆಚ್ಚಗೆ

## ವೈದ್ಯ



ರೋಗಿಗಳ ಸಂಖ್ಯೆ ಹೆಚ್ಚಾಗಬೇಕು
ನಮ್ಮ ಪದವಿ ಖರ್ಚು ಗಿಟ್ಟಬೇಕು

## ಇಂಜಿನಿಯರ್



ನಮ್ಮ ಕಾಮಗಾರಿ ತುಸು ಕಳಪೆ
ಮೋಸವಿಲ್ಲ ಲಂಚಕೊಟ್ಟ ಜನಕೆ

## ನಿರುದ್ಯೋಗಿ




ಗಳಿಸಿದ ಪದವಿ ಯಾರಿಗೆ ಬೇಕು
ಲಗ್ನಪತ್ರಿಕೆಯಲ್ಲಿ ಹಾಕಿದರೆ ಸಾಕು.

## ರೈತ



ಅತ್ತ ಸಾಲಗಾರರ ಕಾಟ
ಇತ್ತ ರಾಜಕೀಯ ಆಟ

BISILA BADUKU Kannada Monthly
SEPTEMBER 1998 RNI No. 67406 / 97 Regd. BGW / 394